

**ಸ**ತ್ಯಲೋಕದಲ್ಲಿರುವ ಸುಪ್ರಶಾಂತವಾದ ದಿವ್ಯ ಧಾಮದ ಸುಂದರವೂ ಭವ್ಯವೂ ಆದ ಕಮಲಾಸನದ ಮೇಲೆ ಕುಳಿತು ಹಗಲಿಡೀ ಸೃಷ್ಟಿ ಕಾರ್ಯವನ್ನು ಮಾಡಿ ಮಾಡಿ ಬ್ರಹ್ಮದೇವನು ತುಂಬಾ ಬಳಲಿದನು. ಕಲ್ಪಾಂತವು ಸಮಾಪಿಸಿ ಸಂಜೆಯಾಗಿ ಕತ್ತಲೆ ತಲೆಹಾಕುವಾಗ ಅವನನ್ನು ನಿದ್ರೆಮತ್ತಿನ ತೂಕಡಿಕೆ ಆಕ್ರಮಿಸಿತು. ಆ ತೂಕಡಿಕೆಯಿಂದ ಅವನು ಆಗಾಗ ಆಕಳಿಸುತ್ತಿರಲು, ಆ ಗಾಳಿಯಿಂದ ಪರ್ವತ ಶಿಖರಗಳು ಸುರುಟಿ ಚಿರುಟಿ ಅಗ್ನಿಕಣಗಳು ಹೊರಗೆ ಹಾರುತ್ತಿದ್ದುವು. ಅವನಿಗೆ ಪೂರ್ತಿ ನಿದ್ದೆ ಬಂದು ಕಣ್ಣುಮುಚ್ಚಿಕೊಂಡಾಗ ಆಕಾಶದಲ್ಲಿ ಗುಂಪು ಗುಂಪಾಗಿ ಸೇರಿಕೊಂಡಿದ್ದ ಪ್ರಳಯ ಮೇಘಗಳು ಸುತ್ತೂ ಹರಡಿ ಆನೆಗಳ ಸೊಂಡಿಲು ಗಾತ್ರದ ವರ್ಷಧಾರೆಗಳನ್ನು ಸುರಿಸಿ ಲೋಕವನ್ನೆಲ್ಲಾ ಪೂರ್ತಿ ಜಲಮಯ ಮಾಡಿದುವು. ಬ್ರಹ್ಮನಿಗೆ ಗಾಢನಿದ್ರೆ.

ಬ್ರಹ್ಮನಿಗೆ ನಿದ್ರೆಬರುವ ರಾತ್ರಿಯ ಕಾಲವು ಲೋಕಗಳಿಗೆಲ್ಲಾ ಪ್ರಳಯಕಾಲವಾಯಿತು. ಆನಂತರ ನೂತನ ಕಲ್ಪಾರಂಭದ ಸಮಯವು ಸಮೀಪಿಸತೊಡಗಿತು. ಮತ್ತೆ ಹೊಸ ಜಗತ್ತು ಹುಟ್ಟಲಿದ್ದು, ಬೆಳಕು ಪಸರಿಸಲಿರುವ ಸಮಯದಲ್ಲಿ ಸರಸ್ವತೀದೇವಿ ವೀಣೆಯನ್ನೆತ್ತಿಕೊಂಡು ಸ್ವರಾಲಾಪನೆ ಮಾಡುತ್ತ, ಎಲ್ಲೆಲ್ಲಿಯೂ ಭೂಪಾಳರಾಗವನ್ನು ಹರಡಿಸಿಕೊಂಡಿರಲು, ಬ್ರಹ್ಮದೇವನು ಎಚ್ಚರಕ್ಕೆ ಬಂದು ಸರಸ್ವತಿಯನ್ನು ನೋಡಿ ತಲೆದೂಗಿದನು. ತನ್ನ ನಾಲ್ಕು ಮುಖಗಳಿಂದಲೂ ನಾಲ್ಕು ದಿಕ್ಕುಗಳನ್ನೂ ಪರೀಕ್ಷಿಸಿ ನೋಡಿದನು.

ಕೆಳಭಾಗದಲ್ಲಿ ಜಗತ್ತು ಪೂರಾ ನೀರಿನ ಮಯವಾಗಿ, ಆ ನೀರಿನ ಮೇಲೆ ದೊಡ್ಡ ದೊಡ್ಡ ಪರ್ವತಗಳಂತಹ ತೆರೆಗಳು ಅಲ್ಲಕಲ್ಲೋಲಗೊಂಡಿದ್ದುವು. ಆ ಮಹಾ ಮಹಾ ತರಂಗಗಳ ನಡುವೆ ಒಂದು ಕಡೆಯಲ್ಲಿ ಬೆಳ್ಳಗಿನ ಕಾಂತಿರೇಖೆ ಲಾಸ್ಯವಾಡುವುದನ್ನು ಬ್ರಹ್ಮನು ನೋಡಿದನು. ಆ ಕಾಂತಿಯು ನಡುವೆ ತರಂಗಗಳ ಮೇಲೆ ತೇಲುತ್ತಾ ದೊಡ್ಡದೊಂದು ಆರಳಿಯೆಲೆಯಿರುವುದು ಕಂಡಿತು.

## ೧. ವಟಪತ್ರ ಬಾಲ ಗಣಪತಿ



ನೋಡ ನೋಡುತ್ತಿರಲು ಅದರ ಮೇಲೆ ಚಂದ್ರಬಿಂಬದಂತಹ ಬಾಲಕನು ಮಲಗಿಕೊಂಡು, ಬಲಗಾಲಿನ ಹೆಬ್ಬೆರಳನ್ನು ಬಾಯೊಳಗಿಟ್ಟು ಚಪ್ಪರಿಸುತ್ತಿರುವುದನ್ನು ನೋಡಿದನು.

ಬ್ರಹ್ಮನು ಕೈಜೋಡಿಸಿ ಕಣ್ಣುಮುಚ್ಚಿ ಆ ಪರ ಬ್ರಹ್ಮನ ಬಾಲರೂಪವನ್ನು ಧ್ಯಾನಿಸಿ ಕಣ್ಣು ತೆರೆದನು. ಆಗ ಕಂಡ ದೃಶ್ಯ ವಿಚಿತ್ರವಾಗಿತ್ತು.

ಮೊದಲು ನೋಡಿದ ಬಾಲರೂಪನು ವಿಶ್ವ ವಿರಾಟ್ ಸ್ವರೂಪನಾದ ಪರಬ್ರಹ್ಮನೇ ಎಂದು ಬ್ರಹ್ಮನಿಗೆ ಅನುಭವಪೂರ್ವಕವಾಗಿ ಗೊತ್ತಿರುವ ಸಂಗತಿ. ಆದರೆ ಈಗ ಆ ಹುಡುಗನ ತಲೆ ಆನೆಯ ತಲೆಯನ್ನು ಹೋಲುತ್ತ, ಪುಟ್ಟ ಸೊಂಡಿಲಿನಿಂದ ಬಲದ ಪಾದವನ್ನು ಹಿಡಿದು ಬಾಯೊಳಗೆ ಇಟ್ಟುಕೊಳ್ಳುವಂತೆ ಕಾಣುತ್ತಿತ್ತು.

ಆ ಮುಖವು ಪ್ರಸನ್ನವಾಗಿತ್ತು. ಬಾಲಕನು ಚಂದ್ರಬಿಂಬದಂತೆಯೇ ಹೊಳೆಯುತ್ತಿದ್ದನು. ಆತನಿಗೆ ನಾಲ್ಕು ಕೈಗಳಿದ್ದುವು. ಇದೇನು ವಿಚಿತ್ರವೆಂದು ಬ್ರಹ್ಮನು ಆಶ್ಚರ್ಯಪಡುತ್ತಿದ್ದಂತೆಯೇ ವಟಪತ್ರ ಶಾಯಿಯಾದ ಆ ಗಜಮುಖದ ಬಾಲಕನು ಅದೃಶ್ಯನಾಗಿ, ಆ ಪ್ರದೇಶದಲ್ಲಿ ಎತ್ತರವಾಗಿ ಎದ್ದ ಮಣ್ಣಿನ ರಾಶಿ ಕಂಡುಬಂತು.

ಬ್ರಹ್ಮನು ತಾನು ಕಂಡ ವಿಚಿತ್ರ ಬಾಲಕನ ರೂಪವು ಅದೇನೋ ಭ್ರಮೆಯೆಂದುಕೊಂಡು ತನ್ನ ಸೃಷ್ಟಿಕಾರ್ಯಕ್ಕೆ ತೊಡಗಿದನು. ಕ್ರಮಕ್ರಮವಾಗಿ ನೀರಿನಿಂದ ವಿಸ್ತಾರವಾದ ಭೂಭಾಗಗಳು ಏಳುತ್ತಾ, ಉಳಿದ ನೀರು ಸಮುದ್ರ ಭಾಗಗಳಾಗಿಯೂ, ಗಡ್ಡೆಗಟ್ಟಿದ ಪರ್ವತಗಳಾಗಿಯೂ ಏರ್ಪಟ್ಟುವು. ಬ್ರಹ್ಮನು ಸಂಕಲ್ಪಿಸಿಕೊಂಡಂತೆ ಭೂಭಾಗದಲ್ಲಿ ಗುಡ್ಡಬೆಟ್ಟಗಳೆದ್ದುವು. ಅವನು ಒಂದೊಂದನ್ನೂ ಸಂಕಲ್ಪಿಸಿ ಕಮಂಡಲುವಿನ ನೀರು ತೆಗೆದು ಪ್ರೋಕ್ಷಿಸಿದಂತೆ ನದಿಗಳು ಹುಟ್ಟಿದುವು. ಸಸ್ಯಗಳೂ, ಗಿಡಮರ ಬಳ್ಳಿಗಳೂ, ಖನಿಜಗಳೂ, ಬೇರೆ ಬೇರೆ ದ್ರವ್ಯಗಳೂ ಬ್ರಹ್ಮನಿಂದ ಸಂಕಲ್ಪಿಸಲ್ಪಟ್ಟು ಹುಟ್ಟಿದುವು. ಅನಂತರ ಜೀವರಾಶಿಗಳನ್ನು ಸೃಷ್ಟಿಸಲು ತೊಡಗಿದನು. ಮೊದಲು ಸಮುದ್ರದಲ್ಲಿ ನದಿಗಳಲ್ಲಿ ಮೀನು ಮೊದಲಾದ ಜಲಚರಗಳನ್ನು ಸೃಷ್ಟಿಸಿದನು. ಭೂಮಿಯ ಮೇಲೆ ಜಂತುಜಾಲಗಳನ್ನೂ, ಕ್ರಿಮಿ ಕೀಟಕಾದಿಗಳನ್ನೂ, ಖೇಚರಗಳನ್ನೂ ಸೃಷ್ಟಿ ಮಾಡಿದನು. ಅದೆಲ್ಲ ಆಗಿ ಕಳಕಳಿಸುವ ಜಗತ್ತಿನಲ್ಲಿ ಮನುಷ್ಯರನ್ನು ಸಂಕಲ್ಪಿಸಿ ಕಮಂಡಲೋದಕವನ್ನು ನಾಲ್ಕು ಸುತ್ತಲೂ ಪ್ರೋಕ್ಷಿಸಿದನು.

ಆಗ ಸರಸ್ವತೀದೇವಿ ವೀಣೆ ಬಾರಿಸಿ ಕೊಂಡೇ ಇದ್ದಳು. ಆ ವೀಣೆಯಿಂದ ಹೊರಟ ಸ್ವರಗಳೇ ಜಗತ್ತಿನ ಪ್ರಾಣಿಕೋಟಿಗಳಲ್ಲಿ ನಾನಾವಿಧ ವಾಗಿ ಧ್ವನಿಸಿಕೊಂಡಿದ್ದುವು. ಹೀಗಿರಲು ಒಂದು ಗತಿಯಲ್ಲಿ ಯಾವ ಕಾರಣದಿಂದಲೋ ಅವಳ ವೀಣೆ ಯಿಂದ ಅಪಶ್ರುತಿ ಹೊರಡತೊಡಗಿತು. ಸರಸ್ವತಿ

ಬೆರಗಾಗಿ ಅತ್ತಿತ್ತ ನೋಡಿದಳು. ಬ್ರಹ್ಮನು ತನ್ನ ಅರ್ಧಾಂಗಿಯ ತಬ್ಬಿಬ್ಬುತನ ವನ್ನು ನೋಡಿ ಅರ್ಥವಾಗದೆ, ಅವಳು ತೋರಿಸಿ ದಂತೆ ಕಮಲಾಸನದಿಂದ ಬಗ್ಗಿ ಕೆಳಗೆ ನೋಡಿ, ತಾನೂ ಗಾಬರಿಯಾಗಿ ಹೋದನು !

ಪರ್ವತಗಳು ಆಚೀಚೆ ವಾಲುತ್ತ, ಶಿಖರಗಳನ್ನು ಅಗಲಿಸಿಕೊಂಡು ಆಕಾಶದಲ್ಲಿ ಕೊಡೆಯಂತೆ ಹರಡುತ್ತ, ತಮ್ಮ ಬುಡಕ್ಕೆ ಸೂರ್ಯರಶ್ಮಿ ಬೀಳದಂತೆ ಚಲಿಸಿ ಕೊಂಡಿದ್ದುವು. ಇದೆಂತಹ ವಿಪರೀತ !

ಸೀದಾಹರಿದು ಸಾಗರ ಸೇರಬೇಕಾಗಿದ್ದ ನದಿಗಳು ಸಾಗರಕ್ಕಿಂತ ಎತ್ತರವಾದ ಪ್ರದೇಶಕ್ಕೆ ಏರಲು ನೋಡುತ್ತಿದ್ದುವು. ವೃಕ್ಷಗಳು ತಲೆಕೆಳಗಾಗಿ, ಬೇರು ಗಳು ಆಕಾಶವನ್ನು ಒದೆಯುತ್ತಿದ್ದುವು.

ಸಮುದ್ರ ತರಂಗಗಳ ಮೇಲೆ ಜಲಚರಗಳು ತೇಲುತ್ತ ಕುಪ್ಪಳಿಸಿ ಹಾರುತ್ತಿದ್ದುವು. ಕೆಲವು ನೆಟ್ಟಗೆ ಆಕಾಶಕ್ಕೇ ಏರುತ್ತಿದ್ದುವು, ಬೀಳುತ್ತಿದ್ದುವು. ಕೆಲವು ರೆಕ್ಕೆ ಬಂದ ಪಕ್ಷಿಗಳ ಹಾಗೆ ಹಾರುತ್ತಿದ್ದವು.

ಇಷ್ಟೇ ಅಲ್ಲ, ಪ್ರಾಣಿಕೋಟಿಗಳು ಕೂಡಾ ತುಂಬಾ ಅನರ್ಥವಾಗಿದ್ದುವು. ಕೆಲವಕ್ಕೆ ತಲೆಗಳೇ ಇಲ್ಲ. ಕೆಲವು ಪ್ರಾಣಿಗಳಿಗೆ ಹಿಂದಿನ ಕಾಲುಗಳಿಲ್ಲ. ಒಂದೇ ಕಾಲಿನ ಪ್ರಾಣಿಗಳು ಕೆಲವು. ಮೂರು ಕಾಲಿನ ಪ್ರಾಣಿಗಳೂ, ಕಿವಿ, ಕಣ್ಣುಗಳೆಲ್ಲಾ ಇದ್ದು ಬಾಯಿಯೇ ಇಲ್ಲದ ಜೀವಿಗಳೂ, ತಲೆಯಲ್ಲಿ ಬಾಲವಿರುವಂಥವೂ, ಬಾಲಕ್ಕೆ ತಲೆ ಅಂಟಿಕೊಂಡ ಜಂತುಗಳೂ ಕಾಣುತ್ತಿದ್ದುವು. ಪಕ್ಷಿಗಳು ರೆಕ್ಕೆ ಗಳಿಲ್ಲದೆ ಕುಪ್ಪಳಿಸುತ್ತಿದ್ದುವು. ಅನೇಕ ಪಕ್ಷಿಗಳು ಹೊರಳಾಡಿಕೊಂಡಿದ್ದುವು.

ಮನುಷ್ಯರಲ್ಲಿ ಕೆಲವರಿಗೆ ಎರಡು ತಲೆಗಳಿದ್ದುವು. ಅವುಗಳಲ್ಲಿ ಒಂದು ತಲೆ ಹೆಣ್ಣಿನದು. ಎರಡನೆಯದು ಮೀಸೆ ಮೊಳೆತ ಗಂಡಿನದು. ಶರೀರವೂ ಯದ್ವಾ ತದ್ವಾ ಆಗಿತ್ತು.

ಹಲವು ಗಂಡು ಮನುಷ್ಯರು ಗೇಣುದ್ದ ಮೊಳದುದ್ದವಾಗಿದ್ದರು. ಸ್ತ್ರೀಯರು ದೊಡ್ಡ ಆನೆಗಳ ಹಾಗೆ, ತಾಳೇ ಮರಗಳ ಹಾಗೆ ಕಾಣುತ್ತಿದ್ದರು.





ಬೆನ್ನಿಗೆ ತಲೆಗಳನ್ನು ಅಂಟಿಸಿಕೊಂಡಂತಿರುವವರೂ, ನಾಲ್ಕು, ಮೂರು, ಒಂದು ಕಾಲುಳ್ಳವರೂ, ಹೊಟ್ಟೆಯಲ್ಲೇ ದೊಡ್ಡ ಬಾಯಿಯುಳ್ಳ ಕಬಂಧ ಗಾತ್ರರೂ ಕರ್ಕಶವಾಗಿ ಆಕ್ರಂದನ ಮಾಡಿಕೊಂಡಿದ್ದರು.

ಅನೇಕ ಬಗೆಯ ಮೃಗಗಳು ತಲೆಯೆತ್ತಿ ಗೋಳಿಡುತ್ತಿದ್ದುವು. ಮತ್ತೆ ಹಲವು ಮೂಕವಾಗಿ ಆಕಾಶವನ್ನು ನೋಡುತ್ತಿದ್ದುವು. ಸೃಷ್ಟಿಕರ್ತನಾದ ಬ್ರಹ್ಮನನ್ನು ಎಲ್ಲವೂ ನಿಂದಿಸುತ್ತಿರುವಂತೆ, ಕೋಪ ದಿಂದ ಕೈಕಾಲು ಬಡಿದುಕೊಳ್ಳುವಂತೆ ಕಾಣುತ್ತಿದ್ದುವು

ಒಬ್ಬ ಗೇಣುದ್ದದ ಗಂಡಸು, ತಾಳೇ ಮರದ ಹಾಗೆ ವಿಕೃತಾಕಾರಿಣಿಯಾದ ಸ್ತ್ರೀಯನ್ನು ತೋರಿಸುತ್ತ "ಓ! ಬ್ರಹ್ಮದೇವಾ! ಇಂತಹ ಸ್ತ್ರೀಯೊಂದಿಗೆ ನಾನು ಹೇಗೆ ಸಂಸಾರ ಸಾಗರದಲ್ಲಿ ಈಜಾಡಿಯೇನು? ನಮಗೆಲ್ಲಾ ಇಂಥಾ ದುರ್ಗತಿ ಯನ್ನು ಏಕೆ ತಂದಿಟ್ಟೆ?" ಎಂದು ಆಕಾಶಕ್ಕೆ ತಲೆ ಚಾಚಿ ಕೂಗುತ್ತಿದ್ದನು.

"ನಾಲ್ಕು ತಲೆಗಳನ್ನು ಇಟ್ಟುಕೊಂಡು, ಅಸಲು ತಲೆ ಎಂಬುದೇ ಇಲ್ಲದ ಓ ಬ್ರಹ್ಮದೇವಾ! ನಮ್ಮನ್ನೆಲ್ಲಾ ಹೀಗೆ ಹುಟ್ಟಿಸಿದೆಯಲ್ಲಾ! ಹೇಗೆ ಸಾಯಬೇಕು ನಾವು?" ಎಂದು ವಿಕೃತಾಕಾರಿಗಳಾದ ಮನುಷ್ಯರು ಮಾಡುವ ಆಕ್ರಂದನಗಳು ಬ್ರಹ್ಮನ ಕರ್ಣಗಳನ್ನು ನೋಯಿಸಿದುವು.

ಬ್ರಹ್ಮನ ನಾಲ್ಕು ತಲೆಗಳೂ ಗಿರ್ರನೆ ತಿರುಗಿದುವು. ಅವನ ಎಂಟು ಕಣ್ಣುಗಳಿಗೂ ಕತ್ತಲಿಟ್ಟಿತು. ಏನೂ ತೋರದೆ ಬ್ರಹ್ಮನು ಸರಸ್ವತಿಯ ಮುಖವನ್ನು ನೋಡಿದನು. ಬಿಳಿಚಿಕೊಂಡ ಬ್ರಹ್ಮನ ನಾಲ್ಕು ಮುಖಗಳನ್ನೂ ನೋಡಿ, ಸರಸ್ವತಿ ಸರಸಭಾವನೆಯ ಮುಗುಳ್ನಗುವನ್ನು ಮಾತ್ರ ಸೂಸಿದಳು.

"ಇದೇಕೆ ಹೀಗಾಯಿತು? ಸಕ್ರಮವಾದ ಸೃಷ್ಟಿಯನ್ನು ಮಾಡಲಿಕ್ಕಾಗಿಯೇ, ಸತ್ಸಂಕಲ್ಪ ದಿಂದಲೇ ನಡೆಸಿದ್ದೇನಲ್ಲ? ಹೀಗೆ ವಿಪರೀತ ವಾಯಿತು ಏತರಿಂದ?" ಎಂದು ತನಗೆ ತಾನೇ ಹೇಳಿಕೊಂಡಂತೆ, ತಲೆಗಳನ್ನು ಮೇಲೆತ್ತಿ ಗಟ್ಟಿಯಾಗಿ ಬ್ರಹ್ಮನು ಕೂಗಿದನು. ಅವನ ಪ್ರಶ್ನೆ ದಶ ದಿಶೆ ಗಳಲ್ಲಿಯೂ ಮಾರ್ಮೊಳಗಿತು.

ಒಂದೂ ತೋರದೆ, ಭ್ರಮಾವೀಕ್ಷಣದಿಂದ ದಿಕ್ಕು ಗಳನ್ನು ನೋಡುವ ಬ್ರಹ್ಮನಿಗೆ, ದೊಡ್ಡದೊಂದು ಪ್ರಕಾಶವು ಕಾಣಲು ತೊಡಗಿತು. ಆ ಪ್ರಕಾಶದಲ್ಲಿ ಅದ್ಭುತವಾದೊಂದು ಮೂರ್ತಿ ಗೋಚರವಾಯಿತು. ಆ ಮೂರ್ತಿಯನ್ನು ನೋಡುತ್ತಿದ್ದಂತೆ ಮೊತ್ತ ಮೊದಲು ತಾನು ವಟಪತ್ರ ಶಾಯಿಯಾದ ಅದ್ಭುತ ಬಾಲಕನನ್ನು ನೋಡಿದ್ದು ನೆನಪಾಯಿತು ಬ್ರಹ್ಮನಿಗೆ. ಅದನ್ನು ತಾನು ಏನೋ ಭ್ರಮೆಯೆಂದು ಕೊಂಡು ನಿರ್ಲಕ್ಷ್ಯಮಾಡಿದ್ದು ತಪ್ಪಾಯಿತೇನೋ?

ಆ ಪ್ರಕಾಶದ ನಡುವೆ ಗೋಚರವಾದ ಮೂರ್ತಿಗೆ ಆನೆಯ ತಲೆಯಿದ್ದಿತು. ನಾಲ್ಕು ಕೈಗಳಲ್ಲಿ ಅಂಕುಶ, ಕಲಶ, ಪರಶು, ಪಾಶಗಳನ್ನು ಧರಿಸಿಕೊಂಡಿದ್ದನು.



ಪೂರ್ಣಚಂದ್ರನಂತೆಯೇ ಪ್ರಕಾಶಿಸುತ್ತಿದ್ದನು. ಬೆಳ್ಳಗಾಗಿರುವ ಅವನ ಉತ್ತರೀಯವು ಆಕಾಶದಲ್ಲೆಲ್ಲಾ ಹರಡಿ ರಪರಪವೆಂದು ಹಾರಾಡಿಕೊಂಡಿತ್ತು.

ಆ ಮೂರ್ತಿಯನ್ನು ನೋಡಿ ಸರಸ್ವತಿ ನವೋತ್ಸಾಹದಿಂದ ಓಂಕಾರನಾದವನ್ನು ಎಬ್ಬಿಸಿ ವೀಣೆ ಮೀಂಟತೊಡಗಿದಳು. ದಶದಿಶೆಗಳಲ್ಲಿಯೂ ಆ ಓಂಕಾರವು ಪ್ರತಿಧ್ವನಿಸತೊಡಗಿತು. ಸರಸ್ವತೀ ದೇವಿಯ ಬೆರಳುಗಳು ತನ್ನಂತಾನೇ ನಾದ ನಾಮ ಕ್ರಿಯಾರಾಗವನ್ನು ಮೀಂಟುತ್ತಾ, ಮಾಯಾಮಾಳವ ಗೌಳ ರಾಗಕ್ಕೆ ಮಾರ್ಪಡುತ್ತಾ, ಹಂಸಧ್ವನಿ ರಾಗವನ್ನು ಆಕ್ರಮಿಸಿಕೊಂಡುವು.

ಗಜಾನನನಾಗಿ ಸಾಕ್ಷಾತ್ಕರಿಸಿದ ಆ ದಿವ್ಯಮೂರ್ತಿ, ವಟಪತ್ರದ ಮೇಲೆ ನಿಂತುಕೊಂಡು ಬ್ರಹ್ಮನನ್ನು ಅಭಯಮುದ್ರೆಯಿಂದ ಆಶೀರ್ವದಿಸಿದನು. ಅವನ ಸುತ್ತಲೂ ಶರತ್ಕಾಲದ ಹುಣ್ಣಿಮೆಯದಿನದ ಬೆಳುದಿಂಗಳಂತಹ ಶಾಂತಪ್ರಕಾಶವು ಆವರಿಸಿಕೊಂಡಿದ್ದಿತು.

"ಬ್ರಹ್ಮದೇವಾ ! ಮೊದಲು ನೀನು ನನ್ನನ್ನು ಕಂಡೂ ಕುರುಡನಾದೆ ! ಈಗ ತಪ್ಪು ತಿಳಿದು ಪಶ್ಚಾತ್ತಾಪ ತೋರಿದೆ. ಅಂತಲೇ ಹರಸಿದ್ದೇನೆ" ಎಂದು ಗಜ ಮುಖನಿಂದ ಮಾತುಗಳು ದುರಿದುವು.

ಬ್ರಹ್ಮನು ನಾಲ್ಕು ಕೈಗಳನ್ನೂ ಇಜ್ಜೋಡಾಗಿ ಜೋಡಿಸಿ ನಮಸ್ಕರಿಸುತ್ತ "ಮಹಾನುಭಾವಾ ? ಅದ್ಭುತ ಮೂರ್ತಿಯಾದ ನೀನು ಯಾರು ? ನೀನು ಯಾರೆಂದು ತಿಳಿಯಲು ಅಶಕ್ತನಾದ ಈ ಅಜ್ಞಾನಿಯನ್ನು ಅನುಗ್ರಹಿಸು.' ನೀನೇ ಈ ಸೃಷ್ಟಿ ವಿಕಾರಗಳನ್ನು ಹೋಗಲಾಡಿಸಬೇಕು." ಎಂದು ಪ್ರಾರ್ಥಿಸಿದನು.

"ಅಪ್ಪಾ, ಬ್ರಹ್ಮದೇವಾ ! ಸಂಕಲ್ಪದ ಹಿಂದೆಯೇ ವಿಕಲ್ಪವೂ ಬೆಂಬತ್ತಿಕೊಂಡಿರುತ್ತದೆ. ಅದುವೇ ವಿಘ್ನ. ಆ ವಿಘ್ನವನ್ನು ಅಡ್ಡಗಟ್ಟಿ ತಡೆದು ಸಂಕಲ್ಪಿತ ಕಾರ್ಯವನ್ನು ನೆರವೇರಿಸುವವನಾದ ನಾನು ವಿಘ್ನೇಶ್ವರನಾಗಿದ್ದೇನೆ. ವಿಘ್ನಗಳಿಗೆಲ್ಲಾ ನಾಯಕತ್ವವನ್ನು ವಹಿಸಿ, ವಿಕಲ್ಪವನ್ನು ನನ್ನ ಕೊಡಲಿಯಿಂದ ಭೇದಿಸಿ, ಸಂಕಲ್ಪಿಸಿದ ಕಾರ್ಯವನ್ನು ತುಂಬಿದ ಕಲಶದ ಹಾಗೆ ಜಯಪ್ರದವಾಗಿಸುವ ವಿಘ್ನ ವಿನಾಯಕನಾಗಿರುವವನು ನಾನು. ಈ ಶ್ವೇತ ವರಾಹಕಲ್ಪದಲ್ಲಿ ನನ್ನನ್ನು ನೆನೆಸದೆ ಯಾವ ಕಾರ್ಯವೂ ಸುಗಮವಾಗಿ ಈಡೇರಲಾರದೆಂಬುದನ್ನು ಸೂಚಿಸಲಿಕ್ಕೇ ಈ ಕಲ್ಪೋದಯ ಕಾಲದಲ್ಲಿ ನನ್ನ ಬಾಲರೂಪದಿಂದ ನಿನಗೆ ದರ್ಶನವಿತ್ತೆ. ನೀನು ನಿದ್ದೆಯ ಮಂಪರಿನಲ್ಲಿ ಲಕ್ಷಿಸದೆ ಹೋದೆ. ನಿನ್ನ ಸೃಷ್ಟಿಯ ಮೂಲವಸ್ತುಗಳಾದ ಪಂಚಭೂತಗಳೆನಿಸುವ, ಪೃಥ್ವಿ, ನೀರು, ಅಗ್ನಿ, ವಾಯು, ಆಕಾಶವೆಂಬ. ಭೂತಗಣಗಳಿಗೆ ನಾನೇ ಅಧಿಪತಿಯಾಗಿರುವೆನು. ಆಹಾರಧಾನ್ಯಗಳನ್ನು ಕೊಟ್ಟು ಫಲಿಸುವ ಸಸ್ಯಗಳನ್ನು ನಾಶನಮಾಡುವ ಮದೋನ್ಮತ್ತವಾದ ಆನೆಗಳಂತಹ ವಿಘ್ನಗಳನ್ನು ನನ್ನ ಹದನಾದ



ಅಂಕುಶದಿಂದ ಹದ್ದುಮೀರದಂತೆ ಮಾಡಿ, ಅವುಗಳನ್ನು ನನ್ನ ಬಲವಾದ ಪಾಶದಿಂದ ಎಳೆದು ಕಟ್ಟುವ ನನ್ನನ್ನು ವಿಘ್ನೇಶ್ವರನೆಂದೇ ಕರೆ!" ಎಂದು ವಿಘ್ನೇಶ್ವರನು ಮೇಘ ಗಂಭೀರಧ್ವನಿಯಿಂದ ಹೇಳಿದನು. ಆಗ ಬ್ರಹ್ಮನು ವಿಘ್ನೇಶ್ವರನಿಗೆ ಕೈಮುಗಿದು, "ದೇವಾ, ವಿಘ್ನೇಶ್ವರ! ನಾನು ಸೃಷ್ಟಿಸಿದ ಸವ್ಯವಾದುವೆಲ್ಲಾ ಅಪಸವ್ಯವಾಗಿ ಹೋದುವು. ಇಷ್ಟೊಂದು ವಿಪರೀತವಾಗಲು ನೀನೇ ಕಾರಣ ನೆನ್ನುವೆಯಾ? ಈಗ ನೋಡಲಾಗದಂತಹ ವಿವಿಧ ವಕ್ರತೆಗಳೆಲ್ಲಾ ಹೋಗಿ ಸೃಷ್ಟಿಗಳು ಸರಿಯಾಗುವ ಮಾರ್ಗ ಹೇಗೆ?" ಎಂದು ಕೇಳಿದನು.

"ಬಹ್ಮದೇವಾ! ವಿಘ್ನಗಳೆಂದರೆ ಏನೆಂದು ನಿನಗೆ ತಿಳಿಯಬೇಕೆಂತಲೇ ಹೀಗೆಲ್ಲಾ ನಡೆಯಿತು. ಆಗ ನನ್ನನ್ನು ಕುರಿತು ನೀನು ಆಲೋಚಿಸಲೇ ಇಲ್ಲ. ನನ್ನನ್ನು ಕುರಿತು ಆಲೋಚಿಸುವುದೆಂದರೆ ವಿಘ್ನಗಳನ್ನು ಕುರಿತು ಮುಂಜಾಗ್ರತೆ ತೆಗೆದುಕೊಳ್ಳುವುದೆಂದೇ ಅರ್ಥ. ಅಜ್ಞಾನವನ್ನು ಎಳೆದುಕೊಳ್ಳುವ ನಾನು ಅಜ್ಞಾನ ಸ್ವರೂಪನು. ನಿನ್ನಿಂದ ತೊಡಗಿ, ಬುದ್ಧಿಯಿರುವ ಪ್ರತಿ ಜೀವಿಯೂ ಕಾರ್ಯರಂಗಕ್ಕೆ ಇಳಿಯುವ ಮೊದಲು, ವಿಘ್ನವು ಬಾರದಂತೆ ಜಯಪ್ರದವಾಗಲು ತಕ್ಕ ಜಾಗ್ರತೆಯನ್ನೂ, ಜ್ಞಾನವನ್ನೂ ಪಡೆದಿರಲೇ ಬೇಕು. ಆನೆ ತನ್ನ ಅಡಿಗಳನ್ನು ತೆಗೆದಿಡುವುದಕ್ಕೆ ಮೊದಲು, ನೆಲದ ಗಟ್ಟಿತನವನ್ನು ತಿಳಿದುಕೊಂಡೇ ನಡೆಯುತ್ತದೆ. ಪ್ರಾಣಿಗಳಲ್ಲಿ ಆನೆಯ ಬುದ್ಧಿಬಲವು ಅದರ ಹಾಗೆಯೇ ಬಹಳ ದೊಡ್ಡದು. ಆನೆಯ ಹಾಗೆ ವಿಶೇಷ ಮೇಧಸ್ಸಿನೊಂದಿಗೆ ಕೂಡಿರಬೇಕೆಂತಲೇ ನಾನು ಗಜಾನನನಾಗಿದ್ದೇನೆ. ನೀನು ನಿದ್ದೆಯಲ್ಲಿದ್ದ ಕಾಲದಲ್ಲಿ ಸೋಮಕಾಸುರನು ಬಂದು ನಿನ್ನ ನಾಲ್ಕು ವೇದಗಳನ್ನೂ ಅಪಹರಿಸಿಕೊಂಡು ಹೋಗಿ ಸಮುದ್ರದ ಅಡಿಯಲ್ಲಿ ಅಡಗಿಸಿಟ್ಟನು. ಮಹಾವಿಷ್ಣು ಮತ್ಸ್ಯಾವತಾರವನ್ನೆತ್ತಿ ಸೋಮಕಾಸುರನನ್ನು ಸಂಹರಿಸಿ ನಿನ್ನ ವೇದಗಳನ್ನು ಭದ್ರವಾಗಿ ತಂದು ವಟಪತ್ರದ ಮೇಲೆ ಮಲಗಿದ್ದ ನನ್ನ ಹತ್ತಿರ ಇಟ್ಟಿದ್ದಾನೆ. ಇಕೋ, ಅವುಗಳನ್ನು ತಿರುಗಿ ಪಡೆದು ಸೃಷ್ಟಿಕಾರ್ಯವನ್ನು ನಿರ್ವಹಿಸು" ಎಂದು ಹೇಳಿ ವಿಘ್ನೇಶ್ವರನು ಬ್ರಹ್ಮನಿಗೆ ಚತುರ್ವೇದಗಳನ್ನು ಕೊಟ್ಟನು.

ಬ್ರಹ್ಮನು ಅವುಗಳನ್ನು ಪಡೆದುಕೊಂಡು, ಪರಮಾನಂದದಿಂದ ವಿಘ್ನೇಶ್ವರನನ್ನು ಸ್ತುತಿಸುತ್ತ, "ಓ ದಯಾನಿಧಿಯೇ! ಈ ವೇದಗಳನ್ನೂ ನಾನು ಮರೆತಿದ್ದೆ. ಇನ್ನು ಮೇಲೆ ಪ್ರತಿಕಲ್ಪಾಂತದಲ್ಲಿಯೂ ಸೃಷ್ಟಿ ಸಂಕಲ್ಪ ಮಾಡುವ ಮೊದಲು ನಿನ್ನನ್ನು ಧ್ಯಾನಿಸಿ, ಮನಸಾರೆ ಪೂಜಿಸಿ ಆಮೇಲೆಯೇ ಕಾರ್ಯರಂಗಕ್ಕೆ ಇಳಿಯುವ ಹಾಗೆ ವರವನ್ನು ಅನುಗ್ರಹಿಸು. ಈ ವಕ್ರಸೃಷ್ಟಿಯನ್ನು ಉಪಸಂಹರಿಸುವಹಾಗೆ ಮಾಡು ಗಣೇಶಾ!" ಎಂದು ಬೇಡಿದನು. ವಿಘ್ನೇಶ್ವರನ ಪ್ರಭಾವದಿಂದ ಅದುವರೆಗೆ ನಡೆದ

ಸೃಷ್ಟಿಯ ವಕ್ರ ಅಕ್ರಮಗಳೆಲ್ಲ ಕ್ಷಣಮಾತ್ರದಲ್ಲಿ ಮಾಯವಾಗಿ ಹೋದುವು. ಆಗ ವಿಘ್ನೇಶ್ವರನು ಮತ್ತೆ ಬ್ರಹ್ಮನನ್ನು ಕುರಿತು, "ಓ ! ಬ್ರಹ್ಮದೇವಾ ! ನಿನ್ನ ಮೂಲಕ ವಿಶ್ವವೆಲ್ಲಾ ಕೇಳಲಿ ! ವಕ್ರತೆಗಳನ್ನು ತುಂಡು ತುಂಡು ಮಾಡುವವನು ನಾನಾದುದರಿಂದ ನಾನು ವಕ್ರತುಂಡನೆಂಬ ಸಾರ್ಥಕ ನಾಮಧೇಯದವನಾಗಿ, ನನ್ನ ಸೊಂಡಿಲನ್ನು ವಕ್ರವಾಗಿಯೇ ಇಟ್ಟುಕೊಳ್ಳುತ್ತೇನೆ. ವಕ್ರತುಂಡನಾದ ನನ್ನನ್ನು ಧ್ಯಾನಿಸಿ ತಲೆಹಾಕುವ ಯಾವ ಕಾರ್ಯವಾದರೂ ಹಾಳು ಬೀಳಲಾರದು. ನೀನು ಕೇಳಿಕೊಂಡ ಹಾಗೆ ವರ ಕೊಟ್ಟಿದ್ದೇನೆ. ನನ್ನನ್ನು ಸ್ಮರಿಸು. ಸೃಷ್ಟಿಕಾರ್ಯ ನಡೆಸು. ಸೃಷ್ಟಿ ಮಾಡುವುದೂ ಒಂದು ಕಲೆ. ಆ ಕಲೆಗೆ ಯಾವ ಅಸಮಂಜಸಗಳೂ ಬಾರದಂತೆ, ಜಗತ್ತು ನೀನು ಎಣಿಸಿಕೊಂಡಂತೆಯೇ ಲೆಕ್ಕತಪ್ಪದೆ, ಕ್ರಮತಪ್ಪದೆ ಕಲಾನಿಲಯವಾಗಿ ಬೆಳಗಿಕೊಂಡಿರುತ್ತದೆ. ನಿನಗೆ ಹೇಗೆ ಸಮೀಪದವನಾದೆನೋ, ಹಾಗೆಯೇ ಜಗತ್ತಿನಲ್ಲಿರುವ ಎಲ್ಲರಿಗೂ, ಈ ಶ್ವೇತ ವರಾಹ ಕಲ್ಪದಲ್ಲಿ ನಾನು ಎಟಕುವವನಾಗಿದ್ದು ಪ್ರಥಮ ಪೂಜೆಗಳನ್ನು ಸ್ವೀಕರಿಸುವವನಾಗಿ, ವಿಘ್ನೇಶ್ವರನೆಂದು ವಿಘ್ನಗಳಿಂದ ಕಾಪಾಡುತ್ತಾ ಇರುವೆನು. ಸಂಕಲ್ಪಸಿದ್ಧಿಯನ್ನು ಸಾಧಿಸುವಂತಹ ಸಿದ್ಧಿ ವಿನಾಯಕನಾಗಿರುವೆನು. ಸಕಲ ಗಣಗಳಿಗೂ ಅಧಿಪತಿಯಾಗಿ ಗಣಪತಿಯೆನಿಸುವಂತೆ ಶಿವ ಪಾರ್ವತಿಯರಿಗೆ ಪುತ್ರನಾಗಿ ಅವತಾರವೆತ್ತುತ್ತೇನೆ !" ಎಂದು ಹೇಳಿ ಬ್ರಹ್ಮನನ್ನು ಹರಸಿ ಅಂತರ್ಧಾನನಾದನು.

ಆ ಕೂಡಲೇ ಸರಸ್ವತೀದೇವಿ ಹಿಂದೋಳವನ್ನು ಪ್ರಾರಂಭಿಸಿ, ಶ್ರೀರಾಗದಿಂದ ಮಹಾಕಾಶವೆಲ್ಲಾ ತುಂಬಿ ಪುಲಕಿತವಾಗುವ ಹಾಗೆ ವೀಣೆಯಿಂದ ನಾದ ವೆಬ್ಬಿಸಿದಳು. ಬ್ರಹ್ಮನು "ವಿಘ್ನೇಶ್ವರಾಯನಮಃ" ಎಂದು ಸೃಷ್ಟಿಯನ್ನು ಪ್ರಾರಂಭಿಸಿದಾಗ, ಸೃಷ್ಟಿ ಮತ್ತಿಷ್ಟು ಅಂದವಾಗಿ ನಿರ್ವಿಘ್ನವಾಗಿ ಸಾಗತೊಡಗಿತು. ಘನಗಂಭೀರವಾದ ಪರ್ವತ ಪಂಕ್ತಿಗಳೂ, ಅಮೃತ ಜಲಗಳಿಂದ ನದಿ ಸರೋವರಗಳೂ, ಸುಂದರ ವನಗಳೂ ಬಣ್ಣಬಣ್ಣಗಳ ಚಿತ್ರಗಳಂತಹ ಪ್ರಾಣಿಗಳೂ, ಪಕ್ಷಿಗಳೂ, ಶಾರೀರಕವಾಗಿ, ಮಾನಸಿಕವಾಗಿ ಬಲವನ್ನೂ ಉನ್ನತಿಯನ್ನೂ ಪಡೆಯಲಾಗುವಂತಹ ಮನುಷ್ಯರೂ ತುಂಬುತ್ತ ಬ್ರಹ್ಮಸೃಷ್ಟಿಯೊಂದು ಕಲಾನಿಲಯವೇ ಆಯಿತು. ವಾಗ್ದೇವಿಯಾದ ಸರಸ್ವತಿ ತನ್ನ ವಾಣಿಯನ್ನು ಸಂಗೀತದಂತೆ ಪ್ರಾಣಿಕೋಟಿಗಳಿಗೆ ಪ್ರಸಾದಿಸಿದಳು. ಜೀವಕೋಟಿ ಸುಲಕ್ಷಣವಾಗಿ ಬೆಳೆಯತೊಡಗಿತು. ಬೀಳಲು ಹರಡುವ ಆಲದ ಮರದ ಹಾಗೆ ಜಗತ್ತು ವಿಶಾಲವಾಗತೊಡಗಿತು.





# ವಿಘ್ನೇಶ್ವರ

ಒಂದು ಸಾರಿ ದೇವತೆಗಳೂ ರಾಕ್ಷಸರೂ ತಮ್ಮೊಳಗಿನ ದ್ವೇಷವನ್ನು ಬಿಟ್ಟು, ಒಗ್ಗಟ್ಟಾಗಿ ಕ್ಷೀರ ಸಾಗರವನ್ನು ಮಥನ ಮಾಡಿ ಅಮೃತವನ್ನು ಸಾಧಿಸಿಕೊಂಡರು. ಅಮೃತವನ್ನು ಸಾಧಿಸುವಾಗ ಒಗ್ಗಟ್ಟಾಗಿದ್ದ ರಾಕ್ಷಸ ದೇವತೆಗಳೊಳಗೆ ಅದನ್ನು ಹಂಚಿಕೊಳ್ಳುವ ವಿಷಯದಲ್ಲಿ ಜಗಳವೆದ್ದಾಗ, ಮಹಾವಿಷ್ಣು ಜಗನ್ಮೋಹಕವಾದ ರೂಪದ ಮೋಹಿನೀ ಅವತಾರ ತಾಳಿ, ರಾಕ್ಷಸರನ್ನು ವಂಚಿಸಿ, ಅಮೃತವು ದೇವತೆಗಳ ಪಾಲಿಗೇ ಸಿಗುವಂತೆ ಮಾಡಿದನು. ಅದರಿಂದ ರಾಕ್ಷಸರು ದೇವತೆಗಳಿಗೆ ನಿರಂತರ ದ್ವೇಷಿಗಳಾದರು.

ಅಮೃತಪಾನದಿಂದ ಅಮರರೆನಿಸಿಕೊಂಡ ದೇವತೆಗಳು ಗರ್ವದಿಂದ ತಿರುಗಾಡಲು ತೊಡಗಿದರು. ರಾಕ್ಷಸರು ಒಳಗೊಳಗೇ ಕುದಿಯತೊಡಗಿದರು. ಏನು ಮಾಡಿದರೂ ಅಮೃತಪಾನದಿಂದ ಅಮರರಾದ ದೇವತೆಗಳನ್ನು ಪೀಡಿಸಬಹುದೇ ಹೊರತು, ಕೊಲ್ಲಲು ಸಾಧ್ಯವಿರಲಿಲ್ಲ. ಆದರೂ ದೇವತೆಗಳನ್ನು ಗತಿಯಿಲ್ಲದವರನ್ನಾಗಿ ಮಾಡಿ, ದಾನವರಿಗೆ ನಡೆದ ಅನ್ಯಾಯಕ್ಕಾಗಿ ದೇವತೆಗಳ ಮೇಲೆ ಹಗೆ ತೀರಿಸಿಕೊಳ್ಳಲೇಬೇಕೆಂಬ ನಿಶ್ಚಯದಲ್ಲಿ ತಾರಕಾಸುರನು ಘೋರವಾದ ತಪಸ್ಸಿಗೆ ಕುಳಿತನು. ಅವನು ಬ್ರಹ್ಮನನ್ನು ಧ್ಯಾನಿಸುತ್ತ ತಪಸ್ಸು ಮಾಡುತ್ತಿರಲು, ಬ್ರಹ್ಮನು ಅವನ ಮುಂದೆ ಪ್ರತ್ಯಕ್ಷನಾದನು.

ಅವನನ್ನು ನೋಡಿ ತಾರಕಾಸುರನು ತನಗೆ ಸಾವೇ ಬಾರದಂತೆ ವರ ಬೇಕೆಂದು ಕೇಳಿದನು.

"ಹುಟ್ಟಿದವನು ಒಂದು ದಿನ ಸಾಯಲೇಬೇಕೆಂಬುದು ನನ್ನ ವಿಧಿ ವರವೇ ಆಗಿದೆ. ಆದುದರಿಂದ ಬೇರೊಂದು ವರವನ್ನು ಕೇಳು" ಎಂದನು ಬ್ರಹ್ಮ.

ತಾರಕಾಸುರನು ಚೆನ್ನಾಗಿ ಆಲೋಚನೆ ಮಾಡಿ ಶಿವನ ಮಗನಿಂದಲ್ಲದೆ ಬೇರೆ ಯಾರಿಂದಲೂ ಯಾವ ವಿಧದಿಂದಲೂ ತನಗೆ ಸಾವು ಬಾರದಂತೆ ವರವನ್ನು ಕೇಳಿ ಪಡೆದನು.



ಆಗ ಶಿವನಿಗೆ ಹೆಂಡತಿಯೇ ಇರಲಿಲ್ಲ. ಶಿವನ ಹೆಂಡತಿಯಾಗಿದ್ದ ಸತೀದೇವಿ ದಕ್ಷಯಜ್ಞದಲ್ಲಿ ಅವಮಾನಿತಳಾಗಿ ತನ್ನ ಯೋಗಾಗ್ನಿಯಿಂದ ಭಸ್ಮೀಭೂತಳಾಗಿ ಹೋಗಿದ್ದಳು. ಸಂತಾನವಿಲ್ಲದೆ, ಪತ್ನೀ ವಿಯೋಗಗೊಂಡ ಶಿವನು ಮಹಾ ವೈರಾಗ್ಯವಂತನಾಗಿ, ಉನ್ಮತ್ತನಂತೆ ತಿರುಗಿ ತಿರುಗಿ ಕಡೆಗೆ ಹಿಮಾಲಯ ಪರ್ವತಗಳಲ್ಲಿ ಒಂದುಕಡೆ ತಪಸ್ಸು ಮಾಡುತ್ತ ಕುಳಿತುಬಿಟ್ಟಿದ್ದನು. ಈ ಸಂಗತಿ ಗೊತ್ತಿದ್ದೇ ತಾರಕಾಸುರನು ಹಾಗೆ ವರ ಕೇಳಿ ಪಡೆದಿದ್ದನು, ಶಿವನು ಇನ್ನು ಮದುವೆಯಾಗಲಿಕ್ಕೂ ಇಲ್ಲ, ಮಗ ಹುಟ್ಟಲಿಕ್ಕೂ ಇಲ್ಲ ಎಂಬುದು ತಾರಕಾಸುರನ ಗಟ್ಟಿ ನಂಬುಗೆ.

ಅನಂತರ ತಾರಕಾಸುರನು ನಿರ್ಭೀತನಾಗಿ ರಾಕ್ಷಸರನ್ನೆಲ್ಲಾ ಒಟ್ಟುಗೂಡಿಸಿ ವಿಜೃಂಭಿಸುತ್ತ ದೇವತೆಗಳಿಗೆ ಮಹಾ ಕಂಟಕಪ್ರಾಯನಾದನು. ಮೂರು ಲೋಕಗಳನ್ನೂ ಆಕ್ರಮಿಸಿಕೊಂಡು ಹಗೆ ತೀರಿಸಿಕೊಳ್ಳುವ ಹುಮ್ಮಸ್ಸಿನಲ್ಲಿ ದೇವತೆಗಳಿಗೆ ಚಿತ್ರಹಿಂಸೆ ಕೊಡತೊಡಗಿದನು. ಈ ಹಿಂಸೆಯನ್ನು ಅನುಭವಿಸುವುದಕ್ಕಿಂತ ಸಾಯುವುದೇ ಮೇಲೆನಿಸಿ ತಾವೇಕೆ ಅಮೃತಪಾನ ಮಾಡಿದೆವೋ ಎಂದು ದೇವತೆಗಳಿಗೆ ತೋರ ತೊಡಗಿತು. ಕಡೆಗೆ ಅವರೆಲ್ಲಾ ಕೂಡಿ ಯೋಚಿಸಿ, ಉಪಾಯಗಾಣದೆ, ಸತ್ಯಲೋಕಕ್ಕೆ ಹೋಗಿ, ಬ್ರಹ್ಮನೊಂದಿಗೆ ತಮ್ಮ ಗೋಳನ್ನು ಹೇಳಿಕೊಂಡು ಕಾಪಾಡುವಂತೆ ಪ್ರಾರ್ಥಿಸಿದರು.

"ಯಾವುದಕ್ಕೂ ಮೊದಲು ಶಿವನಿಗೆ ಮಗ ಹುಟ್ಟಬೇಕು. ಅವನಿಂದಲೇ ತಾರಕಾಸುರನು ಸಾಯಬೇಕಾಗಿದೆ. ಬೇರೆ ಯಾವ ಉಪಾಯವೇನಿಲ್ಲ. ಅವನು ನನ್ನಿಂದ ಆ ರೀತಿಯಾಗಿ ವರ ಪಡೆದಿದ್ದಾನೆ. ಶಿವಕುಮಾರನೊಬ್ಬನಿಂದ ಹೊರತು ಅವನು ಸಾಯಲು ಸಾಧ್ಯವಿಲ್ಲ. ಶಿವನು ವಿರಾಗಿಯಾಗಿರುವುದರಿಂದ ಅವನಿಗೆ ಪುತ್ರೋದಯವಾಗುವ ಬಗೆ ಹೇಗೋ ನಾನು ಹೇಳಲು ಸಾಧ್ಯವಿಲ್ಲ. ನಡೆಯಿರಿ. ವಿಷ್ಣುವಿನ ಬಳಿಗೆ ಹೋಗಿ ಕೇಳೋಣ. ಉಪಾಯ ಮಾಡುವುದರಲ್ಲಿ ಅವನೇ ಸಮರ್ಥನು" ಎಂದು ಬ್ರಹ್ಮನು ದೇವತೆಗಳನ್ನು ಕರೆದುಕೊಂಡು ಮಹಾವಿಷ್ಣುವಿನ ಬಳಿಗೆ ಹೋದನು.

ವಿಷ್ಣು ದೇವತೆಗಳ ಸಮಸ್ಯೆಯನ್ನು ಕೇಳಿ ಹೀಗೆಂದನು: "ಎಲ್ಲದಕ್ಕೂ ಮೊದಲು ವಿರಾಗಿಯಾದ ಶಿವನಿಗೆ ಮದುವೆಯಾಗಬೇಕು. ದಕ್ಷಯಜ್ಞದಲ್ಲಿ ದೇಹವನ್ನು ಬಿಟ್ಟ ಸತೀದೇವಿ ಹಿಮವಂತನ ಮಗಳಾಗಿ ಹುಟ್ಟಿ ಬೆಳೆಯುತ್ತಾ ಇದ್ದಾಳೆ. ಆ ಪರ್ವತಕುಮಾರಿಗೆ ಶಿವನೊಂದಿಗೆ ಮದುವೆಯಾಗುವ ಹಾಗೆ ಪ್ರಯತ್ನಿಸಿರಿ ಶಿವನ ವೈರಾಗ್ಯ ಹೋಗುವಂತೆ ಮಾಡಬೇಕಾದುದನ್ನು ಮಾಡಿರಿ. ಆಮೇಲೆ ನಿಮ್ಮ ಸಮಸ್ಯೆ ತೀರುತ್ತದೆ".

ವಿಷ್ಣುವಿನ ಮಾತಿನಂತೆ ಮಾಡಲು ನಿಶ್ಚಯಿಸಿದ ದೇವತೆಗಳು, ಮೊದಲು ನಾರದನನ್ನು ಹಿಮವಂತನ

ಮನೆಗೆ ಕಳುಹಿಸಿದರು. ಹಿಮವಂತನೊಂದಿಗೆ ಪಾರ್ವತಿಗೆ ತಿಳಿಯುವ ಹಾಗೆ ನಾರದನು ಶಿವನ ವೃತ್ತಾಂತವನ್ನು ಹೇಳಿ, ಹಿಮವಂತನನ್ನು ತಪಸ್ಸಿನಲ್ಲಿರುವ ಶಿವನ ಬಳಿಗೆ ಕಳುಹಿಸಿದನು. ಹಿಮವಂತನು ಶಿವನನ್ನು ಪೂಜಿಸಿ, ಆವನ ತಪಸ್ಸಿಗೆ ಅನುಕೂಲವಾಗುವಂತೆ ತನ್ನ ಕುಮಾರಿ ಪಾರ್ವತಿ ಸೇವೆ ಮಾಡಲು ಶಿವನ ಅನುಮತಿಯನ್ನು ಪ್ರಾರ್ಥಿಸಿದನು.

ಶಿವನು ಮೌನವಾಗಿದ್ದರೂ ಅದನ್ನೇ ಅಂಗೀಕಾರವೆಂದುಕೊಂಡು ಹಿಮವಂತನು, ಮಗಳನ್ನು ಶಿವನ ಪರಿಚರ್ಯೆಗಳಿಗೆ ಬಿಟ್ಟು ಹಿಂದಿರುಗಿದನು. ಇದು ಪಾರ್ವತಿಗೂ ಹಿತಕರವಾಗಿತ್ತು.

ಚಿಕ್ಕಂದಿನಿಂದಲೇ ಪಾರ್ವತಿಗೆ ಶಿವನೆಂದರೆ ಬಹಳ ಇಷ್ಟ. ಬಾಲ ಪಾರ್ವತಿಗೆ ನಾರದನು ಆಗಾಗ ಬಂದು ಅನೇಕ ಕಥೆಗಳೊಂದಿಗೆ ಶಿವನ ಮಹಿಮೆಗಳನ್ನು ಕುರಿತು ಕೂಡಾ ಹೇಳುತ್ತ ಬಂದಿದ್ದನು. ಪಾರ್ವತಿ ಕೂಡಾ ಶಿವನ ಹೆಸರನ್ನು ಕೇಳಿದಕೂಡಲೇ ಕಿವಿಗಳನ್ನು ಆಗಲಿಸಿಕೊಂಡು ಶಿವನ ಗುಣಗಣಗಳನ್ನೂ, ಮಹಿಮೆಗಳನ್ನೂ ಬಿಂಬಿಸುವ ಕಥೆಗಳನ್ನು ಕೇಳಲು ಕುತೂಹಲಪಡುತ್ತಿದ್ದಳು. ಮದುವೆಯಾದರೆ ಶಿವನನ್ನೇ ಮದುವೆಯಾಗಬೇಕೆಂದೇ ನಿಶ್ಚಯಪಡಿಸಿಕೊಂಡಿದ್ದಳು. ಅಂತಹ ಮನೋರಮಣನೇ ಪ್ರತ್ಯಕ್ಷ ತಪಸ್ಸಿನಲ್ಲಿರುವಾಗ, ಆವನ ಪರಿಚರ್ಯೆ ಮಾಡುವ ಸಂದರ್ಭ ಬಂದುದು ತನ್ನ ಭಾಗ್ಯವೆಂದೇ ಭಾವಿಸಿದಳು.

ಆವಳು ಬೆಳಂಜಾಮದಲ್ಲಿ ಶಿವನು ತಪಸ್ಸು ಮಾಡುತ್ತಿರುವ ಪರಿಸರ ಪ್ರಾಂತವನ್ನು ನವಿಲುಗರಿಯ ಹಿಡಿಸೂಡಿಯಿಂದ ಗುಡಿಸಿ ಗಂಧ ಬೆರೆತ ಹಿಮಾನಿಜಲವನ್ನು ಸಿಂಪಡಿಸಿ ಮುತ್ತಿನ ರಂಗವಲ್ಲಿ ಬರೆದು ಅಲಂಕರಿಸುತ್ತಿದ್ದಳು. ಬಂಗಾರದ ಸರಿಗೆಗಳಿಂದ ನೇಯಲ್ಪಟ್ಟು ಮುತ್ತು ರತ್ನಗಳನ್ನು ಹೊದಿಸಿದ ಬುಟ್ಟಿಯಲ್ಲಿ ಶಿವನಿಗೆ ಇಷ್ಟವಾದ ಫಲಪುಷ್ಪಗಳನ್ನೂ ಬಿಲ್ವ ಪತ್ರೆಗಳನ್ನೂ ಬಿಳೀ




ಕಮಲಗಳನ್ನೂ ಸಂಗ್ರಹಿಸಿ ತಂದು ಅವನ ಬದಿಯಲ್ಲಿರಿಸುವಳು. ಬಂಗಾರದ ಕಮಂಡಲುವಿನಲ್ಲಿ ಹಿಮ ಶಿಖರಗಳಿಂದ ಜಾರುವ ಸ್ಫಟಿಕ ಜಲವನ್ನು ತುಂಬಿಸಿ ಜಪಮಾಲೆಯನ್ನು ಕಮಂಡಲುವಿನೊಂದಿಗೆ ಸೇರಿಸಿ ಇಟ್ಟಿರುವಳು. ಶಿವನನ್ನು ಆಕರ್ಷಿಸಲು ತಾನು ಬಗೆ ಬಗೆಯಾಗಿ ಅಲಂಕಾರ ಮಾಡಿಕೊಂಡು ಹೋಗುವಳು. ಕಿನ್ನರಿಯನ್ನು ಮಿಡಿಯುತ್ತ ಶಿವನಿಗೆ ಇಷ್ಟವಾದ ಭೈರವಿ, ಮುಖಾರಿ, ಕೇದಾರ, ಶಿವರಂಜನಿ ಮೊದಲಾದ ರಾಗಗಳನ್ನು ಹೊರಡಿಸುತ್ತ, ಸುತ್ತಲಿನ ವಾತಾವರಣವನ್ನು ಇಂಪಾದ ನಾದಗಳಿಂದ ತುಂಬಿಸುವಳು, ಶಿವನ ದೃಷ್ಟಿ ತನ್ನ ಮೇಲೆ ಬೀಳಬೇಕೆಂದು ಆಗಾಗ ಪ್ರಯತ್ನಿಸುವಳು. ಒಂದೊಂದು ದಿನ ಒಂದೊಂದು ಬಗೆಯ ಅಲಂಕಾರಗಳಿಂದ ಶಿವ ಸೇವೆಗೆ ಬರುವಳು, ಒಟ್ಟಿನ ಮೇಲೆ ಈ ಬಗೆಯ ಶಿವನ ಸಾನ್ನಿಧ್ಯವು ಅವಳಿಗೆ ತುಂಬಾ ಸಂತೋಷಪ್ರದವಾಗಿದ್ದಿತು.



ತಪೋನಿಷ್ಠೆಯಲ್ಲಿ ಮಗ್ನನಾಗಿದ್ದ ಶಿವನು ಒಂದು ಸಾರಿ ಕೂಡಾ ತನ್ನನ್ನು ನೋಡಲಾರನೇ? ಅವನ ತಣ್ಣಗಿನ ದೃಷ್ಟಿ ತನ್ನ ಮೇಲೆ ಒಂದುಸಾರಿ ಬೀಳ ಬಾರದೆ? ಹೀಗೆಂದುಕೊಂಡು ಬಹಳ ತಾಳ್ಮೆಯಿಂದ ಶಿವನ ಮುಂದೆಯೇ ಎಷ್ಟೋ ಹೊತ್ತಿನವರೆಗೆ ಸುಮ್ಮನೆ ಕುಳಿತು ಬಿಡುವಳು ಪಾರ್ವತಿ. ಕಡೆಕಡೆಗೆ ಶಿವನು ತನ್ನ ಕಡೆಗೆ ನೋಡುವುದೇ ಇಲ್ಲವೆಂದು ಅವಳಿಗೆ ನಿಸ್ಪೃಹೆ ಬರಲು ತೊಡಗಿತು. ಶಿವನ ದೃಢಮನಸ್ಸನ್ನು ಚಲಿಸುವಂತೆ ಮಾಡವುದೆಂದರೆ ಸಾಮಾನ್ಯ ಕೆಲಸವೇ ? ಅದಕ್ಕೆ ಮನ್ಮಥನ ಅಗತ್ಯವಿದೆ ಯೆಂದು ಇದನ್ನೆಲ್ಲಾ ನೋಡುತ್ತಿದ್ದ ದೇವೇಂದ್ರನಿಗೆ ಗೊತ್ತಾಯಿತು. ಅಂತೆಯೇ ದೇವೇಂದ್ರನು ಮನ್ಮಥ ನನ್ನು ಕರೆದು ಸಿಂಹಾಸನದ ಮೇಲೆ ಕೂಡಿಸಿ ಅವನನ್ನು ಶ್ಲಾಘಿಸುತ್ತಾ ಪೂಜಿಸಿ, ಅವನಿಂದ ಆಗಬೇಕಾದ ಕಾರ್ಯವನ್ನು ಹೇಳಿ ಕಳುಹಿಸಿಕೊಟ್ಟನು. ಮನ್ಮಥನು ಉತ್ಸಾಹದಿಂದ ಕಬ್ಬಿನ ಬಿಲ್ಲನ್ನೂ ಹೂಬಾಣಗಳು ತುಂಬಿದ ಬತ್ತಳಿಕೆಯನ್ನೂ ತೆಗೆದುಕೊಂಡು ರತೀ ದೇವಿಯೊಂದಿಗೆ, ಗಿಳಿಯ ರಥದ ಮೇಲೇರಿಕೊಂಡು ಈಶ್ವರನು ತಪಸ್ಸು ಮಾಡುತ್ತಿದ್ದ ಹಿಮಾಲಯ ಶಿಖರ ಗಳ ನಡುವಿನ ಕಣಿವೆಯೊಳಗೆ ಪ್ರವೇಶ ಮಾಡಿದನು.

ಮನ್ಮಥನ ಪ್ರವೇಶದಿಂದ ಆ ಕಣಿವೆಯೊಳಗೆ ಒಮ್ಮೆಗೇ ವಸಂತಋತು ವಿಕಸಿತವಾಯಿತು. ಅತ್ಯಂತ ರಮಣೀಯವಾದ ಆ ಪ್ರದೇಶದಲ್ಲಿ ಕೋಗಿಲೆಗಳ ಕುಹೂರವವೂ, ತುಂಬಿಗಳ ಝೇಂಕಾರವೂ ಹೊರಟುವು. ಪ್ರದೇಶವೆಲ್ಲಾ ಸುಗಂಧಮಯ ವಾಯಿತು, ರಸಮಯವಾಯಿತು.

ತನ್ನ ಸುತ್ತಮುತ್ತಲೂ ಏನೋ ಆಹ್ಲಾದದ ಗಾಳಿ ಮಂದವಾಗಿ ಬೀಸುವುದನ್ನು ತಿಳಿದು ಶಿವನು ಕಣ್ಣು ತೆರೆದು ನೋಡಿದನು. ಅಕಾಲ ವಸಂತಾಗಮನಕ್ಕೆ ಆಶ್ಚರ್ಯಪಡುತ್ತ ತನ್ನ ತಪಸ್ಸು ಇದರಿಂದ ಹಾಳಾದುದಕ್ಕೆ ಕೋಪಗೊಂಡನು ಶಿವ. ಅದೇ ಸಮಯಕ್ಕೆ ಪಾರ್ವತಿ ಜಪಮಾಲೆಯನ್ನೆತ್ತಿ ಶಿವನಿಗೆ ನೀಡುತ್ತಿರಲು, ಹೂಹೊದರಿನ ಹಿಂದಿನಿಂದ ಮನ್ಮಥನು ಶಿವನ ಹೃದಯಕ್ಕೆ ಗುರಿ ಹಿಡಿದು ನೀಲೋತ್ಪಲ ಬಾಣವನ್ನು ಪ್ರಯೋಗಿಸಿದನು. ಅದು ತಗಲಿದ ಕೂಡಲೇ ಶಿವನು ಬೆಚ್ಚಿಬಿದ್ದು ಕಣ್ಣು ಗಳನ್ನು ಅರಳಿಸಿದನು. ತನ್ನ ಮುಂದೆ ಕುಳಿತು ತನ್ನನ್ನೇ ನೋಡುವ ಪಾರ್ವತಿಯ ಮುಖ ಬಿಂಬವು ಶಿವನಿಗೆ ಅತ್ಯಂತ ಮನೋಹರವಾಗಿ ತೋರಿತು. ಒಂದು ಕ್ಷಣ ಬೆರಗಾದನು.

ಮರುಕ್ಷಣದಲ್ಲಿ ತನ್ನ ತಪೋಭಂಗಕ್ಕೆ ಶಿವನು ನಿಬ್ಬೆರಗಾಗಿ ಕೋಪಗೊಂಡು ತನ್ನ ಮೂರನೇ ಕಣ್ಣನ್ನು ತೆರೆದು ಮನ್ಮಥನನ್ನು ನೋಡಿದನು. ಶಿವನ ಫಾಲನೇತ್ರದ ಜ್ವಾಲಾದೃಷ್ಟಿಯೊಂದಿಗೆ ಎದ್ದಬೆಂಕಿ ಮನ್ಮಥನನ್ನು ಆ ಕ್ಷಣದಲ್ಲೇ ಭಸ್ಮ ಮಾಡಿಬಿಟ್ಟಿತು. ಶಿವನು ಧಿಗ್ಗನೆದ್ದು ಹಿಂದಿರುಗಿ ನೋಡದೆಯೇ ಚರ ಚರನೆ ತನ್ನ ಕೈಲಾಸ ಶಿಖರಕ್ಕೆ ಹೋಗಿಬಿಟ್ಟನು.

ಇದನ್ನೆಲ್ಲಾ ಹೊಂಚಿ ನೋಡುತ್ತಿದ್ದ ದೇವತೆಗಳು ಹೆದರಿಕೊಂಡು ಏನೂ ತೋರದಾದರು. ಮನ್ಮಥ ನೊಂದಿಗಿದ್ದ ರತೀದೇವಿಯಂತೂ ತನ್ನ ಪತಿಯ ಭಸ್ಮರಾಶಿಯ ಮೇಲೆ ಅಳುತ್ತಾ ಕುಳಿತಳು. ಶಿವನ ತಪಸ್ಸನ್ನು ಭಂಗಪಡಿಸಲು ತನ್ನ ಪತಿಯನ್ನು ಕಳು ಹಿಸಿದ ದೇವೇಂದ್ರನ ಮೇಲೆ ಶಾಪಹಾಕಿಕೊಂಡು ಅವಳು ರೋದಿಸುತ್ತಿರಲು, ದೇವತೆಗಳು ಓಡಿ ಹೋಗಿ ಈ ಸಮಾಚಾರವನ್ನು ಬ್ರಹ್ಮನಿಗೆ ತಿಳಿಸಿದರು. ಬ್ರಹ್ಮ ಇಂದ್ರ ಮೊದಲಾದ ದೇವತೆಗಳು ಅವಳ ಬಳಿಗೆ ಬಂದು ಪಾರ್ವತೀ ಶಂಕರರ ಕಲ್ಯಾಣವು ನಡೆಯುವಾಗ ಮನ್ಮಥನು ಮತ್ತೆ ಬದುಕಿಬರುವ ನೆಂದು ಅವಳಿಗೆ ಸಮಾಧಾನ ಹೇಳಿದರು. ಅದನ್ನು ನಂಬಿಕೊಂಡು ಅವಳು ಸಹಗಮನದ ಯೋಚನೆ ಬಿಟ್ಟು, ಆ ಭಸ್ಮ ರಾಶಿಯನ್ನು ಕಾಪಾಡಿಕೊಂಡು ಅಲ್ಲಿಯೇ ಕುಳಿತಳು.




ಶಿವನು ತನ್ನ ಪಾಡಿಗೆ ಹೊರಟು ಹೋದುದರಿಂದ ಪಾರ್ವತಿಗೆ ತನ್ನ ಸೌಂದರ್ಯದಲ್ಲಿ ನಂಬಿಗೆ ಹೋಯಿತು. ತನ್ನ ಶರೀರ ಲಾವಣ್ಯದ ಮೇಲೆ ಜಿಗುಪ್ಸೆ ಹುಟ್ಟಿತು, ಶಿವನನ್ನು ರಂಜಿಸಲು ತನ್ನಿಂದಾಗದೇ ಹೋದ ಮೇಲೆ ತನ್ನ ಶರೀರ ಸೌಂದರ್ಯವು ವ್ಯರ್ಥವೆನಿಸಿತು. ತಾನು ಕೂಡಾ ತಪಸ್ಸಿನಲ್ಲಿದ್ದು ಶಿವರಂಜನಿಯಾಗಬಹುದೋ ನೋಡೋಣವೆನಿಸಿತು. ಅವಳ ತಾಯಿ ಮೇನಕೆ ಎಷ್ಟು ಹೇಳಿದರೂ ಪಾರ್ವತಿ ಕೇಳಲಿಲ್ಲ. ಅವಳು ಕೆಲವು ಎಲೆಗಳನ್ನು ಮಾತ್ರವೇ ತಿನ್ನುತ್ತ ಶರೀರ ವನ್ನು ಕೃಶಗೊಳಿಸಿಕೊಳ್ಳುತ್ತ ತಪಸ್ಸಿಗೆ ಪ್ರಾರಂಭಿ ಸಿದಳು. ಜಯ, ವಿಜಯ ಎಂಬ ಇಬ್ಬರು ಅವಳ ಗೆಳತಿಯರು ಅವಳಿಗೆ ಜತೆಯಾಗಿರುತ್ತ, ಅವಳ ಯೋಗಕ್ಷೇಮಗಳನ್ನು ಮೇನಕಾ ಹಿಮವಂತರಿಗೆ ತಿಳಿಸುತ್ತ ಅಲ್ಲಿಯೇ ಇದ್ದರು. ಕೆಲವು ದಿನಗಳ ಮೇಲೆ ಪಾರ್ವತಿಯ ತಪೋನಿಷ್ಠೆ ತುಂಬಾ ಬಲ ವಾಯಿತು. ಪರ್ಣಗಳನ್ನು ಕೂಡಾ ತಿನ್ನುವುದನ್ನು ಬಿಟ್ಟಳು. ಆದುದರಿಂದ ಅವಳು "ಅಪರ್ಣಾ" ಎಂಬ ಹೆಸರನ್ನು ಪಡೆದಳು.

ಶಿವನು ಪ್ರಥಮಾವೇಶದಲ್ಲಿ ಮನ್ಮಥನನ್ನು ಭಸ್ಮ ಮಾಡಿದನೇ ಹೊರತು ಮನ್ಮಥನ ಬಾಣಗಳ ಪ್ರಭಾವವು ಸುಮ್ಮನೆ ಹೋಗಲಿಲ್ಲ. ಪಾರ್ವತಿಯ ತಪಸ್ಸು ಕೂಡಾ ಸಾರ್ಥಕವೇ ಆಯಿತು. ಶಿವನು ಒಂದು ಬಗೆಯ ಕುತೂಹಲದಿಂದ ಪಾರ್ವತಿಯನ್ನು ನೆನೆಯ ತೊಡಗಿದನು. ಅವಳು ತಪಸ್ಸಿನಲ್ಲಿರುವ ಸಂಗತಿ ತಿಳಿದು, ವೇಷ ಬದಲಾಯಿಸಿಕೊಂಡು ಪಾರ್ವತಿಯ ಬಳಿಗೆ ಬಂದನು. ಪಾರ್ವತಿಯ ಮನಸ್ಸು ಹೇಗೆಂದು ಪರೀಕ್ಷಿಸಲು ತೊಡಗಿದನು. ಅವಳನ್ನು ಮನಸಾರೆ ಮೆಚ್ಚಿಕೊಳ್ಳುತ್ತ ಮದುವೆಯಾಗುವುದೇ ಸರಿಯೆಂಬ ನಿಶ್ಚಯಕ್ಕೆ ಬಂದನು.

ಆಮೇಲೆ ಶಿವನು ಸಪ್ತರ್ಷಿಗಳನ್ನು ಕರೆದು ಹಿಮವಂತನ ಕಡೆಗೆ ಮದುವೆಯ ರಾಯಭಾರ



ನಡೆಸಲು ಹೇಳಿದನು. ಶಿವನಂಥ ಮಹಾದೇವನಿಗೆ ಕನ್ಯಾದಾತನಾಗುವ ಭಾಗ್ಯ ಬಂದುದನ್ನರಿತು ಹಿಮವಂತನು ಸಂತೋಷಾತಿಯದಿಂದ ತನ್ನ ಶಿಖರಗಳನ್ನು ಇನ್ನಷ್ಟು ಏರಿಸಿಕೊಂಡನು. ಬೇಗದಲ್ಲೇ ವಿವಾಹಕ್ಕೆ ಋಷಿಗಳು ಮುಹೂರ್ತವಿಟ್ಟರು.

ಶಿವನು ಮದುವಣಿಗನಾಗಿ ಪ್ರಮಥ ಗಣಗಳನ್ನು ಮುಂದಿಟ್ಟುಕೊಂಡು ಹಿಮವಂತನ ಮನೆಗೆ ಹೋದನು. ಹಿಮಾಲಯ ಪರ್ವತ ಶಿಖರಗಳೇ ಮದುವೆ ಚಪ್ಪರಕ್ಕೆ ಸ್ತಂಭಗಳಾದುವು. ಬ್ರಹ್ಮ, ವಿಷ್ಣು, ದೇವೇಂದ್ರ ಮೊದಲಾದ ದೇವತೆಗಳೂ, ಸಪ್ತರ್ಷಿಗಳನ್ನನುಸರಿಸಿ ಸಾವಿರಾರು ಋಷಿಗಳೂ, ನಾರದಾದಿ ಮುನಿಪುಂಗವರೂ ಹಿಮಾಲಯದ ವಿವಾಹ ಮಂಟಪವನ್ನು ಅಲಂಕರಿಸಿದರು. ಎಲ್ಲೆಲ್ಲಿಯೂ ಸಂಭ್ರಮವೇ ಸಂಭ್ರಮ.

ಹಿರಿಯ ಮುತ್ತೈದೆಯಾದ ಅರುಂಧತಿ ಶಿವನ ಫಾಲನೇತ್ರದ ರೆಪ್ಪೆಯ ಮೇಲೆ ಕಲ್ಯಾಣ ತಿಲಕವನ್ನು ಉದ್ದಕ್ಕೆ ತಿದ್ದಿದಳು. ಅತ್ಯಾಕರ್ಷಕವಾದ ಮದುಮಗನ ಅಲಂಕಾರದಲ್ಲಿ ಶಿವನು ಪರಮ ಸುಂದರನಾಗಿ ಕಂಡನು. ಎಲ್ಲರೂ ಆವನನ್ನು ಸುಂದರೇಶ್ವರನೆಂದು ಕರೆದರು.

ಸರ್ವಾಲಂಕಾರಗಳಿಂದ ಶೋಭಿತೆಯಾಗಿ ಬೆಳಗುವ ಮದುಮಗಳು ಪಾರ್ವತಿಯನ್ನು ವಿಷ್ಣು ಕರೆದುಕೊಂಡು ಬಂದು ಶಿವನೊಂದಿಗೆ, "ನೀನು ಸುಂದರೇಶ್ವರನಾದರೆ, ನನ್ನ ತಂಗಿ ಮೀನಾಕ್ಷೀ ದೇವಿಯಾಗಿದ್ದಾಳೆ" ಎನ್ನುತ್ತ ಪಾರ್ವತಿಯ ಬಲಗೈಯನ್ನು ಶಿವನ ಬಲಗೈಯಲ್ಲಿ ಇರಿಸಿ, ಇಬ್ಬರನ್ನೂ ಮದುವೆಯ ಹಸೆಗಳಲ್ಲಿ ಕೂಡಿಸಿದನು. ವಿಧ್ಯುಕ್ತ ಕಾರ್ಯಗಳು ನಡೆದುವು.

ಶಿವ ಪಾರ್ವತಿಯರ ವಿವಾಹ ಮಹೋತ್ಸವವು ಮಹಾ ವೈಭವದಿಂದ ನೆರವೇರಿತು.

ಹಿಮಾಲಯದಲ್ಲಿ ಶಿವ ಪಾರ್ವತಿಯರು ತಪಸ್ಸು ಮಾಡಿದ ಪ್ರದೇಶದಲ್ಲೇ ದೇವಶಿಲ್ಪಿ ವಿಶ್ವಕರ್ಮನು ನವ ದಂಪತಿಗಳಾದ ಪಾರ್ವತೀ ಪರಮೇಶ್ವರರಿಗೆ ದಿವ್ಯವಾದ ಅಂತಃಪುರ ಮಂದಿರವನ್ನು ನಿರ್ಮಿಸಿ ಕೊಟ್ಟನು.

ಮಂಗಳ ವಾದ್ಯಗಳು ಅಂಬರವನ್ನಡರುತ್ತಿರಲು ದೇವತೆಗಳು ಪುಷ್ಪವೃಷ್ಟಿ ಸುರಿಸುತ್ತಿರಲು, ಶಿವನು ಪಾರ್ವತಿಯ ಕೈ ಹಿಡಿದುಕೊಂಡು ಎಲ್ಲರ ಮಧ್ಯದಲ್ಲಿ ನಡೆಯುತ್ತಾ ಮಂದಿರದ ಕಡೆಗೆ ಹೊರಟರು. ಮಂದಿರಕ್ಕೆ ಹೋಗುವ ದಾರಿಯಲ್ಲಿಯೇ ಮನ್ಮಥನ ಭಸ್ಮರಾಶಿ ಇದ್ದಿತು.

ಆ ಬೂದಿಯ ರಾಶಿಯನ್ನು ಅಂಟಿಕೊಂಡು ರತೀದೇವಿ ದುಃಖಾರ್ತಳಾಗಿ ಶುಭಕಾಲ ನಿರೀಕ್ಷೆ ಮಾಡುತ್ತ ಕುಳಿತಿದ್ದಳು.

ಪತಿ ಭಿಕ್ಷೆ ಬೇಡುವವಳಾಗಿ ಕುಳಿತಿರುವ ರತಿಯ ಬಳಿಗೆ ಶಿವ ಪಾರ್ವತಿಯರು ಹೋಗಿ, "ದೀರ್ಘ ಸುಮಂಗಲಿಯಾಗಿರು" ಎಂದು ಅವಳನ್ನು ಹರ

ಸಿದರು. ಶಿವನು ಪುನಃ ತನ್ನ ಮೂರನೇ ಕಣ್ಣನ್ನು ತೆರೆದು ತಣ್ಣಗಿನ ಬೆಳುದಿಂಗಳ ಕಾಂತಿಯನ್ನು ಬೀರಲು, ಭಸ್ಮರಾಶಿ ಮಾಯವಾಗಿ ಮನ್ಮಥನು ನಿಜರೂಪದಿಂದ ಎದ್ದು, ಕಬ್ಬಿನ ಬಿಲ್ಲನ್ನು ಝುಮ್ಮೆನ್ನಿಸಿ ಒಮ್ಮೆ ಎಲ್ಲರ ಕಣ್ಣಿಗೂ ಕಂಡು ಕೂಡಲೇ ಮಾಯ ವಾಗಿ ಹೋದನು.

ಆಗ ಶಿವನು ರತೀ ದೇವಿಯೊಂದಿಗೆ "ಸುಭಗೇ! ನಿನ್ನ ಪತಿಯ ಶಕ್ತಿ ಅಪಾರ. ಕಣ್ಣೆದಿರು ಕಾಣುವವ ನಾಗಿದ್ದರೆ ಲೋಕವು ತಾಳುವಂತಿಲ್ಲ. ಅಂತಲೇ ಅವನು ಲೋಗರ ದೃಷ್ಟಿಗೆ ಅನಂಗನೆನಿಸಿ ಅದೃಶ್ಯ ನಾಗಿರುವುದೇ ಒಳ್ಳೆಯದು. ನಿನಗೆ ಸದಾ ಕಾಣುವವ ನಾಗಿರುವನು. ನಿಮುಗಿಬ್ಬರಿಗೂ ನಿತ್ಯ ಮಂಗಳ ವಾಗಿರಲಿ" ಎಂದು ಹರಸಿದನು. ರತಿಯು ಸಂತೋಷದಿಂದ ಅದೃಶ್ಯಳಾಗಿ ಅನಂಗನೊಂದಿಗೆ ಸೇರಿದಳು.

ಪಾರ್ವತೀ ಪರಮೇಶ್ವರರು ಅಂತಃಪುರವನ್ನು ಪ್ರವೇಶಿಸಿದರು. ಅರುಂಧತಿ ನೂತನ ದಂಪತಿಗಳಿಗೆ ಓಕುಳಿ ಸುತ್ತಿ ದೃಷ್ಟಿ ತೆಗೆದಳು. ಕರ್ಪೂರಾರತಿ ಬೆಳಗಿದಳು. ಆಗ ವಿಶ್ವಕರ್ಮನು ನಿಲುವೆತ್ತರದ, ಒಂದು ಫಲಕವನ್ನು ನವದಂಪತಿಗಳ ಇದಿರಿನಲ್ಲಿ ನಿಲ್ಲಿಸಿಟ್ಟು "ಇದೊಂದು ದೊಡ್ಡ ಅಪೂರ್ವ ಚಿತ್ರ ಪಟ. ಈ ಚಿತ್ರದಲ್ಲಿ ಇಬ್ಬರ ಚಿತ್ರಗಳಿವೆ. ಅವರಲ್ಲಿ ಯಾರ ಸೌಂದರ್ಯ ಹೆಚ್ಚೆಂದು ನಮಗೆ ಗೊತ್ತಾಗುವು ದಿಲ್ಲ. ಅದನ್ನು ಹೇಳುವವರು ನೀವಿಬ್ಬರೇ ಎಂಬ ನಂಬುಗೆಯಲ್ಲಿ ನಿಮ್ಮ ಮುಂದೆ ಇರಿಸಿದ್ದೇನೆ. ಹೇಳಿರಿ" ಎಂದು ಅದರ ತೆರೆಯನ್ನು ತೊಲಗಿಸಿದರು.

ಅದೊಂದು ನಿಲ್ಲುಗನ್ನಡಿ. ಅದರಲ್ಲಿ ತಮ್ಮ ಪ್ರತಿ ಬಿಂಬಗಳನ್ನು ನೋಡಿ ಶಿವಪಾರ್ವತಿಯರು ಪರಸ್ಪರ ನೋಡಿಕೊಂಡು ಮುಗುಳು ನಕ್ಕರು. "ಈ ಮುಗುಳು ನಗು ಉತ್ತರವಲ್ಲ. ಬಾಯಿ ತೆರೆದು ಕೇಳಿಸುವಂತೆ ಹೇಳಬೇಕು" ಎಂದನು ನಾರದ,



ಶಿವನು ಕಿರುನಗೆಯೊಂದಿಗೆ ಪಾರ್ವತಿಯನ್ನು ನೋಡುತ್ತ, "ಜಗ ಜಗ ಹೊಳೆಯುವ ಮೂಗುತಿಯ ಚಿತ್ರಾಂಗಿಯ ಸೌಂದರ್ಯವೇ ಹೆಚ್ಚು!" ಎಂದನು.

ನಾಚಿಕೆಯಿಂದ ಕೆಂಪೇರಿದ ಗಲ್ಲಗಳಿಂದ ಪಾರ್ವತಿ ಮೆಲ್ಲನೆಯಿಂದ "ಈ ಮೂಗಣ್ಣನ ಪುರುಷನ ಸೌಂದರ್ಯಕ್ಕೆ ಮೂರು ಲೋಕದಲ್ಲೂ ಸಾಟಿ ನಾ ಕಾಣೆನಪ್ಪ" ಎಂದಳು.

ಎಲ್ಲರೂ ಪಾರ್ವತೀ ಪರಮೇಶ್ವರರ ಮೇಲೆ ಪುಷ್ಪಾರ್ಚನೆ ಮಾಡಿ ಹೊರಟು ಹೋದರು. ದಂಪತಿಗಳಿಬ್ಬರೂ ಮೆತ್ತಗಿನ ತೂಗುಯ್ಯಾಲೆಯಲ್ಲಿ ಹೋಗಿ ಕುಳಿತರು.

ಅವರ ಇದಿರಿನ ಗೋಡೆಯ ಮೇಲೆ ಮನೋಹರ ವಾದ ಚಿತ್ರವೊಂದಿದ್ದಿತು. ಚಿತ್ರದ ಮಧ್ಯದಲ್ಲಿ ಅಂದ ವಾದ ಆನೆಗಳ ಜತೆಯೊಂದು ನಾಟ್ಯವಾಡುತ್ತಿರು ವಂತೆ ಮುಂಗಾಲುಗಳನ್ನೆತ್ತಿ ಇದಿರಿದಿರಾಗಿ ಸೊಂಡಿಲು ಗಳನ್ನು ಒಂದರೊಡನೊಂದು ಬಳಸಿಕೊಂಡಂತಿದ್ದುವು.

ಅದನ್ನು ನೋಡುತ್ತಿದ್ದ ಪಾರ್ವತಿಗೆ ಬ್ರಹ್ಮನಿಗೆ ಜ್ಞಾನ ಬೋಧೆ ಮಾಡಿದ ಬಾಲ ವಿಘ್ನೇಶ್ವರನ ನೆನಪಾಯಿತು.

ತೋರಣ ಕಟ್ಟಿದಂತಿರುವ ಆ ಎರಡು ಆನೆಗಳ ಮಧ್ಯದಲ್ಲಿ ಕಾಣುವ ಸರೋವರದ ನಡುವಿನಲ್ಲಿ ದೊಡ್ಡದೊಂದು ಪದ್ಮವು ಅರಳಿಕೊಂಡಿದ್ದಿತು. ಆ ಚಿತ್ರದಲ್ಲಿರುವ ಆನೆಗಳ ಜೋಡಿಯ ಮೇಲೆ ಶಿವ ಪಾರ್ವತಿಯರ ದೃಷ್ಟಿಗಳು ನಿಂತುವು. ಆಗ ಆ ಪದ್ಮ ಚಿತ್ರವಿರುವಲ್ಲಿ ಬೆಳುದಿಂಗಳ ಪ್ರಕಾಶವು ಬೆಳಗ ತೊಡಗಿ ಕ್ರಮವಾಗಿ ದೊಡ್ಡದಾಯಿತು. ಆ ಬೆಳಕಿನಲ್ಲಿ ಶಶಿವರ್ಣದಿಂದ ಹೊಳೆಯುವ ವಿಘ್ನೇಶ್ವರನ ದರ್ಶನ ಅವರಿಗಾಯಿತು.

ವಿಘ್ನೇಶ್ವರನ ಮುಖವು ಆನೆಯದೇ ಆಗಿದ್ದರೂ ಆ ಮುಖದಲ್ಲಿ ದಿವ್ಯತ್ವ ಸೂಸುತ್ತಿತ್ತು. ಪ್ರಸನ್ನತೆ ತುಂಬಿತ್ತು. ಅವನ ದೃಷ್ಟಿಗಳು ಶಾಂತವಾಗಿ ಮೇಧಸ್ಸನ್ನೂ ಶಕ್ತಿಯನ್ನೂ ಕೊಡುವಂತಿದ್ದುವು. ಅವನ ಹೊಟ್ಟೆ ದೊಡ್ಡದಾಗಿ ಹೊಳೆಯುತ್ತಿತ್ತು. ಅಭಯ ಹಸ್ತನಾಗಿ ಶೋಭಿಸುವ ವಿಘ್ನೇಶ್ವರನು ಪಾರ್ವತಿಗೆ ಮುದ್ದಿನ ಮೂಟೆಯಂತೆ ಕಂಡನು.

ಅವನನ್ನು ನೋಡುತ್ತಿದ್ದಂತೆ ಪಾರ್ವತೀ ಪರಮೇಶ್ವರರಿಗೆ ತಮ್ಮಲ್ಲಿ ಏನೋ ಅನಿರ್ವಚನೀಯವಾದ ಆನಂದ ಉಕ್ಕುವಂತೆ ತೋರಿತು. ಆನಂದದ ಪಾರವಶ್ಯತೆಯಿಂದ ಯಾವ ಮಾತೂ ಆಡಲಾಗದೆ ವಿಘ್ನೇಶ್ವರನ ಮೂರ್ತಿಯನ್ನು ರೆಪ್ಪೆಬಡಿಯದೆ ನೋಡುತ್ತಿದ್ದರು. ವಿಘ್ನೇಶ್ವರನು ಎಡಬದಿಗೆ ಸುರುಳಿಕೊಂಡಿರುವ ತನ್ನ ಚಿಕ್ಕ ಎಳೆ ಸೊಂಡಿಲನ್ನು ತಡವುತ್ತ ಮುದ್ದು ಮಾತುಗಳಿಂದ, "ನಾನು ವಿಘ್ನೇಶ್ವರ. ವಿಘ್ನಗಳನ್ನು ತೊಲಗಿಸುವ ವಿನಾಯಕ. ಪಂಚಭೂತಗಣಗಳಿಗೆ ಅಧಿಪತಿ. ಗಣಪತಿ. ಚಿತ್ರವಿಚಿತ್ರ ರೂಪಿಯಾದ ಚಿತ್ರಗಣಪತಿ. ನಿಮ್ಮಿಬ್ಬರ ಸಮಾಗಮ ನಿರ್ವಿಘ್ನವಾಗಿ ಫಲಿಸಲಿ! ಅನುರಾಗದ ಫಲಿತವಾಗಿ ಶಿವನ ತೇಜಸ್ಸಿನಿಂದ ಕುಮಾರಸ್ವಾಮಿ ಹುಟ್ಟಿ ತಾರಕಾಸುರನನ್ನು ಅಂತ್ಯಗೊಳಿಸುತ್ತಾನೆ. ಕುಮಾರಸ್ವಾಮಿಗಿಂತ ಮೊದಲು ನಾನು ನಿಮ್ಮ ಪುತ್ರನಾಗಿ ಅವತರಿಸುತ್ತೇನೆ!" ಎಂದನು, ಆಗ ಪಾರ್ವತಿ ಅವನನ್ನು ಎತ್ತಿಕೊಳ್ಳಲು ಕೈ ಚಾಚಿದಳು. ವಿಘ್ನೇಶ್ವರನು ಆ ಪ್ರಕಾಶದೊಂದಿಗೇ ಅಂತರ್ಧಾನನಾದನು.

ಅದುವರೆಗೆ ಕಂಡುದೆಲ್ಲಾ ಕನಸೋ ನಿಜವೋ ಎಂದು ಪಾರ್ವತೀ ಪರಮೇಶ್ವರರು ಪ್ರಶ್ನಾರ್ಥಕವಾಗಿ ಪರಸ್ಪರ ನೋಡಿಕೊಂಡರು. ಆ ನೋಡಿಕೊಳ್ಳುವ ಆನಂದದಲ್ಲೇ ತನ್ಮಯರಾಗಿ ಈವೊದಲಿನದೆಲ್ಲವನ್ನೂ ಮರೆತರು.

ಶಿವಪಾರ್ವತಿಯರು ಆ ಮಂದಿರದಲ್ಲಿ ಆನಂದ ಸಾಗರದಲ್ಲಿ ತೇಲಾಡಿಕೊಂಡಿರಲು, ಜಗತ್ತಿಗೆ ಮಹಾ ಮಹಾ ಉಪದ್ರಗಳು ಕವಿದುಕೊಂಡು ಬಂದುವು.






ಪ್ರಪಂಚಕ್ಕೆ ತಾರಕಾಸುರನ ಭಯ ಹೆಚ್ಚಾಗುತ್ತ ಬರುತ್ತಿತ್ತು. ಅದರ ಜತೆಗೆ ಮತ್ತೊಂದು ಭಯವೂ ಎದ್ದಿತು. ತ್ರಿಪುರಾಸುರರೆಂಬ ಮೂವರು ರಾಕ್ಷಸರು ದೊಡ್ಡ ತಪಸ್ಸು ಮಾಡಿ, ಅಮೋಘವಾದ ವರಗಳನ್ನು ಪಡೆದು ಆಕಾಶದಲ್ಲಿ ಹಾರುತ್ತಾ, ತಿರುಗುವ ಮೂರು ನಗರಗಳನ್ನು ನಿರ್ಮಿಸಿಕೊಂಡು, ಯಾವಾಗೆಂದರಾವಾಗ ಮೂರು ಲೋಕಗಳಲ್ಲಿ ಎಲ್ಲಿಯೋ ಒಂದು ಕಡೆ ಮುಗಿಬೀಳತೊಡಗಿದರು. ಒಂದೇಸಾರಿ ಮೂರು ನಗರಗಳು ಆಕಾಶದಲ್ಲಿ ತಿರುಗುತ್ತ, ಅಗ್ನಿಗೋಲಗಳನ್ನು ಸುರಿಸುತ್ತ, ಹಸಿರು ಮುರಿಯುವ ಹಳ್ಳಿಗಳನ್ನು ಧ್ವಂಸ ಮಾಡುತ್ತ ಆ ತ್ರಿಪುರಾಸುರರು ಎಲ್ಲೆಲ್ಲಿಯೂ ಭಯಭೀತಿ ಹುಟ್ಟಿಸುತ್ತಿದ್ದರು. ಅವರನ್ನು ಅಂತ್ಯಗೊಳಿಸ ಬೇಕಾದರೆ ರುದ್ರನೇ ಆಗಬೇಕಿತ್ತು.

ಆಗ ದೇವತೆಗಳೆಲ್ಲರೂ ಕೂಡಿ ಬಂದು ಕೈಲಾಸದ ಶಿವ ಮಂದಿರದ ಮುಂದಿನ ಪ್ರಾಂಗಣದಲ್ಲಿ ಕೂಡಿ ಶಿವನನ್ನು ನಾನಾ ವಿಧವಾಗಿ ಪ್ರಾರ್ಥಿಸುತ್ತ ಕೂಗಿ ಕರೆಯತೊಡಗಿದರು. ಹೊಸದಾಗಿ ಮದುವೆಯಾಗಿ ಆನಂದದಲ್ಲಿದ್ದ, ಶಿವನು ಇದೇನೋ ಆತಂಕ ಬಂದಿತೆಂದುಕೊಂಡು ಆರ್ತರ ಮೊರೆಯನ್ನು ಕೇಳಲು ಧಾವಿಸಿ ಬಂದನು. ತ್ರಿಪುರಾಸುರರ ಮಾರಣ ಕಾರ್ಯಗಳನ್ನು ಕೇಳಿದ ಮೇಲೆ, ಸುಮ್ಮನಿರಲಾಗದೆ ಶಿವನಿಗೆ ಪ್ರಚಂಡೋದ್ವೇಗವೆದ್ದಿತು. ಕೂಡಲೇ ಮೂಲೆಯಲ್ಲಿದ್ದ ತ್ರಿಶೂಲದ ಧೂಳನ್ನು ಒರೆಸಿ, ಪ್ರಮಥ ಗಣಗಳನ್ನು ಕೂಡಿಸಿಕೊಂಡು ತ್ರಿಪುರಾಸುರರ ಸಂಹಾರಕ್ಕಾಗಿ ಹೊರಟನು.

ಅದೇ ಸಮಯದಲ್ಲಿ ಗಜಾಸುರನೆಂಬ ಇನ್ನೊಬ್ಬ ರಾಕ್ಷಸನು, ಜಡೆಯಾನೆಯ ರೂಪದಿಂದ ಲೋಕವನ್ನು ಬೀಭತ್ಸ ಮಾಡುತ್ತ ಹೊರಟಿದ್ದನು. ಆನೆಯ ರೂಪದವನಾದುದರಿಂದಲೇ ಅವನಿಗೆ ಗಜಾಸುರನೆಂಬ ಹೆಸರು ಬಂದಿತ್ತು. ಅವನು ಬಹು ದೊಡ್ಡ ಶಿವಭಕ್ತನಾದುದರಿಂದ, ಶಿವನ ಹೊರತು ಬೇರೆ ವಿಧದಲ್ಲಿ ಸಾವಿಲ್ಲದಂತೆ ವರ ಪಡೆದಿದ್ದನು. ಅಂಥವನನ್ನು ನಾರದನು ನೋಡಿ ಮಾತಾಡಿಸಿ



ಹೊಗಳುತ್ತ, “ಮಹಾ ಶಿವಭಕ್ತನಾದ ನಿನ್ನ ಹೃದಯದಲ್ಲಿಯೇ ಶಿವನನ್ನು ಇರಿಸಿಕೊಳ್ಳುವುದು ಒಳ್ಳೆಯದಲ್ಲವೇನು ? ಹಾಗೆ ಮಾಡಿದರೆ ನಿನ್ನ ಶರೀರವೂ ವಜ್ರ ಶರೀರವಾಗುವುದಷ್ಟೆ ?” ಎಂದು ಅವನಿಗೆ ಒಳಿತನ್ನು ಬಯಸುವವನ ಹಾಗೆ ಹೇಳಿದನು. ಗಜಾಸುರನು ಕೂಡಲೇ ಉಗ್ರವಾದ ಆರಾಧನೆಗೆ ತೊಡಗಿ ತಪಸ್ಸಿನಿಂದ ಶಿವನನ್ನು ಮೆಚ್ಚಿಸಿದನು. ಆಗ ತ್ರಿಪುರಾಸುರ ಸಂಹಾರಕ್ಕಾಗಿ ಅವಸರದಿಂದ ಹೊರಟಿದ್ದ ಶಿವನು, ಗಜಾಸುರನ ತಪಸ್ಸಿಗೆ ಮೆಚ್ಚಿ ಗಜಾಸುರನ ಕೋರಿಕೆಯಂತೆ, ಅವನ ಹೃದಯದಲ್ಲಿ ತನ್ನ ಲಿಂಗ ರೂಪವನ್ನಿರಿಸಿ ಹೋದನು.

“ಹೀಗೆ ಶಿವನು ಗಜಾಸುರನ ಎದೆಯೊಳಗಿದ್ದರೆ ತ್ರಿಪುರಾಸುರನ ಸಂಹಾರವಾದರೂ, ನವ ವಧುವಾದ ಪಾರ್ವತಿಯ ಇಚ್ಛೆಗಳು ಹೇಗೆ ತೀರಿಯಾವು ? ಶಿವ ಪಾರ್ವತಿಯರ ಕುಮಾರನು ಹುಟ್ಟಿ ತಾರಕಾಸುರನ ಸಂಹಾರವಾಗುವ ಬಗೆ ಹೇಗೆ ?” ಎಂದು ದೇವತೆಗಳಿಗೆ ದಿಗಿಲು ಹಿಡಿಯಿತು. ದಿಗಿಲುಗೊಂಡ ದೇವತೆಗಳನ್ನು ನೋಡಿ ನಾರದನು, “ಚಿಂತಿಸುವಿರೇಕೆ ? ಶಿವನು ಬೃಹದ್ಗುಣ ಲಿಂಗದವನೆಂಬುದನ್ನು ಮರೆತಿರಾ ?” ಎಂದು ಉಪಾಯವನ್ನು ಸೂಚಿಸಿದನು. ಕೂಡಲೇ ದೇವತೆಗಳೆಲ್ಲಾ ಗಜಾಸುರನ ಮುಂದೆ ಹೋಗಿ ಶಿವನ ಸ್ತೋತ್ರ ಪಾಠಗಳನ್ನು ಪ್ರಾರಂಭಿಸಿದರು. ಅವರು ತನ್ನನ್ನೇ ಹೊಗಳುವಂತೆ ಅನಿಸಿ ಗಜಾಸುರನೂ ಪರವಶನಾದನು.

ಬರಬರುತ್ತ ಗಜಾಸುರನಿಗೆ ನೋವಿನ ಅನುಭವವಾಗತೊಡಗಿತು. ಅವನ ಎದೆಯಲ್ಲಿದ್ದ ಶಿವಲಿಂಗವು ಉಬ್ಬಿ ದೊಡ್ಡದಾಗುತ್ತ ಗಜಾಸುರನನ್ನು ಸೀಳಿ ಹಾಕಿತು. ಗಜಾಸುರನು ಪ್ರಾಣ ಬಿಡುತ್ತ, “ಹೇ ಶಿವಾ ! ನಿನ್ನನ್ನು ನಂಬಿದರೆ ಹೀಗೆ ಮಾಡಿದೆಯಲ್ಲಾ. ಏನಿದು ?” ಎಂದು ಶಿವನನ್ನು ನಿಂದಿಸಿದನು. ಅವನ ಆರ್ತನಾದವನ್ನು ಕೇಳಿ ಶಿವನು ರಣಕೇಳಿಯಿಂದ ಹಿಂದಿರುಗಿ ಬಂದು, “ಗಜಾ ! ಚಿಂತಿಸಬೇಡ. ಶಿವ ಭಕ್ತಿಗೆ ಆದರ್ಶವಾಗಿ ನಿನ್ನ ಹೆಸರು ಚಿರಂಜೀವಿಯಾಗಿರುವಂತೆ, ನಿನ್ನ ತಲೆ ನನ್ನ ಸನ್ನಿಹಿತವಾಗಿರುತ್ತದೆ. ನಿನ್ನ ಚರ್ಮವನ್ನೇ ನಾನು ಧರಿಸಿಕೊಳ್ಳುತ್ತೇನೆ” ಎಂದು ಅವನಿಗೆ ಕೈವಲ್ಯವನ್ನು ಪ್ರಸಾದಿಸಿ ಮತ್ತೆ ಯುದ್ಧಕ್ಕೆ ಹೋದನು.

ಶಿವನು ಭೂಮಿಯನ್ನು ರಥವನ್ನಾಗಿಸಿ, ಸೂರ್ಯ-ಚಂದ್ರರನ್ನು ರಥದ ಚಕ್ರಗಳನ್ನಾಗಿಸಿ, ವೇದಗಳನ್ನು ಕುದುರೆಗಳನ್ನಾಗಿಸಿ, ಬ್ರಹ್ಮನನ್ನು ಸಾರಥಿಯನ್ನಾಗಿ ಮಾಡಿಕೊಂಡು, ಬಾಣಗಳಲ್ಲಿ ವಿಷ್ಣು ತೇಜಸ್ಸನ್ನು ಬರಮಾಡಿ ತ್ರಿಪುರಾಸುರ ಸಂಹಾರಕ್ಕೆ ಕಾಲರುದ್ರನಾಗಿ ಹೋರಾಡುತ್ತಿದ್ದನು.

ಮೂರು ಕೋಟಿ ದೇವತೆಗಳೂ, ಅವರವರ ಪತ್ನಿಯರೊಂದಿಗೆ, ಶಿವನ ತ್ರಿಪುರಾಸುರ ವಿಜಯವನ್ನು ನೋಡಿ ಕಣ್ಣಿಗೆ ಹಬ್ಬ ಮಾಡಿಕೊಳ್ಳಲು ಆತುರದಿಂದ ನೋಡುತ್ತಿದ್ದರು.

ಆ ಸಮಯದಲ್ಲಿ ನಾರದನು ಪಾರ್ವತಿಯ ಬಳಿಗೆ ಬಂದು, "ನೋಡಮ್ಮಾ ಪಾರ್ವತೀ! ತಾರಕಾಸುರನು ಹೆದರಿ ಬೀಳುತ್ತ ಕೆಟ್ಟ ಕೆಟ್ಟ ಸ್ವಪ್ನಗಳನ್ನು ಕಾಣುತ್ತಿದ್ದಾನೆ. ಅವನಿಂದ ನಿನಗೆ ಅಪಾಯ ಬಂದರೂ ಬಂದೀತು. ಏಕೆಂದರೆ ನಿನ್ನ ಮಗನೇ ತನ್ನನ್ನು ಕೊಲ್ಲುವುದೆಂದು ಅವನಿಗೂ ಗೊತ್ತಿದೆ. ವಜ್ರದಂತನೆಂಬ ಮಹಾ ಮಾಯಾವಿಯೊಬ್ಬ ಅವನಿಗೆ ಮಂತ್ರಿಯಾಗಿದ್ದಾನೆ. ಮುಖ್ಯವಾಗಿ ನೀನು ತುಂಬಾ ಜಾಗ್ರತೆಯಲ್ಲಿರಬೇಕು! ಮರೆಯಬೇಡಮ್ಮಾ!" ಎಂದು ಎಚ್ಚರಿಕೆ ಹೇಳಿ ಹೊರಟುಹೋದನು.

ಮೊದಲೇ ಬೇಸರದಿಂದಿದ್ದ ಪಾರ್ವತಿಗೆ ಮತ್ತಿಷ್ಟು ಬೇಸರ ಬಂದಿತು. ಅದರೊಂದಿಗೆ ಭಯವೂ ಸೇರಿತು. ಚೆಂದಾಗಿ ತೈಲಾಭ್ಯಂಜನ ಮಾಡಿಕೊಂಡರೆ ಮನಸ್ಸಿಗೆ ಶಾಂತಿ ದೊರೆಯುವುದೆಂದು ತೋರಿತು.

ಅದರಂತೆ ಪಾರ್ವತಿ ಸ್ನಾನಕ್ಕಾಗಿ ಸುಗಂಧ ದ್ರವ್ಯಗಳಿಂದ ನಲುಗು ಮುದ್ದೆ ತಯಾರಿಸುತ್ತಾ, ಆ ಮುದ್ದೆಯಿಂದ ಒಂದು ಬೊಂಬೆಯನ್ನು ಮಾಡಿ, ಆನಂದದಿಂದ ಅದನ್ನೇ ನೋಡುತ್ತ, ಏನೋ ಭಾವ ಪರವಶಳಾದಳು. ಆಗ ಆ ಬೊಂಬೆ ಮುದ್ದಾದ ಒಬ್ಬ ಬಾಲಕನ ರೂಪ ಧರಿಸಿ, ಅವಳನ್ನು ನೋಡಿ ನಕ್ಕಿತು. ಪಾರ್ವತಿ ಬೆಚ್ಚಿಬಿದ್ದು, "ಯಾರಪ್ಪಾ? ಥಕ್ಕನೆ ಎಲ್ಲಿಂದ ಬಂದೆ?" ಎಂದು ಪ್ರಶ್ನಿಸಿದಳು.

"ನಿನ್ನ ಕೈಯಿಂದ ಉದುರಿದ ಕಾಂತಿಯನ್ನು ಹೊಂದಿ ಹುಟ್ಟಿದ ನಿನ್ನ ನಲುಗು ಮುದ್ದೆಯವನೇ ನಾನಮ್ಮ! ನಿನ್ನ ಪುತ್ರ, ಪುತ್ರ ಗಣಪತಿ ನಾನು!" ಎಂದು ಮುದ್ದಾಗಿ ಹೇಳಿದನು ಆ ಬಾಲಕ. ಪಾರ್ವತಿಗೆ ಆ ಬಾಲನ ಮೇಲೆ ವಾತ್ಸಲ್ಯ ಉಕ್ಕಿ ಬಂದಿತು. ಅವನನ್ನು ಬಾಚಿ ತಬ್ಬಿಕೊಂಡು ಮುದ್ದಾಡಿ, ಒಂದು ಗದಾಂಕುಶವನ್ನು ಅವನ ಕೈಗೆ ಕೊಟ್ಟು ಎತ್ತಿಕೊಂಡು ಕುಣಿದು ಅವನನ್ನೂ ನಲಿದಾಡಿಸಿ ಆನಂದಿಸಿದಳು.



ಆ ಮೇಲೆ ಅವನನ್ನು ಸಿಂಹದ್ವಾರದ ಹತ್ತಿರ ಇರಿಸಿ, "ಕಂದಾ! ಇಲ್ಲೇ ಇರು! ಯಾರನ್ನೂ, ಒಂದು ಹುಳುವನ್ನು ಕೂಡಾ ಒಳಗೆ ಬಿಡಬೇಡ. ಸುತ್ತಲೂ ಮಾಯಾವೀ ರಾಕ್ಷಸರ ಕಾಟವಂತೆ!" ಎಂದಳು.

"ಅಮ್ಮಾ! ಅದೆಲ್ಲಾ ನಾನು ನೋಡಿಕೊಳ್ಳುತ್ತೇನೆ. ನನಗೆ ತಿನ್ನಲು ಏನಾದರೂ ಕೊಡು ಮತ್ತೆ!" ಎಂದನು ಹುಡುಗ.

"ಅಯ್ಯೋ ನನ್ನ ಬುದ್ಧಿಗೆ ಬೆಂಕೀ ಬೀಳ!" ಎಂದು ಪಾರ್ವತಿ ಆಗಿಂದಾಗಲೇ ಹೋಗಿ, ಹಿಟ್ಟು ಕಲಿಸಿ ಬೆಲ್ಲದ ಮೋದಕಗಳನ್ನೂ, ಉಂಡ್ಲುಕಗಳನ್ನೂ ಮಾಡಿ ಅವನಿಗೆ ಕೊಟ್ಟು, ಸ್ನಾನಕ್ಕೆ ಹೋದಳು.

ಪಾರ್ವತಿಯನ್ನೇ ಅಂತ್ಯಗೊಳಿಸಿ ಬಿಟ್ಟರೆ ಶಿವನಿಗೆ ಮಗನು ಹುಟ್ಟಲು ಸಾಧ್ಯವಿಲ್ಲವಷ್ಟೆ? ಆಮೇಲೆ ತನ್ನ ಪ್ರಾಣಕ್ಕೆ ಯಾವ ಭಯವೂ ಇಲ್ಲದಂತಾಗುತ್ತದೆಂದುಕೊಂಡು ತಾರಕಾಸುರನು, ಪಾರ್ವತಿಯನ್ನು ಅಪಹರಿಸಿಕೊಂಡು ಬರಲು ವಜ್ರದಂತನನ್ನು ಕಳು



ಹಿಸಿಕೊಟ್ಟನು. ಮಹಾ ಮಾಯಾವಿಯಾದ ವಜ್ರ ದಂತನು, ವಜ್ರಾಯುಧವನ್ನಾದರೂ ಪರಪರನೆ ಕೊರೆದು ಪುಡಿ ಹಾರಿಸಬಲ್ಲ ಹರಿತವಾದ ಕೋರೆ ಹಲ್ಲುಗಳಿರುವ ರಕ್ಕಸ ಇಲಿಯ ರೂಪದಲ್ಲಿ, ಗುಡ್ಡ ಗಳನ್ನು ಕೊರೆದು ಹಿಟ್ಟು ಮಾಡುತ್ತ ಕೈಲಾಸದಲ್ಲಿ ತಾಂಡವಿಸಿಕೊಂಡಿದ್ದನು. ಅಂತಲೇ ಅವನಿಗೆ ಮೂಷಿ ಕಾಸುರನೆಂದು ಹೆಸರುಬಂತು. ಅವನು ಪಾರ್ವತಿ ಯನ್ನು ಅಪಹರಿಸಲು ತನ್ನ ಅನುಚರರಾದ ಗಜ ಕರ್ಣ. ಗೋಕರ್ಣ ಎಂಬ ರಾಕ್ಷಸರನ್ನು ಮುಂದಾಗಿ ಕಳುಹಿಸಿದನು. ಅವರಿಬ್ಬರೂ ಗೂಳಿಗಳ ಹಾಗೆ ಕೊಬ್ಬಿದ ಹುಡುಗರ ರೂಪಧರಿಸಿ, ನಗುತ್ತ ಕಲೆಯುತ್ತ ಸಿಂಹದ್ವಾರದಲ್ಲಿ ದಂಡಾಕುಶ ಹಸ್ತನಾಗಿದ್ದ ಬಾಲ ಗಣಪತಿಯನ್ನು ನೋಡಿ, "ಬಾರೋ ಹುಡುಗಾ! ಆಡೋಣ" ಎಂದು ಕರೆದರು.

ಬಾಲಗಣಪತಿ ಅವರನ್ನು ಅಲಕ್ಷ್ಯವಾಗಿ ನೋಡಿ ನಗುತ್ತ, "ಮೊದಲು ಇದನ್ನಿಷ್ಟು ರುಚಿನೋಡಿ!" ಎಂದು ಉಂಡ್ಲುಕಗಳನ್ನು ಅವರ ಮೇಲಕ್ಕೆ ಬಿಸುಟನು. ಅವುಗಳ ಪೆಟ್ಟಿಗೆ ಅವರ ತಲೆಗಳು ಛಿಮ್ಮೆನಿಸಿ, ನಡುಗಿ ಓಡಿ ಹೋಗಲು ನೋಡಿದರು.

"ಓಡುವಿರೇಕೆ? ಹೀಗೆ ಬನ್ನೀ, ಆಡೋಣಾ ಅಂದಿರಲ್ಲಾ!" ಎಂದು ಬಾಲ ಗಣಪತಿ ಅವರ ಬಳಿಗೆ ಹಾರಿ, ಅಡ್ಡನಿಂತು, "ಎರಡು ಕೈಗಳಿಂದ ಕಿವಿಗಳನ್ನು ಹಿಡಿದು ಮೂರು ಮೂರು ಮುಂಡು ಗಾಲು ಹಾಕಿ, ಗಲ್ಲಬಡಿದುಕೊಂಡು ಮತ್ತೆ ಹೋಗಿ! ಇದೇ ಆಟ!" ಎಂದು ಆಜ್ಞೆ ಮಾಡಿದನು.

ಅವರು ಹಾಗೆಯೇ ಮಾಡಿ, ರಾಕ್ಷಸ ರೂಪ ತಳೆದು ಹೋಗಿ ವಜ್ರದಂತನೊಂದಿಗೆ ನಡೆದ ಸಂಗತಿ ಹೇಳಿದರು.

ಅದನ್ನು ಕೇಳಿ ವಜ್ರದಂತನು ಹೂಂಕರಿಸಿ, ಗುಡ್ಡ ಗಳು ನಡುಗುವಂತೆ ಹಲ್ಲು ಕಡಿದು, ರಕ್ಕಸ ಇಲಿಯ ರೂಪದಲ್ಲಿ ಸಿಂಹ ದ್ವಾರದ ಬಳಿಯಲ್ಲಿ ದೊಡ್ಡ ಗುಹೆಯನ್ನು ಕೊರೆದನು. ಇನ್ನೂ ಅವನು ಕೊರೆ ಯುತ್ತಿದ್ದಾಗ ಪುತ್ರ ಗಣಪತಿ ತನ್ನ ಉಡಿದಾರವಾದ ಪಾಶವನ್ನು ಬೀಸಿ, ಅದರ ಉರುಳಿನಲ್ಲಿ ಆ ದೊಡ್ಡ ಇಲಿಯನ್ನು ಹಿಡಿದನು. ಕುತ್ತಿಗೆಗೆ ಬಿದ್ದ ಉರುಳಿ ನಿಂದ ಆ ಇಲಿ ಕೀಚುಕೀಚೆಂದು ಅರಚಲು, ಅದರ ತಲೆಗೆ ನಾಲ್ಕಾರು ಮೊಟ್ಟಿಕಾಯಿಗಳನ್ನು ಕುಟ್ಟಿ ಬಾಲ ಹಿಡಿದು ಎತ್ತಿ ಗಿರಿಗಿರಿ ಬೀಸಿ ಬಿಸುಟು ಬಿಟ್ಟನು ಗಣಪತಿ ಬಾಲ.

ಹಾಗೆ ಬೀಸಿ ಒಗೆಯಲ್ಪಟ್ಟ ಮೂಷಿಕಾಸುರನು ಆಕಾಶದಲ್ಲಿ ಹಾರಿ ಹೋಗಿ ಅವನ ರಾಜ್ಯದಲ್ಲಿರುವ ಅವನ ಭವನದ ಮುಂದೆ ದಭಾರೆಂದು ನಿಜ ರೂಪ ದಿಂದ ಬಿದ್ದು ಆರ್ತನಾದ ಮಾಡಿದನು. ಅವನ ಹೆಂಡತಿಯಾದ ಧವಳೆ ದೊಡ್ಡ ದೇವೀ ಭಕ್ತೆಯಾಗಿ ದ್ದಳು. ಎಂದೆಂದಿಗೂ ತನ್ನ ಮಾಂಗಲ್ಯ ಭಾಗ್ಯ ಉಳಿಯುವಂತೆಯೂ, ಗಂಡನಿಗೆ ಸಾವು ಬಾರ ದಂತೆಯೂ ದೇವಿಯಿಂದ ವರ ಹೊಂದಿದವಳು.

ಅವಳು ಗಂಡನಿಗೆ ಸಮಾಧಾನ ಹೇಳಿ, ತನ್ನ ವರದ ಸಂಗತಿಯನ್ನು ನೆನಪು ಮಾಡಿಸಿ, ದೇವಿಯ ಅಂಶದವಳಾದ ಪಾರ್ವತಿಯ ತಂಟೆಗೆ ಹೋಗ ಬೇಡವೆಂದು ಗಂಡನಿಗೆ ಹಿತವನ್ನು ಹೇಳಿದಳು.

* * *

ತ್ರಿಪುರಾಸುರರನ್ನು ಶಿವನು ಸಂಹಾರ ಮಾಡಿಬಿಟ್ಟನು. ಆಮೇಲೆ ಪಾರ್ವತಿಯನ್ನು ನೋಡುವ ಆತುರದಲ್ಲಿ ಶಿವನು ಬಹುಬೇಗನೇ ಹಿಂದಿರುಗಿ ಬಂದನು. ಅವನು ತನ್ನ ಮಂದಿರದೊಳಗೆ ಪ್ರವೇಶಿಸಲು ನೋಡುವಾಗ, ಸಿಂಹದ್ವಾರದಲ್ಲಿದ್ದ ಬಾಲಗಣಪತಿ ಅವನಿಗೆ ಅಡ್ಡಗಟ್ಟಿನಿಂತನು.



ಶಿವನು ಚಕಿತನಾಗಿ, "ಯಾರೋ ನೀನು ?" ಎಂದು ಗದರಿಸಿ ಕೇಳಿದನು.

ಬಾಲನು ಗಲಗಲ ನಗುತ್ತ, "ಅಮ್ಮನ ಮಗ ! ಮಾಯಾವಿಗಳೂ ವೇಷಧಾರಿಗಳೂ ಇಲ್ಲಿ ಸುತ್ತಲೂ ತಿರುಗುತ್ತಿದ್ದಾರೆ. ಒಂದು ಹುಳವನ್ನು ಕೂಡಾ ಒಳಗೆ ಬಿಡಬಾರದೆಂದು ನನ್ನನ್ನು ಕಾವಲಿಗೆ ಇರಿಸಿದ್ದಾಳೆ. ಎಂದನು ಆ ದಿಟ್ಟಬಾಲಕ.

ಶಿವನ ಹಿಂದಿನಿಂದ, ತ್ರಿಪುರಾಸುರರನ್ನು ಸಂಹಾರ ಮಾಡಿದ ಶಿವನ ವೀರ ಪರಾಕ್ರಮಗಳನ್ನು ಹೋಗಳುತ್ತ, ಜಯ ಜಯಕಾರ ಮಾಡುತ್ತ ಬರುತ್ತಿದ್ದ ಪ್ರಮಥ ಗಣಗಳೂ, ದೇವತೆಗಳೂ ಅಲ್ಲಿಗೆ ಬಂದು ನಿಂತರು. ಶಿವಮಂದಿರದ ಬಾಗಿಲಿನಲ್ಲಿ ಶಿವನು ಒಬ್ಬ ಬಾಲನೊಂದಿಗೆ ವಾದ ವಿವಾದ ಮಾಡುವುದನ್ನು ನೋಡಿ ಆಶ್ಚರ್ಯಪಡುತ್ತ ಬೊಂಬೆಗಳ ಹಾಗೆ ನಿಂತು ಅವರ ಚರ್ಚೆಯನ್ನು ಕೇಳತೊಡಗಿದರು:

"ನಾನು ಯಾರು ಗೊತ್ತೇನೋ ಹುಡುಗಾ ! ನಾನು ಈಶ್ವರನು. ದೇವನು, ಶಿವದೇವನು !" ಎಂದನು ಶಿವ.

"ನನಗೆ ಯಾರಾದರೂ ಇತರರ ಹಾಗೇನೇ ! ನನ್ನಮ್ಮನೇ ಮಹಾ ದೇವಿ. ಪ್ರಕೃತಿ ಸ್ವರೂಪಿಣಿ. ಆ ಪ್ರಕೃತಿಯ ಶಾಸನವನ್ನು ಅನುಸರಿಸಿ ನಡೆಯುವುದರ ಹೊರತು ಜೀವ ಕೋಟಿಗಳಿಗೆ ಬೇರೆ ಧರ್ಮವೇ ಇಲ್ಲ. ಅಂತಹ ಅಮ್ಮನ ಆಜ್ಞೆ ಪಾಲಿಸುವುದರ ಹೊರತು ಬೇರೆ ವಿಧಿ ನನಗೂ ಇಲ್ಲ !" ಎಂದನು ಬಾಲಕ ಲಟಲಟ ಕಡ್ಡಿ ಮುರಿದ ಹಾಗೆ.

"ಪೋರಾ ! ಬುದ್ಧಿಯಿಲ್ಲದೆ ದೇವರಿಲ್ಲವೆನ್ನುವಿ. ಎಲ್ಲದಕ್ಕೂ ಮೂಲ ಪರಬ್ರಹ್ಮ. ಅವನೇ ಆದಿ ದೇವ." ಎಂದು ಶಿವನು ಹೇಳಿದುದನ್ನು ಬಾಲನು ಖಂಡಿಸಿ, "ದೊಡ್ಡವನಾದ ನಿನಗೆ ಗೊತ್ತಿಲ್ಲವೇ? ಆದಿಶಕ್ತಿಯಿಂದ ವಿಶ್ವವೂ ಎಲ್ಲರೂ ಜನಿಸಿದ್ದಾರೆಂಬ ಸೂಕ್ಷ್ಮವನ್ನು ಹೇಳುತ್ತೇನೆ, ಕೇಳು." ಎಂದು ಬಾಲಕನು ಹೇಳ ತೊಡಗಿದನು :

ಮಹಾದೇವಿಯಾದ ಆದಿಶಕ್ತಿ, ಒಮ್ಮೆ ಮೈಮುರಿದುಕೊಂಡಾಗ, ಕೆಂಪು, ನೀಲ ಮತ್ತು ಬಿಳೀ ಬಣ್ಣಗಳ ಕಾಂತಿಗಳು ಹೊರಟುವು. ಕೆಂಪು ಕಾಂತಿಯಿಂದ ಈಶ್ವರನೂ, ನೀಲಕಾಂತಿಯಿಂದ



ವಿಷ್ಣುವೂ, ಬಿಳಿಯ ಕಾಂತಿಯಿಂದ ಬ್ರಹ್ಮನೂ ಹುಟ್ಟಿದರು. ಬ್ರಹ್ಮನೂ, ವಿಷ್ಣುವೂ ದೇವಿ ಹೇಳಿದ ಮಾತಿನಂತೆ ನಡೆಯಲು ಕೇಳಲಿಲ್ಲ. ಆಗ ಅವಳು ತನ್ನ ಮೂರನೇ ಕಣ್ಣನ್ನು ತೆರೆದು ಅದರಿಂದ ಹೊರಟ ಜ್ವಾಲೆಯಿಂದ ಅವರಿಬ್ಬರನ್ನೂ ಬೂದಿಯ ರಾಶಿಯಾಗಿ ಮಾಡಿದಳು. ಗಟ್ಟಿಗನಾದ ಮಹೇಶ್ವರನು ಮಾತ್ರ ಅವಳು ಹೇಳುವ ಹಾಗೆ ಕೇಳುತ್ತೇನೆಂದು ಹೇಳಿ, ಅವಳ ಮೂರನೇ ಕಣ್ಣನ್ನು ತನಗೆ ಕೊಡಬೇಕೆಂದೂ ಪ್ರಾರ್ಥಿಸಿದನು. ದೇವಿ ಸಂತುಷ್ಟಳಾಗಿ ತನ್ನ ಮೂರನೇ ಕಣ್ಣನ್ನು ತೆಗೆದು ಅವನ ಹಣೆಯಲ್ಲಿ ಒತ್ತಿಟ್ಟು ಅಲಂಕರಿಸಿದಳು. ಕೂಡಲೇ ಮಹೇಶ್ವರನು ಆ ಮೂರನೇ ಕಣ್ಣನ್ನು ತೆರೆದು ಅವಳನ್ನೇ ಸುಟ್ಟು ಬಿಟ್ಟನು. ಅವಳು ಉರಿದು ಹೋಗುವಾಗ, ಅಗ್ನಿಯ ರೇಣುಗಳು ಸುತ್ತಲೂ ವ್ಯಾಪಿಸಿ ತೇಜೋ ಮಂಡಲಗಳು ಏರ್ಪಟ್ಟುವು. ಸುತ್ತುಮುತ್ತಲೂ ಬೂದಿಯ ರಾಶಿ ಬಿದ್ದಿತು. ಆ ಬೂದಿ ರಾಶಿಗಳೇ ವಿಶ್ವವಾಗಿ ಮಾರ್ಪಟ್ಟಿತು. ಆ ಮೇಲೆ ಸುಟ್ಟು ಬೂದಿಯಾದ ದೇವಿ ಮತ್ತೆ ಯಥಾ ರೂಪದಲ್ಲೇ ಕಾಣಿಸಿದಳು. ಆದರಿಂದ ಅವಳಿಗೆ ಮಹಾಮಾಯೆ ಎಂಬ ಹೆಸರು ಬಂತು. ಅವಳು ಮಹೇಶ್ವರನನ್ನು ಮೆಚ್ಚಿಕೊಂಡು, ಅವನು ಲಯಕಾರಕನಾಗಿರುವಂತೆ ಆಜ್ಞೆ ಮಾಡಿದಳು. ಬ್ರಹ್ಮನನ್ನೂ, ವಿಷ್ಣುವನ್ನೂ ಅವರ ಬೂದಿಗಳಿಂದಲೇ ಮತ್ತೆ ಎತ್ತಿಕೊಂಡಳು ಆ ಕರುಣಾಮಯಿ. ಇನ್ನೂ ಉಳಿದಿದ್ದ ತನ್ನ ಬೂದಿಯಿಂದ ಮೂರು ಭಾಗಗಳನ್ನು ಮಾಡಿ, ವಾಣಿಯನ್ನೂ, ಲಕ್ಷ್ಮಿಯನ್ನೂ, ಉಮೆಯನ್ನೂ ರೂಪಿಸಿದಳು. ವಾಣಿಯನ್ನು ಬ್ರಹ್ಮನೂ, ಲಕ್ಷ್ಮಿಯನ್ನು ವಿಷ್ಣುವೂ, ಉಮೆಯನ್ನು ಮಹೇಶ್ವರನೂ ಅರ್ಧಾಂಗಿಗಳಾಗಿ ಸ್ವೀಕರಿಸಿ ಲೋಕಪಾಲನೆ ಮಾಡುವಂತೆ ಹೇಳಿ, ದೇವಿ ಅಂತರ್ಧಾನಳಾಗಿ ಹೋದಳು.

ಇದನ್ನೆಲ್ಲಾ ಬಾಲನು ಹೇಳಿ ನಿಲ್ಲಿಸಿದ ಮೇಲೆ ಶಿವನು, "ಮುಗಿಯಿತೇ ನಿನ್ನ ಕಟ್ಟು ಕಥೆ?" ಎಂದನು ವ್ಯಂಗವಾಗಿ.

"ನನ್ನದು ಕಟ್ಟುಕಥೆಯಾದರೆ ಬ್ರಹ್ಮದೇವ ಎಂದು ನೀನು ಹೇಳುವುದೆಲ್ಲ ಕೇವಲ ಬೋಳು ವೇದಾಂತ ಅಂದರೆ ತಪ್ಪೇನಿದೆ? ಎಲ್ಲವೂ ನಿಮ್ಮ ಬ್ರಹ್ಮನಿಂದಲೇ ಹುಟ್ಟಿತೆನ್ನುವುದಕ್ಕಿಂತಲೂ ಆದಿಶಕ್ತಿಯಿಂದ ಹುಟ್ಟಿತೆನ್ನುವುದು ಹೆಚ್ಚು ಯಥಾರ್ಥವಾಗಿ ಕಾಣುವುದಿಲ್ಲವೇ? ಎಲ್ಲ ಪ್ರಾಣಿಗಳೂ ಹೆಣ್ಣಿನಿಂದಲೇ ಹುಟ್ಟುವುದು ಪ್ರತ್ಯಕ್ಷ ಕಾಣುವುದಿಲ್ಲವೇ?" ಎಂದು ಕೇಳಿದನು ಬಾಲಕ. ಅವನ ಮಾತುಗಳನ್ನು ಕೇಳುತ್ತಿದ್ದಂತೆ ಅಲ್ಲಿದ್ದ ಗಂಡುಗಳ ಮುಖಗಳಲ್ಲಿ ಬೆಪ್ಪು ಬೆಜ್ಜರಗಳುಂಟಾದುವು. ಒಬ್ಬ ವಿಷ್ಣು ಮಾತ್ರವೇ ಬಾಲನನ್ನು ನೋಡಿ ಮುಗುಳು ನಗು ಸೂಸಿಕೊಂಡಿದ್ದನು. ಬ್ರಹ್ಮನು ಬಾಲನ ಮಾತು ಕೇಳಿ ಹೌದೆಂಬಂತೆ ತಲೆಯೊಲಿದನು. ದೇವಿಯರ ಮುಖಗಳು ಕಳೆಗೊಂಡು ವಿಕಸನವಾದುವು.

ಶಿವನು ಮುಖವನ್ನು ಕೆಂಪುಮಾಡಿಕೊಂಡು, "ನೋಡಲಿಕ್ಕೆ ಚೋಟುದ್ದದ ಹುಡುಗ ನೀನು: ಅದೆಲ್ಲಾ ಹೋಗಲಿ ಬಿಡು. ಹೆದರಬೇಡ. ನಿನ್ನನ್ನೇನೂ ಮಾಡಲಾರೆ. ಒಳ್ಳೆಯ ಮಾತಿನಲ್ಲಿ ಬಾಗಿಲನ್ನು ಬಿಡು. ಬದಿಗೆ ನಿಲ್ಲು" ಎಂದನು.

"ಓಹೋ! ಬೆಲ್ಲ ತೋರಿಸುವಿಯಾ? ನನ್ನ ಕಂಠದಲ್ಲಿ ಪ್ರಾಣವಿರುವಾಗ ನಿನ್ನನ್ನು ಒಳಗೆ ಬಿಡಲಾರೆ!" ಎಂದು ಬಾಲನು ಗಟ್ಟಿಯಾಗಿ ನಿರ್ಭಯದಿಂದ ನಿಂತನು.

ಶಿವನಿಗೆ ಮಿತಿಮೀರಿದ ಕೋಪ ಬಂತು. ಮೊದಲೇ ಯುದ್ಧಾಯಾಸದಿಂದ, ವಿಶ್ರಾಂತಿಯನ್ನು ಹಾರೈಸಿ ಬಂದವನು. ಕೂಡಲೇ ಪ್ರಮಥರ ಕಡೆಗೆ ಕತ್ತು ತಿರುಗಿಸಿ, ಚಿಟಿಕೆ ಹಾಕಿ, ಸನ್ನೆಮಾಡಿದನು ಶಿವ. ಬಾಲನನ್ನು ಎಳೆದು ಬಿಸುಡಲು ಪ್ರಮಥರು ಮುಂದೆ ಹಾರಿ ಬಂದರು.

ಬಾಲನು ನಗುತ್ತ "ಏನಂದುಕೊಂಡೆ ನನ್ನನ್ನು! ಸಣ್ಣವನೆಂದು ಕನಿಕರಿಸಿದ ಹಾಗೆ ನಟಿಸಿ ನಿನ್ನ ಗಣಗಳನ್ನು ನನ್ನ ಮೇಲೆ ಹುರಿದುಂಬಿಸುವುದು ಚೆನ್ನಾಗಿದೆಯೇನು? ಸರಿ, ನಾನೂ ಗಣಾಧಿಪತಿಯೇ ಎಂಬುದನ್ನು ತೋರಿಸುತ್ತೇನೆ" ಎಂದು ತಾಯಿ ಕೊಟ್ಟ ದಂಡಾಂಕುಶವನ್ನು ಬಲವಾಗಿ ನೆಲಕ್ಕೆ ಒಂದುಸಾರಿ ಕುಟ್ಟಿದನು.

ಮರುಕ್ಷಣ ನೆಲವೇ ಹೆತ್ತ ಹಾಗೆ ಇದೇ ಬಾಲನಂತಹ ಸಾವಿರಾರು ಪುತ್ರಗಣಪತಿಯರು ಮೇಲೆದ್ದು ನಂದಿಯನ್ನೂ, ಶೃಂಗಿಯನ್ನೂ, ಚಂಡೀಶ್ವರನನ್ನೂ ತಮ್ಮ ಕೈಯಲ್ಲಿದ್ದ ಅಂಕುಶ, ಗದೆ, ಶೂಲ, ಪಾಶಗಳಿಂದ ಪಶುಗಳನ್ನು ಓಡಿಸಿದಂತೆ ಓಡಿಸಿಬಿಟ್ಟರು. ಉಳಿದ ಶಿವಾನುಚರರೆಲ್ಲಾ ಜಾಡುಗಾಣದಂತೆ ಓಡಿಬಿಟ್ಟರು. ಪುತ್ರಗಣಪತಿ ಗಢಣವೂ ಮಾಯವಾಯಿತು.

ಈ ಅವಾಂತರವನ್ನು ನೋಡಿ ಶಿವನು ರುದ್ರನಾಗಿ ತ್ರಿಶೂಲವನ್ನೆತ್ತಿದನು. ಬಾಲನ ದಂಡಾಂಕುಶದಿಂದ ಹೊಡೆಯಲು ಶಿವನ ತ್ರಿಶೂಲವು ಖಂಗನೆ ಧ್ವನಿಸಿತು. ಬಾಲನು ನಗುತ್ತ, "ನನ್ನ ಅಮ್ಮ ಕೊಟ್ಟ ದಂಡವು ನನ್ನ ಕೈಯಲ್ಲಿರುವಾಗ ನನ್ನನ್ನು ಯಾರೇನೂ ಮಾಡಲು ಸಾಧ್ಯವಿಲ್ಲ. ನೀನು ನನ್ನನ್ನು ಏನೋ ಮಾಡಬೇಕೆಂದಿದ್ದರೆ, ಅದಕ್ಕೆ ವಿಘ್ನಮಾಡಲಾರೆ. ಹುಂ, ನಿರ್ವಿಘ್ನವಾಗಿ ನೆರವೇರಲಿ ನಿನ್ನ ಕಾರ್ಯ!" ಎಂದು ತನ್ನ ಕೈಯಲ್ಲಿದ್ದ ದಂಡಾಂಕುಶವನ್ನು ದೂರ ಬಿಸುಟನು. "ನನಗೆ ಆಜ್ಞೆಮಾಡುವಿಯಾ ಪೋರಾ!" ಎಂದು ಶಿವನು ಮೈ ತಿಳಿಯದ ಕೋಪದಿಂದ ತ್ರಿಶೂಲವನ್ನೆತ್ತಿ ಬಾಲನ ಕಂಠಕ್ಕೆ ಗುರಿಯಿಟ್ಟು ಬೀಸಿದನು. "ಅಮ್ಮಾ!" ಎಂದು ಕೂಗುವ ಬಾಲನ ತಲೆ, ಆಕಾಶದಲ್ಲಿ ಹಾರಿ ಜ್ಯೋತಿಯಂತೆ ಬೆಳಗುತ್ತಾ ಹೋಗಿ ಆಕಾಶದಲ್ಲೇ ಲೀನವಾಯಿತು.






ಸಮೀಪದಲ್ಲಿದ್ದು ದೂರ ದೂರ ಆಕಾಶದಲ್ಲಿ ಓಡುತ್ತಾ ಹೋದ ಪುತ್ರ ಗಣಪತಿಯ 'ಅಮ್ಮಾ' ಧ್ವನಿಯನ್ನು ಕೇಳಿ, ಒಳಗಿನಿಂದ ಪಾರ್ವತಿ ಓಡುತ್ತಾ ಬಂದು, ತಲೆಯಿಲ್ಲದೆ ಬಿದ್ದಿದ್ದ ಬಾಲಕನನ್ನು ನೋಡಿ, ಶಿವನನ್ನು ಚುರು ಚುರು ನೋಡುತ್ತ, "ಎಂಥಾ ಕೆಲಸ ಮಾಡಿದೆ ಮಹಾದೇವಾ! ನಮ್ಮ ಪುತ್ರನ ತಲೆ ತರಿದೆಯಾ? ನನ್ನ ಪತಿ ಪುತ್ರ ಹಂತಕ! ಪುತ್ರ ಹಂತಕ! ಇನ್ನೇನು ಗತಿಯೋ!" ಎಂದು ಚಕ್ಕನೆ ಕುಸಿಕುಳಿತು ಘೋರನೆ ಶೋಕಿಸ ತೊಡಗಿದಳು.

ಅದುವರೆಗೂ ಸ್ತಂಭೀಭೂತರಾಗಿ ನಿಂತಿದ್ದ ಗುಂಪಿನವರೊಳಗೆ ಕಲಕಲ ರವವೆದ್ದು ಸಮುದ್ರ ಘೋಷದಂತೆ ಕೇಳ ತೊಡಗಿತು. ದೊಡ್ಡ ತಪ್ಪು ಮಾಡಿ ನಿಂತವನಂತಿರುವ ಶಿವನನ್ನು ಎಲ್ಲರೂ ನೋಡುತ್ತಿದ್ದರು. ಈ ಪರಿಸ್ಥಿತಿಯನ್ನು ನೋಡುತ್ತಿದ್ದಂತೆ ಶಿವನ ಶರೀರದಿಂದ ಬೆವರಿಳಿಯ ತೊಡಗಿತು. ಮುಖವು ಕಪ್ಪಿಟ್ಟಿತು. ತಡವರಿಸುವ ಶಬ್ದದಿಂದ, "ನನಗೆ ತಿಳಿಯದ ಪುತ್ರನೆ? ಅದು ಹೇಗೆ!" ಎಂದನು, ಎಲ್ಲರಿಗೂ ಕೇಳುವಂತೆ ತನಗೆ ತಾನೇ.

ಆಗ ಪಾರ್ವತಿ ತನ್ನನ್ನು ಸಮಾಳಿಸಿಕೊಂಡು, ತಾನು ಮಾಡಿದ ಸ್ನಾನದ ಸುಗಂಧ ನಲುಗು ಮುದ್ದೆಯಿಂದ ಯಾವ ವಿಧವಾಗಿ ಪುತ್ರಗಣಪತಿ ಹುಟ್ಟಿದನೆಂಬುದನ್ನು ಹೇಳಿದಳು.

ಅದನ್ನು ಕೇಳಿ ಶಿವನು ತುಟಿ ಕಡಿದುಕೊಂಡು, "ಓ! ನಿನ್ನ ಸ್ವಂತ ಮಗಾ ಅನ್ನು. ಅದ್ದರಿಂದಲೇ ಅಮ್ಮ ಅಮ್ಮ ಅನ್ನುತ್ತಾ ತುಂಬಾ ಬಡಾಯಿ ಬಡಿದ. ನಮ್ಮ ಪುತ್ರನೆಂದೆಯಲ್ಲಾ? ನನಗೆ ಪುತ್ರನು ಹೇಗಾಗುತ್ತಾನೆ?" ಎಂದನು.

ಪಾರ್ವತಿಯ ಮುಖ ಬಿಳಿಚಿಕೊಂಡಿತು. ಏನು ಹೇಳುವುದೆಂದು ಅವಳಿಗೆ ತಿಳಿಯಲಿಲ್ಲ. ಆಗ ವಿಷ್ಣು ಬ್ರಹ್ಮನಿಗೆ ಸನ್ನೆ ಮಾಡಿದನು. ಕೂಡಲೇ ಬ್ರಹ್ಮನು ಮುಂದಕ್ಕೆ ಬಂದು, "ಹೌದು. ಪಾರ್ವತಿ ಹೇಳಿದುದರಲ್ಲಿ ತಪ್ಪೇನಿಲ್ಲ. ಯಾವಾಗ ಶಿವನು ಪಾರ್ವತಿಯ ಕೈಯನ್ನು ಹಿಡಿದನೋ ಆಗಲೇ ಶಿವನ ತೇಜಸ್ಸು ಪಾರ್ವತಿಯ ಶರೀರದೊಳಗೆಲ್ಲಾ ಪ್ರವೇಶಿಸಿ ಪುಲಕಿತ



ಗೊಳಿಸಿದೆ. ಆಗಿನಿಂದಲೇ ಶಿವನು ಪಾರ್ವತಿಯೊಂದಿಗೆ ಅರ್ಧ ಭಾಗವಾಗಿ ಅಂತರ್ಲೀನನಾಗಿಯೇ ಇದ್ದಾನೆ. ಪುತ್ರ ಗಣಪತಿ ಶಿವನ ಪುತ್ರನೂ ಹೌದು" ಎಂದು ಈ ಕಡೆಯ ಮಾತನ್ನು ತನ್ನ ನಾಲ್ಕು ಮುಖ ಗಳಿಂದಲೂ ನಾಲ್ಕು ದಿಕ್ಕುಗಳೂ ಕೇಳುವಂತೆ ಹೇಳಿದನು.

ಶಿವನು ಕೈ ಕೈ ಹಿಸುಕಿಕೊಂಡು ದಿಕ್ಕುಗಳನ್ನು ನೋಡುತ್ತಿರಲು, ಪಾರ್ವತಿ ಮಗನ ಕಳೇಬರದ ಮೇಲೆ ಬಿದ್ದು ಅಳುತ್ತಿರಲು, ಆಕಾಶದಿಂದ ಅದೇ ಬಾಲಗಣಪತಿಯ ಸ್ಪಷ್ಟ ಶಬ್ದವು ಹೀಗೆ ಹೊರಟಿತು :

"ಆಗಬೇಕಾದ್ದೇ ಆಯಿತು ! ಉತ್ತರ ದಿಕ್ಕಿಗೆ ತಲೆ ಯಿಟ್ಟು ನಿದ್ರಿಸುವ ತಲೆಯನ್ನು ತಂದು ನನಗೆ ಅಂಟಿಸಿರಿ. ನಾನು ಏಳುತ್ತೇನೆ !"

ಶಿವನ ನೋಟ ಮಾತ್ರದ ಆಜ್ಞೆಯಿಂದ ದೇವತೆ ಗಳೂ, ಪ್ರಮಥಗಣಗಳೂ ಹುಡುಕುತ್ತಾ ಹೊರಟರು. ಎಲ್ಲ ಹುಡುಕಿದರೂ ಉತ್ತರದಿಕ್ಕಿಗೆ ತಲೆಯಿಟ್ಟು ಮಲಗಿದವರಾರೂ ಕಾಣಲಿಲ್ಲ. ಹೀಗೆ ಹುಡುಕುತ್ತಾ ಹೋಗುತ್ತಿರಲು, ಸಹ್ಯಾದ್ರಿಯ ಪರ್ವತದ ಮೇಲೆ, ಬಿಲ್ವವನದಲ್ಲಿ ಬಿಳಿಯಾದ ಒಂದು ಆನೆಯಕರು ಮಾತ್ರ ಉತ್ತರ ದಿಕ್ಕಿಗೆ ತಲೆಯಿಟ್ಟು ನಿದ್ರಿಸಿ ಕೊಂಡಿತ್ತು. ನಿದ್ದೆಯಲ್ಲಿದ್ದರೂ ಶಿವಸ್ಮರಣೆ ಮಾಡಿ ಕೊಂಡಿತ್ತು ಅದು !

ಅದು ಸಾಧಾರಣ ಆನೆಯಕರುವಲ್ಲ. ದೇವ ಲೋಕದ ದೇವತಾ ಗಜವಾದ ಐರಾವತದ ಕುಮಾರ ಗಜೇಂದ್ರನೇ ಈ ಗಜಬಾಲ. ಐರಾವತವು ಇಂದ್ರನಿಗೆ ವಾಹನ. ಒಂದುಸಾರಿ ಇಂದ್ರನು ಐರಾವತದ ಮೇಲೆ ಪ್ರಯಾಣಿಸುತ್ತಿದ್ದಾಗ, ಕುಮಾರ ಗಜೇಂದ್ರನು ಇಂದ್ರ ನನ್ನು ಲಕ್ಷ್ಯಮಾಡದೆ ತನ್ನ ಆಟದಲ್ಲಿ ತಾನಿರುವು ದನ್ನು ನೋಡಿ, ಇಂದ್ರನು ಕೋಪದಿಂದ, "ಕೇವಲ ನನ್ನ ವಾಹನನ ಮಗನಿಗೆ ಇಷ್ಟು ಗರ್ವವೇ ! ಒಳ್ಳೆಯ ಮಾತಿನಲ್ಲಿ ಅಡ್ಡಬೀಳು !" ಎಂದು ದುರ್ಭಾಷೆಗಳಿಂದ ಬೈದನು.

ಕುಮಾರ ಗಜೇಂದ್ರನು ಶಾಂತವಾಗಿ, "ನನ್ನ ತಂದೆ ತನ್ನ ವಿಧಿಯನ್ನು ತನ್ನ ಪಾಡಿಗೆ ಮಾಡಿ ಕೊಂಡಿರುವಾಗ, ನನ್ನ ಗೊಡವೆಗೆ ಬರುವ ಅಗತ್ಯ ವೇನಿದೆ ? ನನ್ನನ್ನು ಕೂಡಾ ಸೇವಕ ಭಾವದಿಂದ ನೋಡುವುದು ಯಾವ ನ್ಯಾಯ ? ನಾನು ನಿನಗೆ ಹೆದರುವ ಅಗತ್ಯವಾದರೂ ಏನಿದೆ ? ನನಗೇನೂ ನಿನ್ನಿಂದ ಆಗಬೇಕಾದ್ದಿಲ್ಲ. ಸುಮ್ಮನೆ ಅಡ್ಡಬೀಳ ಬೇಕೆ ?" ಎಂದನು.

"ನಾನು ದೇವೇಂದ್ರನೆಂಬುದನ್ನು ನೆನಪಿಟ್ಟು ಕೊಂಡು ಮಾತಾಡೋ ಆನೇ ಮಗನೇ !" ಎಂದನು ಇಂದ್ರನು ದರ್ಪದಿಂದ.

"ಹೌದು. ನಾನು ಆನೆಮಗ ಗಜೇಂದ್ರ. ಇನ್ನೊಬ್ಬನು ನಾಗೇಂದ್ರನಾದರೆ, ಮತ್ತೊಬ್ಬನು ಪಕ್ಷೀಂದ್ರ. ಹೀಗೆ ಎಷ್ಟುಮಂದಿ ಇಂದ್ರರಿದ್ದರೂ ಇದ್ದಾರು. ನೂರು ಯಜ್ಞ ಮಾಡಿದರೆ ಸಾಕು.

ಇಂದ್ರ ಪದವಿ ಸಿಕ್ಕಿ ಬಿಡುತ್ತದೆ. ತಪಸ್ಸಿನಿಂದಲೂ ಸಾಧಿಸಿಕೊಳ್ಳಬಹುದು. ಆದ್ದರಿಂದಲೇ ಯಾರು ಎಲ್ಲಿ ಏನು ಧ್ಯಾನದಲ್ಲಿದ್ದರೂ ನಿನಗೆ ಕೆಟ್ಟ ಭಯ! ಇಂದ್ರತ್ವವು ಅದೇನು ದೊಡ್ಡ ಪದವಿಯೆಂದು ಕೊಂಡು ಯಾವ ಜ್ಞಾನದಿಂದ ಬೀಗುತ್ತಿರುವೆಯೋ! ಅದೆಂಥ ಇಂದ್ರ ಜ್ಞಾನದ ತಲೆಯೋ! ನಿನ್ನಂಥವನಿಂದಲೇ ಶ್ರೇಷ್ಠವಾದ ಇಂದ್ರ ಪದವಿಗೆ ಕೆಟ್ಟ ಹೆಸರು ಬಂತು" ಎಂದನು ಗಜೇಂದ್ರ.

ಇಂದ್ರನು ಕೋಪಾತಿರೇಕದಿಂದ ಕಿರುಚುತ್ತ, "ಹೋಗಾಚೆ! ನಿನ್ನ ತಲೆ ತರಿದು ಬೀಳಾ!" ಎಂದು ಬೈದನು.

ಗಜೇಂದ್ರನು ನಗುತ್ತ, "ಶಿವನಾಜ್ಞೆಯಿಲ್ಲದೆ ಒಂದು ಇರುವೆಯೂ ಕಡಿಯಲಾರದು. ಆ ತಲೆಯ ಮುಂದೆ ನಿನ್ನ ತಲೆ ಭಾಗುವುದೇನೋ ಆ ಶಿವನಿಗೇ ಗೊತ್ತು!" ಎಂದನು.

ಕುಮಾರ ಗಜೇಂದ್ರನು ದೊಡ್ಡ ಜ್ಞಾನಿಯೆಂದು ಅರಿಯದ ಗರ್ವಾಂಧನಾದ ಇಂದ್ರನು, "ಓಹೋ! ನನಗೇ ಭಕ್ತಿ ಕಲಿಸುವೆಯಾ? ಆ ಶಿವನನ್ನೇ ನಂಬಿ ಭೂಮಿಯಲ್ಲಿ ಬಿದ್ದಿರು." ಎಂದು ಗಜೇಂದ್ರನನ್ನು ಸ್ವರ್ಗದಿಂದ ಕೆಳಗೆ ದೂಡಿಬಿಟ್ಟನು. ಕುಮಾರ ಗಜೇಂದ್ರನು ಸಹ್ಯಾದ್ರಿಯ ಮೇಲೆ ಬಿದ್ದು ಶಿವ ಸ್ಮರಣೆ ಮಾಡುತ್ತಾ, ಶಿವನ ನಿವಾಸವಾದ 'ಕೈಲಾಸ' ವಿರುವ ಉತ್ತರ ದಿಕ್ಕಿಗೇ ತಲೆಯಿಟ್ಟುಕೊಂಡು ಮಲಗುತ್ತಿದ್ದನು.

ನಿದ್ರೆಯಲ್ಲಿಯೂ ಶಿವಸ್ಮರಣೆಯನ್ನು ಬಿಡದಿರುವ ಆ ಗಜೇಂದ್ರನ ತಲೆಯನ್ನು ದೇವತೆಗಳು ಕಡಿದು ತೆಗೆದುಕೊಂಡು ಹೋಗಿ ಶಿವನ ಮುಂದೆ ಇಟ್ಟರು. ಶಿವನು ಆ ತಲೆಯನ್ನು ಬಾಲನ ಕಳೇಬರಕ್ಕೆ ಅಂಟಿಸಿದ ಕೂಡಲೇ ಪುತ್ರ ಗಣಪತಿ ಆನೆಯ ಮುಖದೊಂದಿಗೆ ನವೋತ್ಸಾಹದಿಂದ ಸೊಂಡಿಲಾಡಿಸುತ್ತಾ ಎದ್ದುನಿಂತು ಎಲ್ಲರನ್ನೂ ನೋಡಿ ತಲೆ



ಯಾಡಿಸಿದನು. "ಬಂದೆನಲ್ಲಾ! ಇನ್ನೇಕೆ ದುಃಖಿಸುವೆ ಅಮ್ಮಾ?" ಎಂದನು ಪಾರ್ವತಿಯನ್ನು ನೋಡಿ.

"ನನ್ನ ಮುದ್ದು ಮಗನಿಗೆ ಆನೆಯ ಮುಖವೇ ಇದು? ನೋಡಲಾರೆ!" ಎಂದು ಪಾರ್ವತಿ ದುಃಖದಿಂದ ಕಣ್ಣು ಮುಚ್ಚಿಕೊಂಡಳು.

ಆಗ ಗಜಮುಖನು ಕಿವಿಗಿಂಪಾದ ಮುದ್ದು ಮಾತುಗಳಿಂದ, "ಅಮ್ಮಾ, ಏಕೆ ಚಿಂತಿಸುವೆ? ನಡೆಯಬೇಕಾದುದೆಲ್ಲಾ ನಿರ್ವಿಘ್ನವಾಗಿಯೇ ನಡೆದಿದೆಯಮ್ಮಾ? ಆ ದಿನ ಮದುವೆಯಾದ ಕೂಡಲೇ ನೀವಿಬ್ಬರೂ ಗೋಡೆಯ ಮೇಲೆ ಆನೆಗಳ ಚಿತ್ರವನ್ನು ನೋಡಿದಿರಿ. ಆಗ ಕಂಡು ಬಂದ ನನ್ನನ್ನು ಪುತ್ರ ವಾತ್ಸಲ್ಯದಿಂದ ನೋಡಿದಿರಲ್ಲವೆ? ಅವನೇ ನಾನಲ್ಲವೇ? ವಿಘ್ನೇಶ್ವರ! ನನ್ನ ನೆನಪಿಲ್ಲವೇ ಅಮ್ಮಾ?" ಎಂದನು.

ಪಾರ್ವತಿಯು ಮನೋನೇತ್ರಕ್ಕೆ ಆ ವಿಶೇಷವೆಲ್ಲಾ ಕಾಣಿಸಿತು, ಶಿವನಿಗೂ ಹಾಗೆಯೇ ವಿಘ್ನೇಶ್ವರನ



ಜ್ಞಾಪಕ ಬಂದಿತು. "ವಿಘ್ನೇಶ್ವರಾ! ನಮಗೆ ಪುತ್ರನಾಗಿ ಅವತರಿಸಿ ದವನು ನೀನೇ ಏನು? ಇದಕ್ಕಾಗಿಯೇ ನನ್ನನ್ನು ಹಾಗೆಲ್ಲಾ ತಡೆದು ಜಗಳಕ್ಕೆ ಕಾಲುಕೆದರಿ ನನಗೆ ಕೋಪ ಬರಿಸಿದೆಯಾ? ಈಗ ನನಗೆಲ್ಲಾ ಗೊತ್ತಾಗುತ್ತದೆ! ನನ್ನನ್ನೇ ಆಡಿಸಿ ಬಿಟ್ಟ ನಿನ್ನ ಲೀಲೆ ಅದ್ಭುತವಪ್ಪಾ! ಅತ್ಯದ್ಭುತ!" ಎಂದನು ಶಿವ ಆನಂದಬಾಷ್ಪ ಉದುರಿಸುತ್ತ.

"ಇಲ್ಲದಿದ್ದರೆ ಗಜಾಸುರನಿಗೆ ನೀನು ಕೊಟ್ಟ ವಾಗ್ದಾನವು ಹೇಗೆ ನೆರವೇರಿತು?" ಎಂದು ವಿಘ್ನೇಶ್ವರನು ನೆನಪು ಮಾಡಿದನು.

"ಆಹಾ! ನೆನಪು ಮಾಡಿದೆ! ನಾನು ಗಜಚರ್ಮವನ್ನು ಕೂಡಾ ಧರಿಸಿಕೊಳ್ಳಬೇಕಾಗಿದೆ. ಆನೆಯ ತಲೆಯಂತೂ ನನ್ನ ಕುಮಾರನಿಗೆ ಬಂದೇ ಬಂದಿತು. ಗಜಾಸುರನ ಭಕ್ತಿಯೂ ಸಾರ್ಥಕವಾಯಿತು!" ಎಂದು ಹೇಳಿ ಶಿವನು ಗಜ ಚರ್ಮವನ್ನು ತರಿಸಿ ಸೊಂಟಕ್ಕೆ ಬಿಗಿದುಕೊಂಡನು.

ಆಮೇಲೆ ಶಿವನು ವಿಘ್ನೇಶ್ವರನ ಮುಂದೆ ತಲೆಬಾಗಿ, "ವಿಘ್ನೇಶ್ವರಾ, ಎಲ್ಲರೂ ಕೂಡಿರುವ ಈ ಒಳ್ಳೆಯ ಸಮಯದಲ್ಲಿ ನಿನ್ನ ವಿಶ್ವರೂಪವನ್ನೊಮ್ಮೆ ತೋರಿಸು ನೋಡುತ್ತೇನೆ!" ಎಂದು ಅಪೇಕ್ಷಿಸಿದನು.

ಆಗ ವಿಘ್ನೇಶ್ವರನು ಆಕಾಶದ ಕಡೆಗೆ ಬೆಳೆದು ಮಹಾರೂಪನಾಗಿ, ಐದು ತಲೆಗಳೊಂದಿಗೆ ಕಾಣತೊಡಗಿದನು. ಭೂಮಿ, ನೀರು, ಅಗ್ನಿ, ಗಾಳಿ, ಆಕಾಶವೆಂಬ ಪಂಚಭೂತಗಳ ಬಣ್ಣಗಳಾದ ಹಸುರು, ಮೇಘವರ್ಣ, ಕೆಂಪು, ಬಿಳುಪು, ನೀಲ ಬಣ್ಣಗಳಿಂದ ಕಾಣುವ ಐದು ಗಜ ಮುಖಗಳು ಆ ವಿಶ್ವರೂಪದಲ್ಲಿ ಕಂಡು ಬಂದುವು. ಆ ತಲೆಗಳ ಮೇಲೆ ನಕ್ಷತ್ರಗಳು ಶಿರೋ ಪುಷ್ಪಗಳಾಗಿ ಹೊಳೆಯುತ್ತಿದ್ದುವು. ವಿಘ್ನೇಶ್ವರನ ದೊಡ್ಡದಾದ ಗುಂಡೋದರವು ಮಿರಿ ಮಿರಿ ಕಾಂತಿಯೊಂದಿಗೆ ಆಕಾಶದ ಹಾಗೆಯೇ ವಿಸ್ತಾರವಾಗಿ ಕಾಣುತ್ತಿತ್ತು. ಅವನಿಗಿರುವ ಅನೇಕ ಕೈಗಳಲ್ಲಿ ಅಂಕುಶ, ಕೊಡಲಿ, ಪಾಶ, ಕಲಶಗಳಲ್ಲದೆ ತ್ರಿಮೂರ್ತಿಗಳಿಗೆ ಸೇರಿದ ಶಂಖ ಚಕ್ರ ಗದಾಪದ್ಮಗಳೂ, ಡಮರುಕ, ತ್ರಿಶೂಲ, ವಜ್ರಾಯುಧಗಳೂ, ಕಮಂಡಲು, ವೀಣೆ, ಖಡ್ಗಗಳೂ, ಈಟಿ, ಶಕ್ತಿ ಮೊದಲಾದುವುಗಳೂ ಇದ್ದುವು. ತಲೆಯೆತ್ತಿ ಅವನ ಮಹಾರೂಪವನ್ನು ನೋಡುತ್ತಿರುವವರೆಲ್ಲಾ, ಕಣ್ಣು ಚುಚ್ಚುವಂತಹ ಅವನ ತೇಜಸ್ಸಿನ ಕಾಂತಿಯನ್ನು ನೋಡಲು ಶಕ್ತಿ ಸಾಲದೆ ತಲೆ ಬಗ್ಗಿಸಿಕೊಂಡರು. ಆಗ ಎಲ್ಲರ ಹೃದಯಗಳೂ ಹಗುರಾಗಿ ಮನಸ್ಸಿಗೆ ಹರ್ಷದ ಅನುಭವವಾಯಿತು.

ಆನಂದದಿಂದ ಉತ್ಸಾಹಿತಳಾದ ಸರಸ್ವತಿ ವೀಣೆಯನ್ನೆತ್ತಿಕೊಂಡು ವಿಘ್ನೇಶ್ವರನಿಗೆ ಪ್ರಿಯವಾದ ಹಂಸಧ್ವನಿ ರಾಗವನ್ನು ಮೀಟತೊಡಗಿದಳು. ಆ ರಾಗವು ಅಲೆಯಾಗಿ ಸಾಗುತ್ತಿರಲು, ಕೂಡಲೇ ನಾರದನು ತನ್ನ ತಂಬೂರಿಯಿಂದ ಮಧ್ಯೇ ಮಧ್ಯೇ ಮಾಯಾ ಮಾಳವ ಗೌಳ ರಾಗವನ್ನು ಜೋಡಿಸಿದನು.



ದೇವತೆಗಳೆಲ್ಲಾ ಇಂದ್ರನು ಮಾಡಿದ ರೀತಿಯಲ್ಲಿಯೇ ಮಹಾಗಣಪತಿಗೆ ನಮಸ್ಕಾರ ಮಾಡಿದರು. ಆಮೇಲೆ ವಿಶ್ವರೂಪ ತಳೆದ ವಿಘ್ನೇಶ್ವರನನ್ನು ನೋಡಿ ಶಿವನು, "ವಿಘ್ನೇಶ್ವರಾ, ನಿನ್ನ ಈ ರೂಪಕ್ಕೆ ಎಷ್ಟೋ ವಿಶೇಷಾರ್ಥಗಳಿರುವಂತೆ ನಮಗೆ ಕಾಣುತ್ತದೆ. ನಾವೆಲ್ಲಾ ಅದನ್ನು ಸ್ಪಷ್ಟವಾಗಿ ತಿಳಿದು ಕೊಳ್ಳಬೇಕೆಂಬ ಕುತೂಹಲದಲ್ಲಿದ್ದೇವೆ. ಹೇಳುವೆಯಾ?" ಎಂದನು.

ಅದಕ್ಕೆ ವಿಘ್ನೇಶ್ವರನು "ಮಹಾದೇವನಾದ ತಂದೆಯೇ! ಈ ವಿಶ್ವವು ಶಿವಶಕ್ತ್ಯರ ಸಮ್ಮೇಳನವಾದುದು. ವಿಶ್ವದ ಜನನೀಜನಕರಾದ ಪಾರ್ವತೀ ಶಿವರ ಪುತ್ರನಷ್ಟೇ ನಾನು. ನನ್ನ ವಿಶೇಷಗಳೆಲ್ಲವೂ ಅವರ ಮಹತ್ವದಿಂದ ಪ್ರಸಾದಿಸಲ್ಪಟ್ಟುವು. ಅಂಥವರಿಗೆ ಪ್ರಣಾಮ ಮಾಡುತ್ತೇನೆ" ಎಂದು ಕೈ ಜೋಡಿಸಿ ಸುಮ್ಮನಾದನು. ವಿಘ್ನೇಶ್ವರನ ವಿನಯ ವಿಧೇಯತೆಗಳಿಗೆ ಎಲ್ಲರೂ ಬೆರಗಾಗಿ ತಲೆದೂಗಿದರು.

ಇದರಿಂದ ಎಲ್ಲರೂ ಓಲಾಡುತ್ತಿರಲು, ಶಿವನು ಆನಂದಪರವಶತೆಯಲ್ಲಿ ನಟರಾಜನಾಗಿ ತಾಂಡವ ನೃತ್ಯಕ್ಕೆ ತೊಡಗಿದನು.

ಇಂದ್ರನೊಂದಿಗೆ ಮುಕ್ಕೋಟಿ ದೇವತೆಗಳು ಕೂಡಾ ತಲೆ ಬಗ್ಗಿಸಿ ಮಹಾ ಗಜ ಮುಖನಿಗೆ ನಮಸ್ಕಾರ ಮಾಡಿದರು. ಆಗ ಇಂದ್ರನ ಕಿವಿಗಳಲ್ಲಿ 'ಆ ತಲೆಯ ಮುಂದೆ ನಿನ್ನ ತಲೆ ಬಾಗುವುದೇನೋ' ಎಂದು ಕುಮಾರ ಗಜೇಂದ್ರನು ಹೇಳಿದ ಮಾತು ಗಿಂಗುರುಗುಟ್ಟಿತು. ಪುತ್ರ ಗಣಪತಿಗೆ ಅಂಟಿಸಿದ ತಲೆ ಕುಮಾರ ಗಜೇಂದ್ರನದೆಂದು ಇಂದ್ರನಿಗೆ ಗೊತ್ತಿತ್ತು. ಇಂದ್ರನು ಕಿವಿಗಳನ್ನು ಹಿಡಿದುಕೊಂಡು ಮೂರು ಸಾರಿ ಮುಂಡುಗಾಲೂರಿ ಮಣಿದು ಗಲ್ಲಬಡಿದು ಕೊಂಡು ಸಾಷ್ಟಾಂಗ ನಮಸ್ಕಾರಮಾಡಿ "ಗಜೇಂದ್ರಾ! ನೀನು ಮಹಾಜ್ಞಾನಿ, ನಾನು ಕೇವಲ ಅಜ್ಞಾನಿ. ನನ್ನ ಗರ್ವವನ್ನು ಕ್ಷಮಿಸು!" ಎಂದು ಮನಸ್ಸಿನೊಳಗೇ ಪ್ರಾರ್ಥಿಸಿಕೊಂಡನು.

ಆಗ ಬ್ರಹ್ಮನು ಮುಂದೆ ಬಂದು ಎಲ್ಲರನ್ನೂ ನೋಡಿ ಹೀಗೆಂದನು: "ಮಹಾವಿಷ್ಣು ಮತ್ಸ್ಯಾವತಾರವನ್ನೆತ್ತಿ, ಸೋಮಕಾಸುರನನ್ನು ಸಂಹರಿಸಿ ವೇದಗಳನ್ನು ಭದ್ರಪಡಿಸಿದನು. ಆಗ ವಿಘ್ನೇಶ್ವರನು ತುಂಬಿದ ಚಂದ್ರನಂತೆ ಕಾಂತಿಬೀರುತ್ತ, ನನ್ನ ಮುಂದೆ ಸಾಕ್ಷಾತ್ಕರಿಸಿ ಅವುಗಳನ್ನು ನನಗೆ ಒಪ್ಪಿಸಿದನು. ಆಗಷ್ಟೇ ನನಗೆ ಜ್ಞಾನಸಿದ್ಧಿಯುಂಟಾಯಿತು, ವಿಘ್ನೇಶ್ವರನನ್ನು ಕುರಿತು ಅನೇಕ ವಿಷಯಗಳನ್ನು ತಿಳಿದುಕೊಂಡೆನು. ಸಂಕಲ್ಪ ಸಿದ್ಧಿಗೆ ಮೂಲನಾದ ವಿಘ್ನೇಶ್ವರನನ್ನು ಧ್ಯಾನಿಸಿ ಸಕ್ರಮವಾಗಿ ಸೃಷ್ಟಿ ಕಾರ್ಯ ಸಾಧಿಸಲು ಸಾಧ್ಯವಾಯಿತು.

"ವಿಘ್ನೇಶ್ವರನು ವಿರಾಟ್ ಸ್ವರೂಪನು. ಹೀಗೆ ವ್ಯಾಪಿಸಿಕೊಂಡಿರುವವನಾದುದರಿಂದಲೇ ವಿಷ್ಣುವೆನಿಸಿಕೊಂಡಿದ್ದಾನೆ. ಶುಕ್ಲಾಂಬರಧರನಾದ ಈ ವಿಷ್ಣುವನ್ನು ಧ್ಯಾನಿಸಿಯೇ ಯಾವ ಕಾರ್ಯವನ್ನಾದರೂ

ನೆರವೇರಿಸಬೇಕು. ಆಕಾಶ, ಗಾಳಿ, ಅಗ್ನಿ, ನೀರು, ಮಣ್ಣು ಎಂಬ ಪಂಚ ಮಹಾಭೂತಗಣಗಳಿಗೆ ಅಧಿಪತಿಯಾದುದರಿಂದ ವಿಘ್ನೇಶ್ವರನು ಮಹಾ ಗಣಾಧಿಪತಿಯಾಗಿದ್ದಾನೆ. ಲಕ್ಷ್ಮೀ ಸರಸ್ವತಿಯರ ನಿಲಯವಾಗಿ ಅವನ ಮಧ್ಯಭಾಗವಿರುತ್ತದೆ. ವಿಶ್ವರೂಪದಲ್ಲಿ ಕಾಣುವ ವಿಘ್ನೇಶ್ವರನ ಐದು ತಲೆಗಳೂ ಶ್ವೇತನೀಲ, ಊದಾ, ಕೆಂಪು. ಶ್ಯಾಮ ನೀಲ, ಹಸುರು ಬಣ್ಣಗಳಲ್ಲಿ ಪಂಚಭೂತಗಳಿಗೆ ಪ್ರತಿರೂಪಗಳಾಗಿವೆ.

"ಆನೆಯ ತಲೆ ಬಲಕ್ಕೂ ಮೇಧಸ್ಸಿಗೂ ಚಿಹ್ನೆ. ಲಂಬೋದರವಿದ್ದ ಮಾತ್ರಕ್ಕೆ ದೊಡ್ಡಸ್ತಿಕೆಬಾರದು, ಅದಕ್ಕೆ ತಕ್ಕ ಮೇಧಸ್ಸೂ ಇರಬೇಕೆಂಬುದನ್ನು ಆನೆಯ ತಲೆ ತಿಳಿಸುತ್ತದೆ. ಹೊಸವು ಪ್ರವೇಶಿಸುತ್ತಿರುವಾಗ, ಹಳೆಯವು ಜೀರ್ಣವಾಗುತ್ತಿರುವಂತೆ, ಅನಂತಾಕಾಶದಲ್ಲಿ ನಕ್ಷತ್ರ ಮಂಡಲಗಳು, ಗ್ರಹಗಳು, ಉಪ ಗ್ರಹಗಳು, ಗೋಳಗಳು, ಲೋಕಗಳು ಪ್ರವರ್ತಿಸಿ ಕೊಂಡಿವೆಯೆಂಬುದನ್ನು ಲಂಬೋದರವು ನೆನಪಿಗೆ ತರುತ್ತದೆ. ಅಂದರೆ ಸೂರ್ಯ ಚಂದ್ರಾದಿ ಗ್ರಹ ಗಳೂ, ಮಹಾ ಮಂಡಲಗಳೂ ಶೂನ್ಯಾಕಾಶದಲ್ಲಿ ಗತಿ ತಪ್ಪದಂತೆ ಅಷ್ಟೊಂದು ಲಾಘವದಿಂದ ತಿರುಗುತ್ತಿವೆಯೆಂದೂ, ವಿಶ್ವಸ್ವರೂಪವು ತೂಕ ತಪ್ಪದಂತೆ ಪುಟ್ಟಲಿಯ ಮೇಲೆ ಆನೆಯ ಸವಾರಿಯಂತೆ ಚಿತ್ರಾತಿಚಿತ್ರವಾದ ವಿಜ್ಞಾನದಿಂದ ಈ ಮಹಾಗಣಪತಿ ತುಂಬಿರುತ್ತಾನೆ. ವಿಶ್ವವಿಜ್ಞಾನಕ್ಕೆ ವಿಘ್ನೇಶ್ವರನೊಂದು ಸಂಕೇತ. ಅಂತಲೇ ವಿಜ್ಞಾನೇಶ್ವರ ನೆನಿಸುತ್ತಾನೆ.

"ವಿಶ್ವಕ್ಕೆ ಅಧಿನೇತನಾಗಿ, ನಿಯಂತನಾಗಿ ಅಂಕುಶವನ್ನು ಧರಿಸಿಕೊಂಡಿದ್ದಾನೆ. ಬುದ್ಧಿ ಬಲಕ್ಕೆ ವಿಘ್ನೇಶ್ವರನೊಂದು ಗುರುತು. ಬುದ್ಧಿ ಅತಿರೇಕವಾಗಿ ಹುಚ್ಚುಚ್ಚಾಗಿ ಪ್ರವರ್ತಿಸದಂತೆ, ಮಾವಟಿಗನು ಆನೆಯನ್ನು ನಡೆಸುವ ಹಾಗೆ ವಿಘ್ನೇಶ್ವರನೂ



ನಡೆಸುತ್ತಾನೆಂಬುದಕ್ಕೆ ಅಂಕುಶವು ಗುರುತಾಗಿದೆ. ಸರ್ವ ಸೃಷ್ಟಿಗಳೂ ತಮ್ಮ ತಮ್ಮ ಧರ್ಮಗಳಿಗೆ ಕಟ್ಟುಗೊಂಡಿರಬೇಕೆಂತಲೇ ಅವನ ಕೈಯಲ್ಲಿರುವ ಪಾಶವು ಸೂಚಿಸುತ್ತದೆ. ಪರಿಪೂರ್ಣತೆಯಿಂದ ತುಂಬಿದ ಕೊಡವಾಗಿ ತುಳುಕದಿರುವುದನ್ನು, ಅವನ ಕೈಯಲ್ಲಿರುವ ಕಲಶವು ತೋರಿಸುತ್ತದೆ. ವಿಘ್ನಗಳನ್ನು ತರಿದು ಹಾಕಲು ಪರಶುವನ್ನು ಧರಿಸಿದ್ದಾನೆ. ವಿಶ್ವವು ನಾದಾತ್ಮಕವಾದುದು. ಅನೇಕ ಓಂಕಾರ ಝೇಂಕಾರ ಗಳನ್ನು ಧ್ವನಿಸುವ ವಿಶ್ವವೀಣೆಯನ್ನು ವಿಘ್ನೇಶ್ವರನು ಮೀಟುತ್ತಾನೆ. ಚರಾಚರವಾದ ಪ್ರಪಂಚದ ಜೀವ ಕೋಟಿಗಳ ಮೊರೆಗಳನ್ನು ಕೇಳಲಿಕ್ಕೇ ಅಷ್ಟು ದೊಡ್ಡ ಕಿವಿಗಳು. ಕಣ್ಣುಗಳು ಸಣ್ಣವಾದರೂ ಸೂಕ್ಷ್ಮದರ್ಶನ ಶಕ್ತಿಯುಳ್ಳ ನಿಶಿತದೃಷ್ಟಿಯುಳ್ಳವು. ಅಣುರೇಣು ತೃಣಕಾಷ್ಠ ಸಹಿತವಾದ ಬ್ರಹ್ಮಾಂಡಗಳನ್ನೆಲ್ಲಾ ಪರಿಶೀಲಿಸುವ ದೃಷ್ಟಿಗಳು ಅವು. ತಿರುಗಿಕೊಂಡಿರುವ ವಕ್ರತುಂಡಗಳ ಮುಂದೆ ಯಾವ ವಿಘ್ನಗಳೂ ನಿಲ್ಲ

ಲಾರವು. ಆ ಸೊಂಡಿಲು ಎಷ್ಟುದ್ದವಾದರೂ ಸಾಗಿ ಎಷ್ಟು ದೂರದಲ್ಲಿದ್ದುದನ್ನಾದರೂ ಹಿಡಿಯಬಲ್ಲುದು.

"ಇಷ್ಟೇ ಅಲ್ಲದೆ ಸಸ್ಯ ಸಮೃದ್ಧಿಗೂ ವಿಘ್ನೇಶ್ವರನು ಅಧಿನಾಥನಾಗಿದ್ದಾನೆ. ಅವನು ಭೋಜನ ಪ್ರಿಯನಾದುದರಿಂದ ಪ್ರಪಂಚದ ಪ್ರಾಣಿಗಳೆಲ್ಲಾ ಹೊಟ್ಟೆಯ ಪಾಡಿಗೇ ಕಾರ್ಯವೆಸಗುವುದನ್ನು ನ್ಯಾಯವೆಂದು ಸೂಚಿಸುತ್ತಾನೆ. ಆಹಾರದಿಂದ ಪಿಂಡವೃದ್ಧಿಯೂ, ಅದರಿಂದ ಬುದ್ಧಿಗೆ ಬಲವೂ ಉಂಟಾಗುತ್ತದೆ. ಹಬ್ಬ ಹಾಡಿಗಳನ್ನು ಪ್ರೋತ್ಸಾಹಿಸುವವನು ಗಣಪತಿ. ಬಗೆ ಬಗೆಯ ಭಕ್ಷ್ಯಭೋಜ್ಯಗಳು ಅವನಿಗೆ ಪ್ರಿಯವಾದುದರಿಂದ ಜನರಿಗೂ ಪ್ರಿಯವಾಗಿರುತ್ತವೆ. ಭಾದ್ರಪದ ಮಾಸದಲ್ಲಿ ಆನೆಯಂತಹ ಮೇಘಗಳು ಸೊಂಡಿಲು ಗಾತ್ರದ ವರ್ಷಧಾರೆಯನ್ನು ಸುರಿಸುತ್ತವೆ. ಮೇಘಗಣಗಳಿಗೂ ಗಣನಾಥನೇ ನಾಯಕ. ವಿಘ್ನೇಶ್ವರನು ಅವತರಿಸಿದ ಈ ದಿನಗಳು ಭಾದ್ರಪದ ಮಾಸವೇ. ಭಾದ್ರಪದ ಶುಕ್ಲ ಚತುರ್ಥಿಯ ದಿನ ವಿಘ್ನೇಶ್ವರನನ್ನು ಅರ್ಚಿಸಿದವರಿಗೆ ವಿಘ್ನಗಳನ್ನು ತೊಲಗಿಸಿಕೊಳ್ಳುವ ಬುದ್ಧಿಬಲವುಂಟಾಗಿ, ಸಂಕಲ್ಪವು ಕಾರ್ಯರೂಪದಲ್ಲಿ ಸಿದ್ಧಿಸುತ್ತದೆ.

"ತನ್ನ ದಂತದ ಕಂಠವನ್ನು ಎತ್ತದೆಯೇ ವಿಘ್ನೇಶ್ವರನು ಬರೆಯುವ ಮಹಾಭಾರತವು ಪಂಚಮ ವೇದವೆನಿಸಿ ಅಕ್ಷರಸಿದ್ಧಿ ಹೊಂದಿ ಪ್ರಪಂಚದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವಂತಾಗುತ್ತದೆ. ಹೀಗೆಲ್ಲಾ ಇರುವ ಈ ವಿಘ್ನರಾಜನ ಮಹಿಮೆಗಳನ್ನು ವರ್ಣಿಸಲು ನನ್ನ ನಾಲ್ಕು ಮುಖಗಳೂ ಸಾಲವು. ಯಾವ ಕಾರ್ಯವನ್ನಾದರೂ ಮಾಡುವುದಕ್ಕೆ ಮೊದಲು, ಈ ವಿಘ್ನೇಶ್ವರನನ್ನು ಧ್ಯಾನಿಸಿ ಪೂಜಿಸಿ ಮತ್ತೆ ಪ್ರಾರಂಭಿಸಬೇಕು. ಆಗ ಶುಭವಾಗುತ್ತದೆನ್ನುವುದನ್ನು ತನ್ನ ಅಭಯ ಮುದ್ರೆಯಿಂದ ಸೂಚಿಸುತ್ತಾನೆ. ಮಹಾ ಗಣಪತಿ ಎಲ್ಲರಿಗೂ ಪ್ರಥಮ ಆರಾಧ್ಯ ದೇವನಾಗಿದ್ದಾನೆ!" ಎಂದು ಬ್ರಹ್ಮನು ಹೇಳಿದನು.

ಆಗ ಶಿವನು ಎಲ್ಲರನ್ನೂ ನೋಡಿ, "ಬ್ರಹ್ಮ ವಾಕ್ಯ ಕೇಳಿದಿರಷ್ಟೆ? ವಿಘ್ನೇಶ್ವರನೇ ಪ್ರಥಮ ಪೂಜ್ಯನಾಗಿರುವನು! ನಿಜ!" ಎಂದನು.

ಎಲ್ಲರೂ ನಿಜನಿಜವೆಂದು ತಲೆಯಾಡಿಸಿದರು. ನಾರದನು ಹಂಸಧ್ವನಿ ರಾಗವನ್ನು ಮೊಳಗಿಸುತ್ತಿರಲು, ಸರಸ್ವತಿ ಹಂಸಾನಂದಿ ರಾಗವನ್ನು ಹೊಂದಿಸಿದಳು. ಆ ಸಂರಂಭದಲ್ಲಿ ಪಾರ್ವತಿ ಮಹಾ ವಿಘ್ನೇಶ್ವರನ ಮುಂದೆ ನಮಸ್ಕರಿಸಲು ಬಾಗಿದಳು. ಆ ಕ್ಷಣದಲ್ಲಿ ವಿಶ್ವರೂಪನಾಗಿದ್ದ ಗಣಪತಿ ಒಮ್ಮೆಗೇ ಚಿಕ್ಕವನಾಗಿ "ಅಮ್ಮಾ! ಬೇಡ!" ಎಂದು ಅವಳನ್ನು ತಡೆದು, ತಾಯಿಯ ಕಾಲುಗಳನ್ನು ಎರಡು ಕೈಗಳಿಂದಲೂ ತಬ್ಬಿಕೊಂಡನು, ಕುಬ್ಜ ವಿನಾಯಕ!






ಮುದ್ದು ಗಣಪತಿಯನ್ನು ನೋಡಿದ ಕೂಡಲೇ ಪಾರ್ವತಿಯ ಹೃದಯದಲ್ಲಿ ಪುತ್ರ ವಾತ್ಸಲ್ಯವು ಉಕ್ಕಿತು. ದುಃಖವೆಲ್ಲಾ ಹಾರಿಹೋಯಿತು. ಮಗುವಿನ ದೃಷ್ಟಿ ತೆಗೆದು ನಿಟಿಕೆ ಮುರಿದು, ಅವನ ಪುಟ್ಟ ಮೆತ್ತಗಿನ ಗಜಶಿರವನ್ನು ತಡವಿ ಆಘ್ರಾಣಿಸಿ, ಎತ್ತಿ ಕೊಂಡು ಮುದ್ದಿಸಿದಳು.

ಅದನ್ನು ನೋಡಿದ ಕೂಡಲೇ ಶಿವನಲ್ಲಿ ಪುತ್ರ ವಾತ್ಸಲ್ಯವು ತುಂಬಿ ಬಂತು. ಗಣೇಶನನ್ನು ಎತ್ತಿಕೊಳ್ಳ ಬೇಕೆನಿಸಿ ಕೈಗಳನ್ನು ಚಾಚಿದನು. ಕೂಡಲೇ ಗಣಪತಿ ಪಾರ್ವತಿಯ ಕೈಯಿಂದ ಜಾರಿ, ಶಿವನು ಮತ್ತೆ ತನಗೇನು ಮಾಡುವನೋ ಎಂಬ ಭಯದಿಂದ ತಪ್ಪಡಿಗಳಿಡುತ್ತ ದೂರ ಓಡುವ ಬಾಲ ಗಣಪತಿಯ ಚೇಷ್ಟೆ ನೋಡಿ, ಎಲ್ಲರೂ ಗಲಗಲ ನಕ್ಕರು.

ಶಿವನು ಓಡಿ ಅವನನ್ನು ಹಿಡಿದೆತ್ತಿ, "ಕಂದಾ. ವಿಘ್ನೇಶ್ವರಾ ! ನಿನ್ನನ್ನು ಮಗನಾಗಿ ಪಡೆದು ನಾವು ಧನ್ಯರಾದೆವು ! ಚಿರಂಜೀವಿಯಾಗಿರು !" ಎಂದು ಮುದ್ದಾಡಿದನು. ವಿಘ್ನೇಶ್ವರನು ಕೆಳಗೆ ಹಾರಿ, "ಏನು ಮಾತು ಹೇಳಿದಿರಿ ಅಪ್ಪಾ ! ನಾನು ನಿಮ್ಮ ಮಗ. ಧನ್ಯನಾದವನು ನಾನು !" ಎಂದು ಹೇಳಿ, ಪಾರ್ವತಿಯ ಪಾದಗಳನ್ನು ಪುಟ್ಟ ಸೊಂಡಿಲಿನಿಂದ ಮುಟ್ಟಿ ಕಣ್ಣಿಗೊತ್ತಿಕೊಂಡನು. ಆಮೇಲೆ ಗಣಪತಿ ವಿಷ್ಣುವಿನ ಮುಂದೆ ಹೋಗಿ ಅಡ್ಡ ಬಿದ್ದನು.

ವಿಷ್ಣು ನಗುತ್ತ "ಬಾರೋ ನನ್ನ ಸೋದರ ಅಳಿಯನೇ !" ಎಂದು ಅವನನ್ನು ಎಬ್ಬಿಸಿ ಎಳೆದು ಕೊಂಡು "ಕಲ್ಯಾಣಮಸ್ತು" ಎಂದು ಆಶೀರ್ವಾದ ಮಾಡಿದನು.

ಆಗ ವಿಷ್ಣುವಿನ ಕಾಂತಿಯೊಂದಿಗೆ ವಿಘ್ನೇಶ್ವರನು ನೀಲಾಕಾಶದ ರಂಗಿನಲ್ಲಿ ದಿವ್ಯನಾಗಿ ಬೆಳಗಿದನು. ನೋಡುವವರ ಮನಸ್ಸಿಗೆ ವಿಷ್ಣು ವಿಘ್ನೇಶ್ವರರಲ್ಲಿ ಯಾವುದೋ ಹೋಲಿಕೆ ಇರುವಂತೆ ಕಾಣಿಸಿತು. ಸೋದರಮಾವ ಸಂಬಂಧವೆಂದರೆ ಇದೇ ಎನಿಸಿತು ಎಲ್ಲರಿಗೂ.

ಅಲ್ಲಿಂದ ವಿನಾಯಕನು ಬ್ರಹ್ಮನಿಗೂ ನಮಸ್ಕಾರ ಮಾಡಿದನು. "ಪ್ರಥಮ ಪೂಜಿತನಾಗಿರೋ ಬೊಜ್ಜು

೫. ವಿಜಯ ವಿಘ್ನೇಶ್ವರ



ಗಣಪಯ್ಯಾ !" ಎಂದು ಹೇಳುತ್ತಾ ಬ್ರಹ್ಮನು ಅವನ ಸೊಂಡಿಲನ್ನು ಚಿವುಟಿ ಡೊಳ್ಳು ಹೊಟ್ಟೆಯನ್ನು ತಟ್ಟಿದನು.

ಆಮೇಲೆ ವಿಘ್ನೇಶ್ವರನು ಲಕ್ಷ್ಮಿಗೂ ಸರಸ್ವತಿಗೂ ನಮಸ್ಕಾರ ಮಾಡಿದನು. ಅವರಿಬ್ಬರೂ ಕೂಡಿಯೇ ಅವನನ್ನು ಎತ್ತಿಕೊಂಡು ಅವನ ಆನೆಗಲ್ಲಗಳಿಗೆ ಮುದ್ದಿಟ್ಟು, "ನಾವು ಈ ವಿಘ್ನೇಶ್ವರನ ಎರಡು ಬದಿಗಳಲ್ಲಿಯೂ ಅತ್ತೆ ಸೊಸೇ ಕಚ್ಚಾಟ ಮರೆತು ಓಗೇ ಸ್ನೇಹದಲ್ಲಿರುತ್ತೇವೆ" ಎಂದು ಹೇಳಿ ಪಾರ್ವತಿಯನ್ನು ನೋಡಿ "ಏನಮ್ಮಾ ಪಾರ್ವತೀ ! ನಾವು ಮೂವರೂ ಒಂದೇ ಮೂರಮ್ಮಗಳ ಒಡಹುಟ್ಟುಗಳೆಂದು ಮಹಾಜ್ಞಾನಿಯಾದ ಈ ಪುತ್ರ ಗಣಪತಿ ವಿವರಿಸಿ ಹೇಳಿಯೇ ಇದ್ದಾನೆ. ಆಮೇಲೆ ನಾವು ಬಿಡಿಬಿಡಿಯಾಗಿ ಮತ್ತೆ ಕ್ಷೀರಸಾಗರದಿಂದ ಲಕ್ಷ್ಮಿಯಾಗಿ, ಬ್ರಹ್ಮನ ನಾಲಗೆಯಿಂದ ಸರಸ್ವತೀ ವಾಣಿಯಾಗಿ, ಮೊದಲು ದಕ್ಷಪುತ್ರಿಯಾಗಿದ್ದು ಆಮೇಲೆ ಪಾರ್ವತೀ ಉಮೆಯಾಗಿ ಅವತರಿಸಿದವರು. ಅಂತಹ ನಾವು ಹೇಳುತ್ತೇವೆ: ಜಯಲಕ್ಷ್ಮಿ ಎಂಬ ಸಿದ್ಧಿಯೂ ವಿದ್ಯಾವತಿ ಎಂಬ ಬುದ್ಧಿಯೂ ಈ ವಿನಾಯಕನಿಗೆ ತಕ್ಕ ವಧುಗಳು. ಇನ್ನು ವಿಘ್ನೇಶ್ವರನ ಮದುವೆಯ ಸಂಭ್ರಮ ನೋಡಬೇಕು ನಾವು" ಎಂದರು.

"ನಾನಂತೂ ಇವನು ಮದುವೆಯಾದರೂ ಇವನನ್ನು ಸ್ಥಿರವಾಗಿ ಅಂಟಿಕೊಂಡಿದ್ದು ಲಕ್ಷ್ಮೀಶರ ವಿಘ್ನೇಶ್ವರನೆಂದು ಇವನಿಗೆ ಹೆಸರು ಬರಿಸುತ್ತೇನೆ. ಸಿದ್ಧಿ ಸ್ವರೂಪಿಣಿಯಾದ ಜಯಲಕ್ಷ್ಮಿ ನನ್ನ ಅಂಶದವಳೇ ಆದ್ದರಿಂದ ಇದಕ್ಕೆ ಆಕ್ಷೇಪಣೆ ಹೇಳಲಾರಳು" ಎಂದಳು ಲಕ್ಷ್ಮಿ.

"ನಾನೂ ವಿಘ್ನೇಶ್ವರನನ್ನು ಬಿಡಲಾರೆ. ಜ್ಞಾನ ಪ್ರದಾತನಾಗುವಂತೆ ವಿಜ್ಞಾನದಾಯಕನಾಗುವಂತೆ ನಾನೂ ಇವನೊಂದಿಗಿರುತ್ತೇನೆ. ಮಕ್ಕಳಿಗೆ ಅಕ್ಷರಾಭ್ಯಾಸಕ್ಕೆ ಮೊದಲು ಮಕ್ಕಳಿಂದ ಅರಸಿನ ಮುದ್ದೆಯ ವಿಘ್ನೇಶ್ವರನಿಗೆ ಪೂಜೆ ಮಾಡಿಸಿ, ವಿಘ್ನೇಶ್ವರನ ಪರಿಪೂರ್ಣ ಸ್ವರೂಪ ಸಂಕೇತವಾದ ಓಂ ಶ್ರೀ ಸುತ್ತಿಸಿ ಇವನಿಗೆ ನಮಸ್ಕರಿಸುವಂತೆ ನನ್ನ ಅಂಶದವಳಾದ ವಿದ್ಯಾವತಿ ಬುದ್ಧಿರೂಪಿಣಿಯಾಗಿ ಇವನ ನಾಯಕಿಯಾಗಿದ್ದು ಮಾಡಿಸುತ್ತಾಳೆ" ಎಂದಳು ಸರಸ್ವತಿ.

ಆಗ ವಿಘ್ನೇಶ್ವರನು ಚಿಂತೆಯ ಮುಖ ಮಾಡಿಕೊಂಡು ಎಲ್ಲರನ್ನೂ ನೋಡಿ, "ನೋಡಿದಿರಾ, ದೊಡ್ಡವರ ರೀತಿ ಹೇಗಿದೆಯೆಂದು ? ಮದುವೆ ಮಾಡಿಕೊಂಡು ಅವರು ಪಡುವ ಕಷ್ಟಾವಸ್ಥೆಗಳನ್ನೆಲ್ಲಾ ಮಕ್ಕಳು ಕೂಡಾ ಪಡಬೇಕೆಂದು ಮದುವೆ ಮಾಡುವ ಅವಸರ ತೋರಿಸುತ್ತಾರೆಯೇ ಹೊರತು ಹಾಯಾಗಿರಲು ಬಿಡುವವರಲ್ಲ. ಅದರಲ್ಲೂ ಅಮ್ಮಂದಿರಿಗೆ ಹೆಚ್ಚು ಅವಸರ ! ಸಂಭ್ರಮ !" ಎಂದನು.

ಆಗ ವಿಷ್ಣು, "ಹಾಗಲ್ಲವೋ ಕಂದಾ, ಅಣಿಮಾದಿ ಸಿದ್ಧಿಗಳಿಗೂ, ಅಷ್ಟೈಶ್ವರ್ಯಗಳಿಗೂ ಮೂಲವಾಗಿ

ಎಂಟುಮಂದಿ ಸಿದ್ಧಿಗಳಿದ್ದಾರೆ. ನಕ್ಷತ್ರಗಳು ಪೂರ್ಣ ಚಂದ್ರನನ್ನು ಸೇವಿಸುವ ಚಂದದಲ್ಲಿ ನಿನ್ನನ್ನೂ ಸಹ ನೋಡಬೇಕೆಂದು ಎಲ್ಲರಿಗೂ ಆಶೆ, ಆವಸರ" ಎಂದನು. "ಓಹೋ! ಹಾಗೇನು? ಸರಿಸರಿ. ನೀನು ಮುಂದೆ ಕೃಷ್ಣಾವತಾರದಲ್ಲಿ ಅಷ್ಟ ಮಹಿಷಿಗಳೊಂದಿಗೆ ಆನಂದವಾಗಿರುವಿಯಂತೆ. ನನಗೆ ಬೇಡಪ್ಪಾ!" ಎಂದನು ವಿನಾಯಕ.

ವಿಷ್ಣು ಮಂದಹಾಸದಿಂದ, "ನಿನ್ನ ಮಾತು ಖಂಡಿತಾ ನಡೆಯುತ್ತದೆ. ನಿನಗೆ ಮಾತ್ರ ಹತ್ತು ಮಂದಿ ವಧುಗಳೊಂದಿಗೆ ಮದುವೆಯಾಗುವುದೂ ಖಂಡಿತ! ನೆನಪಿಟ್ಟುಕೋ" ಎಂದನು.

"ಹಾಗಿದ್ದರೆ ವಿಘ್ನೇಶ್ವರನ ವಿವಾಹಕ್ಕೆ ವಿಘ್ನದ ಮೇಲೆ ವಿಘ್ನವೆಂದು ಗಾದೆ ಹುಟ್ಟುವ ಹಾಗೆ ಮಾಡುತ್ತೇನೆ. ನೋಡಿ ಬಿಡುವಾ" ಎಂದನು ವಿಘ್ನೇಶ್ವರ.

"ಸಾವಿರ ವಿಘ್ನಗಳು ಬಂದರೂ ವಿಘ್ನೇಶ್ವರನ ವಿವಾಹ ತಪ್ಪದು!" ಎಂದು ಬ್ರಹ್ಮನು ಹೇಳುತ್ತಲೇ, ಆವನ ಸ್ವರದೊಂದಿಗೆ ಹೌದು ಹೌದೆಂದು ಎಲ್ಲರೂ ಸ್ವರ ಸೇರಿಸಿದರು.

ಆಗ ನಾರದನು ಮುಂದೆ ಬಂದು, "ಅಲ್ಲಯ್ಯಾ ವಿಜ್ಞಾನೇಶ್ವರಾ! ನೀನು ವಾಚಾಳಿತನದಲ್ಲಿ ನನ್ನನ್ನೇ ಮೀರಿಸಿ ಬಿಟ್ಟೆಯಾದರೂ. ಮದುವೆಯಿಂದ ತಪ್ಪಿಸಿಕೊಳ್ಳಲು ಯಾರಿಂದಾದೀತು? ನಾನು ಸಂಸಾರ ಸಾಗರದಲ್ಲಿ ಈಜಲು ಕೈಲಾಗದ್ದರಿಂದಲೇ ಹೀಗೆ ಸನ್ಯಾಸಿಯಾಗಿ ತಿರುಗುತ್ತಿದ್ದೇನೆ. ಅಪ್ಪಾ ಜ್ಞಾನೇಶ್ವರಾ! ಕಲ್ಯಾಣ ಮಸ್ತು ಎಂಬುದಕ್ಕೆ ತಲೆ ಬಾಗಿಬಿಡು. ಉದ್ಯೋಗವೇ ಪುರುಷಲಕ್ಷಣವಾದುದರಿಂದ ಪುರುಷೋತ್ತಮರಾದ ಆದಿ ದೇವತೆಗಳೆನಿಸಿದ ಪ್ರಮುಖರೆಲ್ಲಾ ಮದುವೆ ಮಾಡಿಕೊಂಡು ಸೃಷ್ಟಿ ಸ್ಥಿತಿಲಯಗಳೆಂಬ ಉದ್ಯೋಗದಲ್ಲಿ ನಿರತರಾಗಿದ್ದಾರೆ. ಉದ್ಯೋಗಿಗಳಿಗೆ ನವಚೇತನ ಬರಬೇಕಾದರೆ



ಹೆಂಡತಿಯರೂ ಬೇಕಲ್ಲ? ಈ ನಿಯಮವನ್ನು ತಪ್ಪಿಸಿಕೊಳ್ಳಬೇಕೆಂದರೆ, ನೀನೂ ನಾನೂ ಯಾವ ಮೂಲೆಯವರೋ!" ಎಂದನು.

ವಿಘ್ನೇಶ್ವರನು ನಕ್ಕು, "ಓಹ್ಹೋ! ನಿನಗೂ ಮದುವೇ ಹುಚ್ಚು ತಗಲಿದ ಹಾಗಿದೆ! ಸ್ವಯಂವರಕ್ಕೆ ಕೂಡಾ ಹೊರಡುವ ಉತ್ಸಾಹದಲ್ಲಿರುವಿಯೆಂದು ಕಾಣುತ್ತದಲ್ಲ!" ಎಂದನು.

"ತ್ರಿಕಾಲವೇದಿ ನಾನೇ ಅಂದುಕೊಂಡರೆ, ನೀನು ಅನಂತಕಾಲವೇದಿಯಾಗಿರುವಿಯಪ್ಪ! ನಿನ್ನೊಂದಿಗೆ ವಾದ ಮಾಡಲು ನನ್ನಿಂದಾಗದು. ಎಲ್ಲರ ಜಾತಕಗಳೂ ನಿನ್ನ ಕೈಯಲ್ಲೇ ಇವೆ. ನಿನ್ನನ್ನು ಮರೆತ ಎಂತಹ ಉದ್ದಂಡ ಜ್ಯೋತಿಷ್ಯನ ಪಾಂಡಿತ್ಯವೂ ಫಲಿಸಲಾರದು. ನಾವಿಬ್ಬರೂ ಮೇಲ್ತರಗತಿಯ ವಾಚಾಳಿಗಳಾದೆವು. ಹೀಗೆ ಮಾತಿಗಿಳಿದರೆ ಅನಂತಕಾಲವೂ ನಮಗೆ ಸಾಲದು. ನೀನಂತೂ ಪೂರ್ಣ ಜ್ಞಾನಿ. ನಮ್ಮಂತಹ ಅರ್ಧ ಜ್ಞಾನಿಗಳು ಎಂತಹ ಹುಟ್ಟಿನಲ್ಲಿ



ಬಿದ್ದರೂ ನಿನ್ನಂಥವರು ತಾವರೆ ಎಲೆಯ ನೀರ ಬಿಂದುವಿನ ಹಾಗೆ ಯಾವುದಕ್ಕೂ ಅಂಟುವವರಲ್ಲ. ನೀನು ಮಾಯೆಗೆ ಅತೀತನಾಗಿರುವುದರಿಂದ ನಾನೂ ನಿನ್ನನ್ನು ಬಾಯಿ ತುಂಬ ಹರಸಿಬಿಡುತ್ತೇನೆ. ಅಪ್ಪಣೆ ಕೊಡು ! ಶ್ರೀರಸ್ತು, ಶುಭಮಸ್ತು, ಶೀಘ್ರಕಲ್ಯಾಣ ಸಿದ್ಧಿರಸ್ತು " ಎಂದು ಹೇಳಿ ನಾರದನು ತನ್ನ ಮಹತೀ ವೀಣೆಯ ಮೇಲೆ ಕಲ್ಯಾಣೀ ರಾಗವನ್ನು ಪ್ರಾರಂಭಿಸಿ, ಸೋಮರಾಗವನ್ನು ಹಿಡಿದು, ಸೌರಾಷ್ಟ್ರ ರಾಗದಿಂದ ಮಂಗಳ ಗೀತವನ್ನು ಹಾಡುತ್ತಾ ಹೊರಟು ಹೋದನು.

ಆಮೇಲೆ ದೇವತೆಗಳೆಲ್ಲಾ ಸಂತೋಷದಿಂದ ಅವರವರ ಸ್ಥಳಕ್ಕೆ ಹೊರಟು ಹೋದರು. ವಿಘ್ನೇಶ್ವರನನ್ನೂ ಪಾರ್ವತಿಯನ್ನೂ ಕರೆದುಕೊಂಡು ಶಿವನು ತನ್ನ ಕೈಲಾಸ ಭವನದೊಳಗೆ ಹೋದನು. ನಾರದನು ನೇರಾಗಿ ವಜ್ರದಂತನ ಬಳಿಗೆ ಹೋಗಿ, " ನಾರಾಯಣ" ಎಂದು ಧ್ವನಿಯೆಬ್ಬಿಸಿದನು.

ಈ ಮೊದಲು ಪುತ್ರಗಣಪತಿ ಆ ಮಾಯಾವಿಯ ಮೂಷಿಕ ರೂಪದ ಬಾಲವನ್ನು ಹಿಡಿದು ಬೀಸಿ ಬಿಸುಟಾಗ, ತನ್ನ ಮನೆಯ ಮುಂದೆ ಬಿದ್ದವನ ಮೈ ನೋವುಗಳು ಇನ್ನೂ ಪೂರ್ತಿ ಗುಣವಾಗಿದ್ದಿಲ್ಲ. ಅವನ ಪತ್ನಿ ಧವಳೆ ಗಂಡನ ಪರಿಚರ್ಯೆ ಮಾಡಿಕೊಂಡಿದ್ದಳು. ಒಮ್ಮೆಗೇ ಬಂದ ನಾರದನನ್ನು ನೋಡಿ 'ಇವನೇನು ತಂಟೆತರುವನೋ' ಎಂದು ಅವಳಿಗೆ ಭಯವಾಯಿತು. ನಾರದನನ್ನು ನೋಡಿದ ಕೂಡಲೇ, ಮಾತಾಡದೆ ಎದ್ದು ಒಳಗೆ ಹೋಗಿಬಿಟ್ಟಳು.

ನಾರದನು ಮೂಷಿಕಾಸುರನಾದ ವಜ್ರದಂತನೊಂದಿಗೆ, " ಹೊಸ ಸುದ್ದಿ ಗೊತ್ತಿದೆಯೋ ? ನಿನ್ನನ್ನು ಪರಾಭವಿಸಿದ ಗಣಪತಿ ಈಗ ವಿಘ್ನೇಶ್ವರನಾಗಿ ಅಭಿವೃದ್ಧಿಗೆ ಬರಲು ತೊಡಗಿದ್ದಾನೆ. ಯೋಚನೆ ಮಾಡು " ಎಂದು ಸುಮ್ಮನಾದನು.

ನಾರದನ ಮಾತು ಅವನ ಪರಾಭವಾಗ್ನಿಗೆ ತುಪ್ಪವಾಯಿತು. ಅವನು ಕೋಪಗೊಂಡರೂ ಭಯಬೆರೆತ-ಮುಖದಿಂದ, " ನನ್ನನ್ನು ಏನು ಮಾಡಲು ಹೇಳುವೆ ನಾರದಾ ? ಮರೆಮಾಚದೆ ಹೇಳು " ಎಂದು ಕೇಳಿದನು.

" ವರದಾತದೇವ ಬ್ರಹ್ಮಸಿದ್ಧಾನೆ. ವಜ್ರವನ್ನು ವಜ್ರದಿಂದಲೇ ಕೊಯ್ಯಬೇಕು. ಪ್ರತೀಕಾರ ಸಾಧಿಸದಿದ್ದರೆ ನೀನು ಮುಖವೆತ್ತಿ ತಿರುಗುವ ಬಗೆ ಹೇಗೆ ? ಗಣಪತಿ ಈಗ ವಿಘ್ನೇಶ್ವರ ನಾಮಧಾರಿಯಾದ ಗಜಮುಖನೆಂಬುದನ್ನು ಮರೆಯಬೇಡ ! ಸೂಚಿಸುವುದಷ್ಟೇ ನನ್ನ ಕೆಲಸ " ಎಂದು ಹೇಳಿ ಅಲ್ಲಿಂದ ಹೊರಟು ಹೋದನು ನಾರದ.

ಮಹಾಶ್ವೇತೆ ಎಂಬ ನಾಮಾಂತರವುಳ್ಳ ಧವಳೆ ಗಂಡನಿಗೆ ಎಷ್ಟು ಬುದ್ಧಿ ಹೇಳಿದರೂ ಕೇಳದೆ ವಜ್ರದಂತನು. " ನೋಡು ಮಹಾಶ್ವೇತಾ ! ಗಂಡುಗಲಿಯಾದವನು ಸೋಲಿನ ಅವಮಾನವನ್ನು ತಾಳಿಕೊಳ್ಳಲಾರನು. ಅದಕ್ಕಿಂತ ಸಾವೇ ಮೇಲು. ನಿನ್ನ



ಮಾಂಗಲ್ಯ ಪ್ರಭಾವದಿಂದ ನನಗಂತೂ ಸಾವಿನ ಭಯವಿಲ್ಲ. ಪ್ರತೀಕಾರವಾದರೂ ಮಾಡಿ ಮನಸ್ಸಿಗೆ ಶಾಂತಿ ಬರುವ ಹಾಗೆ ಮಾಡು !" ಎಂದು ಹೇಳಿ ತಪಸ್ಸಿಗೆ ಹೋದನು. ಘೋರವಾದ ತಪಸ್ಸು ಮಾಡಿ ಬ್ರಹ್ಮನನ್ನು ಪ್ರಸನ್ನೀಕರಿಸಿಕೊಂಡನು.

"ಏನು ವರಬೇಕಪ್ಪಾ ನಿನಗೆ ?" ಎಂದು ಬ್ರಹ್ಮನು ಕೇಳಿದನು.

"ವಿಘ್ನಕ್ಕೆ ರೂಪವನ್ನು ಕಲ್ಪಿಸಿ ನನ್ನ ಆಜ್ಞಾನುವರ್ತಿಯಾಗಿರುವಂತೆ ಮಾಡು" ಎಂದು ಮೂಷಿಕಾಸುರನು ವರ ಕೇಳಿದನು.

ಬ್ರಹ್ಮನು ವಿಘ್ನವನ್ನು ಆವಾಹನೆ ಮಾಡಿ ಪ್ರತ್ಯಕ್ಷಪಡಿಸಿ ವಜ್ರದಂತನ ಮುಂದೆ ನಿಲ್ಲಿಸಿದನು. ಆದರೆ ವಜ್ರದಂತನ ಕಣ್ಣಿಗೆ ಯಾವುದೂ ಕಾಣಲಿಲ್ಲ. ಆಗ ಬ್ರಹ್ಮನು ಅವನಿಗೆ ಸೂಕ್ಷ್ಮದರ್ಶನ ದೃಷ್ಟಿಯನ್ನು ಕೊಟ್ಟನು. ಆ ವಿಘ್ನವು ಸಾಧಾರಣ ಕಣ್ಣಿಗೆ ಕಾಣದಂತೆ ಕರ್ರಗಿನ ಸೂಕ್ಷ್ಮಕ್ರಿಮಿಯ ರೂಪದಲ್ಲಿತ್ತು.

ಆ ಕ್ರಿಮಿಯನ್ನು ನೋಡಿ ಮೂಷಿಕಾಸುರನು ಆಶ್ಚರ್ಯಪಡುತ್ತ, "ಇದೇನಿದು ? ಇಷ್ಟು ಸಣ್ಣ ಅಣು ಕ್ರಿಮಿಯನ್ನು ನಾನೇನು ಮಾಡಲಿ ?" ಎಂದನು.

ಬ್ರಹ್ಮನು ನಗೆಯಾಡಿ, "ವಿಘ್ನವೆಂದರೆ ಮಹಾ ಭೂತದ ಹಾಗೆ ಇರುತ್ತದೆಂದುಕೊಂಡೆಯೇನು ? ಅಸಲು ವಿಘ್ನವೆಂದರೆ ಬೀಜರೂಪದಲ್ಲಿರುವ ಸೂಕ್ಷ್ಮಾಣುವೇ. ಸೂಕ್ಷ್ಮ ಕ್ರಿಮಿಗಳಿಂದ ಭಯಂಕರ ವ್ಯಾಧಿಗಳು ವ್ಯಾಪಿಸುವ ಹಾಗೆ ಅನರ್ಥದಾಯಕವಾದ ವಿಘ್ನ ಕಾರಣವು ಎಷ್ಟೇ ಚಿಕ್ಕದಾದರೂ ಎಂತಹ ಭೀಷಣಾಕೃತಿಯನ್ನಾದರೂ ಧರಿಸಿ ಅನರ್ಥವನ್ನುಂಟುಮಾಡುವುದೇ ಅದರ ಕೆಲಸ. ನೀನು ಕೇಳಿದ ವರವನ್ನೇ ಕೊಟ್ಟಿದ್ದೇನೆ. ಏನು ಮಾಡುವಿಯೋ ಮಾಡಿಕೋ" ಎಂದು ಹೇಳಿ ಅಂತರ್ಧಾನನಾದನು.

ಆಮೇಲೆ ಮೂಷಿಕಾಸುರನು ವಿಘ್ನೇಶ್ವರನ ಮೇಲೆ ಹಗೆ ತೊಟ್ಟವನಾಗಿ ಆ ವಿಘ್ನಾಣುವನ್ನು ನೋಡಿ "ಎಲೋ ವಿಘ್ನ ಕೀಟಕಾ ! ನೀನು ಗಜಾಸುರನ ರೂಪದಲ್ಲಿ ಹೋಗಿ ಕೈಲಾಸದಲ್ಲಿರುವ ವಿಘ್ನೇಶ್ವರನನ್ನು ನಾಶಮಾಡಿ ಬಾ" ಎಂದು ಆಜ್ಞೆ ಮಾಡಿದನು.

ಕೂಡಲೇ ವಿಘ್ನಕೀಟವು ಕಪ್ಪಾದ ದೊಡ್ಡ ಶರೀರವಾಗಿ ಮಾರ್ಪಟ್ಟಿತು. ದಪ್ಪ ಕಾಲುಗಳಿಂದ, ಚಿಕ್ಕ ತಲೆಯಿಂದ ಬೆಂಕಿಯ ಕಿಡಿಗಳಂತಹ ಕಣ್ಣುಗಳಿಂದ ಕದಲುವ ಗುಡ್ಡದಂತೆ ಭಯಂಕರವಾಗಿತ್ತು ಆ ಗಜಾಸುರನ ರೂಪ. ಆನೆಯ ಸೊಂಡಿಲಿನಂತಿತ್ತು ಅವನ ಮೂಗು. ಅಂತಹ ವಿಲಕ್ಷಣ ರೂಪದ ರಾಕ್ಷಸನು ಕತ್ತಿ ಝಳಪಿಸಿಕೊಂಡು ಆಕಾಶಕ್ಕೆ ಹಾರಿ ಹೊರಟು ಹೋದನು.

ಕೈಲಾಸದಲ್ಲಿ ವಿಘ್ನೇಶ್ವರನು ತಂದೆ ತಾಯಿಯರ ಪ್ರೀತಿಯ ಮಗನಾಗಿ ಬೆಳೆದು, ಆಮೇಲೆ ತಂದೆ ತಾಯಿಯರ ಅನುಮತಿಯಿಂದ,. ತಾನು ಹುಟ್ಟಿದ ವಿಶ್ವಕರ್ಮ ನಿರ್ಮಿಸಿದ ಭವನಕ್ಕೆ ಹೋದನು.



ಆಗ ಅವನ ಇದಿರಾಗಿ ಮನ್ಮಥನು ತನ್ನ ಕಡೆಗೇ ಬರುವುದನ್ನು ನೋಡಿದನು. ಅವನೀಗ ಅನಂಗನಾಗಿಲ್ಲ.

ವಿಘ್ನೇಶ್ವರನು ಆಶ್ಚರ್ಯದಿಂದ, " ಇದೇನಯ್ಯಾ? ಅನಂಗನಾಗಿ ಕಣ್ಣಿಗೆ ಕಾಣದ ನೀನು ಹೀಗೆ ಕಾಣುವಿಯಲ್ಲಾ ? ಏನು ವಿಶೇಷ ? ನನ್ನ ಮೇಲೆ ನಿನ್ನ ಬಿಲ್ಲು ವಿದ್ಯೆ ತೋರಿಸಿ ಬಿಡಬೇಡ ಸದ್ಯ ! ಇನ್ನೂ ಹುಡುಗ ನಾನು !" ಎಂದನು.

ಮನ್ಮಥನು ವಿನಯದಿಂದ ತಲೆ ತಗ್ಗಿಸಿ " ಗಜೇಂದ್ರಾನನಾ ! ನೀನು ನನ್ನ ಬಾಣಗಳಿಗೆ ಅತೀತನಾದವನು. ನಾನು ಮನಸ್ಸು ಬಂದರೆ ಕಾಣಬೇಕಾದವರಿಗೆ ಕಾಣುವೆನೆಂದು ಶಿವನೇ ವರ ಕೊಟ್ಟಿದ್ದಾನಷ್ಟೆ ? ನಮ್ಮಿಬ್ಬರೊಳಗೆ ಒಂದು ಹೋಲಿಕೆ ಇರುವುದರಿಂದಲೇ ನಿನಗೆ ಕಾಣಿಸುತ್ತಿದ್ದೇನೆ ಅಷ್ಟೇ. ಹೇಳುತ್ತೇನೆ ಕೇಳು, ನೀನು ನಂದಿ ವಾಹನನಾದ ಹರನ ಮಗನಾದರೆ ನಾನು ಪಕ್ಷೀಂದ್ರನನ್ನೇರುವ ಹರಿಯ ಕುಮಾರ. ನನ್ನನ್ನು ಶಿವನು ದಹಿಸಿ ಬದುಕಿಸಿದ್ದಾನೆ. ನಿನ್ನನ್ನು ಸಹಾ ಕಡಿದು ಬದುಕಿಸಿದ್ದಾನೆ. ನನ್ನ ವಾಹನವು ಗಿಳಿಯಾದರೆ ನಿನ್ನ ವಾಹನವು ಇಲಿ. ಮನಸ್ಸನ್ನು ಚಲಿಸುವಂತಹ ಹೂವಿನ ಬಾಣಗಳು ನನ್ನವಾದರೆ, ಮನಸ್ಸನ್ನು ನಿಗ್ರಹಿಸುವ ಪಾಶಾಂಕುಶಗಳು ನಿನ್ನ ಆಯುಧಗಳು. ಇನ್ನು ನಿನಗೆ ತಮ್ಮನು ಹುಟ್ಟಬೇಕಲ್ಲವೇ ? ಪಾರ್ವತೀ ಪರಮೇಶ್ವರರ ಪರಸ್ಪರ ಅನುರಾಗದ ತೇಜಸ್ಸೇ ನಿನ್ನ ತಮ್ಮನಾಗಿ ಕುಮಾರಸ್ವಾಮಿಯಾಗಿ ಅವತರಿಸಬೇಕು. ಆಮೇಲೆ ಎಲ್ಲರೂ ಕಾಯುತ್ತಿರುವ ತಾರಕಾಸುರನ ಸಂಹಾರವಾಗಬೇಕು. ಅದಕ್ಕಾಗಿ ತಾನೇ ದೇವತೆಗಳು ನಾನು ಬೂದಿಯಾಗುವ ಹಾಗೆ ಮಾಡಿದರು? ಉಳಿದಿರುವ ಆ ಕೆಲಸ ಮುಗಿಸಲಿಕ್ಕಾಗಿಯೇ ಕೈಲಾಸಕ್ಕೆ ಬಂದೆನು. ಮೊದಲು ನಿನ್ನ ಪೂಜೆಯಾಗಬೇಕಷ್ಟೆ ? ಅನುಮತಿ ಕೊಡು ವಿಘ್ನೇಶಾ " ಎಂದನು ಮನ್ಮಥ.

ವಿಘ್ನೇಶ್ವರನು " ಹೌದೌದು. ನಾನು ಕೂಡಾ ಅದಕ್ಕಾಗಿಯೇ ಹೊರಟಿದ್ದೇನೆ. ನಿನ್ನ ಕೆಲಸ ನಿರ್ವಿಘ್ನವಾಗಿ ನೆರವೇರುತ್ತದೆ. ಜಯವಾಗಲಿ !" ಎಂದನು.

ಮನ್ಮಥನು ಅದೃಶ್ಯನಾಗಿ ಪಾರ್ವತೀ ಪರಮೇಶ್ವರರಿರುವ ಕೈಲಾಸ ಮಂಟಪದೊಳಗೆ ಸೇರಿಕೊಂಡನು.

ವಿಘ್ನೇಶ್ವರನು ತನ್ನ ವಿಶ್ವಕರ್ಮ ನಿರ್ಮಿತವಾದ ಭವನದೊಳಗೆ ಹೋಗಿ ಸಿಂಹದ್ವಾರದ ಪಕ್ಕದಲ್ಲಿರುವ ಚಂದ್ರಶಿಲಾ ವೇದಿಕೆಯ ಮೇಲೆ ಚೆಂದಾಗಿ ಕುಳಿತು, ಪರಿಸರದಲ್ಲಿರುವ ಪ್ರಕೃತಿ ಸೌಂದರ್ಯವನ್ನು ಆನಂದದಿಂದ ನೋಡತೊಡಗಿದನು. ಮಿರಿಮಿರಿ ಹೊಳೆಯುವ ಹಿಮಗಿರಿಯ ಶಿಖರಗಳಲ್ಲಿ ಸಂಧ್ಯಾಕಾಂತಿ ಥಳಥಳಿಸುತ್ತಿದ್ದಿತು. ಹಿಮಾಲಯದ ಜಲಪಾತಗಳು ಮಂದ್ರ ಗಂಭೀರವಾಗಿ ಸರಿಗಮಗಳಂತೆ ಧ್ವನಿಸುತ್ತಿದ್ದುವು. ಅಂತಹ ಪ್ರಶಾಂತ ಸಮಯದಲ್ಲಿ ಇದ್ದಕ್ಕಿದ್ದ " ಹಾಗೆ ವಿಘ್ನೇಶ್ವರನೆಂಬವನು ಎಲ್ಲಿದ್ದಾನೆ ?" ಎಂಬ

ಭೀಕರ ಗರ್ಜನೆ ದಿಕ್ಕುಗಳು ಮಾರ್ಮೊಳಗುವಂತೆ ಆಕಾಶದ ಕಡೆಯಿಂದ ಕೇಳಿಸಿತು.

ಮಹಾ ಗಜಾಸುರನ ರೂಪದಲ್ಲಿರುವ ವಿಘ್ನನು ವಿಘ್ನೇಶ್ವರನ ಮುಂದೆ ಧುತ್ತೆಂದು ಧುಮುಕಿ ನಿಂತನು. ಅವನ ಹೆಜ್ಜೆಗಳಿಂದ ನೆಲವೇ ಕಂಪಿಸಿತು. ಗಜಾಸುರನು ವಿಘ್ನೇಶ್ವರನನ್ನು ನೋಡಿ, "ಇಲ್ಲೆಲ್ಲೋ ವಿಘ್ನೇಶ್ವರನಿದ್ದಾನಂತೆ? ನೀನೇನಾ? ನೋಡಿದರೆ ಹಾಗೇ ಕಾಣುವಿ! ನಾನು ಗಜಕಾಯನಾದ ವಿಘ್ನ! ನೀನು ಗಜಮುಖನಾದ ವಿಘ್ನೇಶ್ವರನಾದರೆ ಸಾಯಲು ಸಿದ್ಧನಾಗು! ಹುಂ!" ಎಂದು ಬಂಡೆಗಳು ನಡುಗುವಂತೆ ಗುಡುಗಿದನು.

ವಿಘ್ನೇಶ್ವರನು ಕಿವುಡನ ಹಾಗೆ, ಒಂದೂ ಅರ್ಥವಾಗದವನಂತೆ ನೋಡುತ್ತ "ಅಪ್ಪಾ, ಕಬ್ಬಿನ ಕೋಲನ್ನು ತುಂಡು ತುಂಡು ಮಾಡಿ ತಿನ್ನಬೇಕೆನಿಸುತ್ತದೆ. ನನ್ನ ಕೊಡಲಿಯನ್ನು ಸ್ವಲ್ಪ ಹರಿತ ಮಾಡಿ ಕೊಟ್ಟರೆ, ನಿನಗೂ ತಿನ್ನಲು ಉಂಡೆಗಳನ್ನು ಕೊಡುತ್ತೇನೆ" ಎಂದು ತನ್ನ ಕೈಯಲ್ಲಿದ್ದ ಕೊಡಲಿಯನ್ನು ಅವನ ಕಡೆಗೆ ಬಿಸುಟನು.

ಗಜಾಸುರನ ಕಾಲುಗಳೆರಡೂ ತುಂಡಾಗಿ, ಪರ್ವತದ ಹಾಗೆ ಹೊರಳಿ ಬಿದ್ದನು. ಬಿದ್ದವನ ಮೇಲೆ ವಿಘ್ನೇಶ್ವರನು ಹಾರಿ ತಾಂಡವ-ಮರ್ದನ ಮಾಡುತ್ತಿರಲು "ಓ ಮಹಾ ಪ್ರಭೋ! ನಾನು ವಿಘ್ನನು. ಬ್ರಹ್ಮನಿಂದ ಸೃಷ್ಟಿಯಾದವನು. ಅವನು ಕೊಟ್ಟ ವರದ ಉಪಯೋಗದಂತೆ ಮಹಾ ಗಜಾಸುರನ ರೂಪದಲ್ಲಿ ಬಂದೆ. ತಕ್ಕ ಫಲ ಸಿಕ್ಕಿತು!" ಎಂದು ವಿಘ್ನನು ಕಿರುಚಿದನು.

"ನಾನು ವಿಘ್ನ ವಿನಾಶಕನು. ಅದಲ್ಲದೆ ಈಗ ನೀನು ಮಾಯಾ ರೂಪದಲ್ಲಿ ಬಂದವನು. ಗಜಾಸುರನೆನಿಸಿದ್ದೀಯಾ! ನಿನ್ನನ್ನು ಚೂರು ಚೂರು ಮಾಡದೆ ಉಳಿಗಾಲವಿಲ್ಲ. ನಿನ್ನ ತುಣುಕುಗಳು ನನಗೆ ಮೋಸಪಡಿಸುವವರನ್ನಷ್ಟೇ ಪೀಡಿಸುತ್ತವೆ. ನೀನು ಕಾಳೀಯ ನಾಗನಾಗಿ ಕಾಳೀಯ ಮಡುವಿನಲ್ಲಿ ಅಡಗಿಕೊಂಡಿರು. ಬಾಲಕೃಷ್ಣನು ನಿನ್ನನ್ನು ಇನ್ನೂ ಮರ್ದಿಸುತ್ತಾನೆ. ಅವನ ಪಾದಗಳು ನಿನ್ನ ತಲೆಗಳ ಮೇಲೆ ಬಿದ್ದು ನಿನ್ನ ಪಾಪಪರಿಹಾರವಾಗ ಬೇಕಷ್ಟೇ. ಆಮೇಲೆ ಸರ್ಪ ಜಾತಿಗಳ ಹೆಡೆಗಳಲ್ಲಿ ವಿಷ್ಣುಪಾದ ಮುದ್ರೆಗಳು ಉಂಟಾಗಿ ಅವುಗಳಿಗೊಂದು ನೆನಪೂ ಆಗಬೇಕು. ಅಲಂಕಾರವೂ ಆಗಬೇಕು. ನಡೆ!" ಎಂದು ಹೇಳಿ ವಿಘ್ನನನ್ನು ಛಿನ್ನಾಭಿನ್ನ ಮಾಡಿ ಓಡಿಸಿದನು. ಆ ವಿಘ್ನರೇಣುಗಳು ಎಲ್ಲೆಲ್ಲೂ ವ್ಯಾಪಿಸಿ ಅದೃಶ್ಯವಾದುವು. ಅಸಲು ವಿಘ್ನನು ಅಣುರೂಪದಲ್ಲೇ ಉಳಿದನು. ಈ ಅದ್ಭುತ ದರ್ಶನದಿಂದ ದೇವತೆಗಳು ಜಯಜಯವೆನ್ನುತ್ತ, ವಿಘ್ನೇಶ್ವರನ ಮೇಲೆ ಪುಷ್ಪವೃಷ್ಟಿಗರೆದರು.






ಅದ್ಭುತವಾದ ವಿಘ್ನೇಶ್ವರಾವತಾರದ ಆನಂದ ಸಂಭ್ರಮದಲ್ಲಿದ್ದ 'ತ್ರಿಮೂರ್ತ್ಯಾದಿ ದೇವತೆಗಳಿಗೆ ಒಂದು ಆಕಾಶವಾಣಿ ಕೇಳಿಸತೊಡಗಿತು :

"ಓ ! ವಿಘ್ನೇಶ್ವರಾ ! ಈಗ ನಿನ್ನಿಂದಾದ ಗಜಾಸುರ ಸಂಹಾರದ ಸ್ಮಾರಕವಾಗಿ ನವರಾತ್ರಿ ಉತ್ಸವಗಳು ಗಣಪತಿ ಪೂಜೆಯಿಂದ ಪ್ರಾರಂಭವಾಗಲಿ."

ಈ ದಿವ್ಯಾಶಯದ ವಾಣಿಯನ್ನು ಕೇಳಿ ಎಲ್ಲರೂ "ಹಾಗೇ ಆಗಲಿ ! ಹಾಗೇ ಆಗಲಿ !" ಎನ್ನುತ್ತಾ ಮಾರ್ದನಿ ಕೊಟ್ಟು ತಲೆದೂಗಿದರು.

ವಿಷ್ಣು ವಿಘ್ನೇಶ್ವರನನ್ನು ನೋಡಿ, "ಪಾರ್ವತೀ ನಂದನಾ ! ಸೋದರಳಿಯನೆಂದು ಹೇಳಿ ನನಗೆ ಇನ್ನೊಂದು ಕೆಲಸ ಕಲ್ಪಿಸಿದೆಯಲ್ಲಾ ! ಚೆನ್ನಾಗಿದೆ ನಿನ್ನ ಸಂಬಂಧವರಿಸೆ !" ಎಂದನು.

"ನೀನು ಸೋದರ ಮಾವನ ವರಿಸೆ ಹಿಡಿದು, ಕಾಲನೇಮಿಯಾದ ಕಂಸನನ್ನು, ಸೋದರ ಮಾವನ ಗಂಡಾಂತರ ರೂಪದಲ್ಲಿ ಕೊಲ್ಲಲಿರುವೆಯಷ್ಟೆ ? ಇಂತಹ ಸಂಬಂಧ ವರಿಸೆಗಳೆಲ್ಲ ನೀನು ಕಲಿಸಿದ ವಿದ್ಯೆ ತಾನೇ ನೀರಜಾಕ್ಷಾ ?" ಎಂದನು ವಿಘ್ನೇಶ್ವರ.

"ನಿನ್ನ ಪರಶುವಿನ ಮುಂದೆ ನನ್ನ ಚಕ್ರಾಯುಧ ಹೇಗೆ ನಿಂತೀತು ? ನಿನ್ನ ಕೊಡಲಿಯ ಸಾಧನೆ ನೋಡುವಾಗ ತುಂಬಾ ಮುದ್ದಾಗಿ ಕಾಣುವೆಯೋ ನನ್ನಪ್ಪ !" ಎಂದನು ವಿಷ್ಣು.

"ಓಹೋ ! ಪರಶುರಾಮಾವತಾರದಲ್ಲಿ ನನ್ನ ಕೊಡಲಿ ಬೇಕೆಂದು ಸೂಚಿಸುವೆಯಾ ? ಅಗತ್ಯವಾಗಿ ಕೊಡುತ್ತೇನೆ. ಅದರಿಂದ ಗರ್ವಾಂಧರಾದ ಕ್ಷತ್ರಿಯರನ್ನೆಲ್ಲ ಕಡಿದೆಸೆಯುವೆಯಂತೆ" ಎಂದನು ವಿಘ್ನೇಶ್ವರ.

"ಇರಲಿ ! ಕುಳ್ಳನಾದರೂ ಮಹಾದಾತ. ಗುಜ್ಜಾರಿ ರೂಪದ ನೀನು ಗಜ ವಿಘ್ನಾಸುರನ ಮೇಲೆ ಏರಿ ಮರ್ದಿಸುವಾಗ, ನಿನ್ನ ಗುಡುಗುಟು ನಡಿಗೆಯೂ ಕುಣಿತವೂ ನನಗೆ ತುಂಬಾ ಹಿಡಿಸಿತು !" ಎಂದನು ವಿಷ್ಣು.

"ಓ ಹ್ಹೊ ! ಆ ರೂಪವೂ ನಿನಗೆ ಬೇಕನ್ನು. ಸರಿ. ವಾಮನನಾಗಿ ಬಲಿ ಚಕ್ರವರ್ತಿಯನ್ನು



ಪಾತಾಳಕ್ಕೆ ತುಳಿದೊತ್ತಲು ಆ ರೂಪವನ್ನೇ ತೆಗೆದುಕೋ!" ಎಂದನು ವಿಘ್ನೇಶ್ವರ.

"ನಿನ್ನ ಬುದ್ಧಿ ಕೂಡಾ ಏನು ವಿಶೇಷ! ಎಷ್ಟು ದೊಡ್ಡದು! ಅದು ನನ್ನನ್ನು ತುಂಬಾ ಆಕರ್ಷಣೆ ಮಾಡಿಕೊಂಡಿದೆ. ಅದಕ್ಕೇನು ಮಾಡಲಿ?" ಎಂದು ವಿಷ್ಣು ಪ್ರಶ್ನಿಸಿದನು.

"ಅದಕ್ಕೂ ಕಾಲ ಬರುತ್ತದೆ. ಯಾವ ಯುಗಕ್ಕೆ ಆಗತ್ಯವಾದ ಧರ್ಮವನ್ನು ಆ ಯುಗದಲ್ಲಿ ಸ್ಥಾಪಿಸುವುದು ತಾನೇ ನಿನ್ನ ಅವತಾರಗಳಿಗೆ ಮೂಲ ಕಾರಣ? ಮಾನವ ಸಮಾಜವೆಲ್ಲಾ ಹಿಂಸೆಯಿಂದಲೂ ಮೂಢಾಚಾರಗಳಿಂದಲೂ ಹಾಳಾಗಿ ಹೋಗುವ ದಿನಗಳೂ ಮುಂದೆ ಬರಲಿವೆಯಷ್ಟೆ? ಆಗ ನೀನು ಬುದ್ಧನಾಗಿ ಮಾನವರಿಗೆ ಧರ್ಮಸಂಸ್ಥಾಪನೆಯ ನಿಜವಾದ ಅರ್ಥವನ್ನು ಬೋಧಿಸುವಿಯಂತೆ. ಮಾಯಾದೇವಿಯ ಸ್ವಪ್ನದಲ್ಲಿ ನನ್ನ ಬಿಳಿಯಾನೆಯ ರೂಪವು ಗರ್ಭದೊಳಗೆ ಪ್ರವೇಶಿಸಿ ನಿನ್ನ ಬುದ್ಧತ್ವಕ್ಕೆ ನಾಂದಿ ಮಾಡುತ್ತೇನೆ. ತೃಪ್ತಿಯಾಯಿತಷ್ಟೇ ವಿಷ್ಣುಮೂರ್ತೀ?" ಎಂದನು ವಿಘ್ನೇಶ್ವರ.

ವಿಘ್ನೇಶ್ವರನ ಮಾತಿನಿಂದ ವಿಷ್ಣುವಿಗಾದ ಆನಂದಕ್ಕೆ ಮೇರೆಯೇ ಇಲ್ಲ. ಆಗ ಅಪ್ಪಣೆ ಕೇಳಲು ಸಮಯ ಹೊಂಚಿಕೊಂಡಿದ್ದ ಪರಮಾಣು ರೂಪದ ವಿಘ್ನವು ವಿಘ್ನೇಶ್ವರನ ಮುಂದೆ ಬಂದು ವಿನಯದಿಂದ ಕೈ ಜೋಡಿಸಿ, "ವಿಘ್ನರಾಜಾ, ಎಂದೆಂದೂ ನಾನು ನಿನ್ನ ಅಡಿಯಾಳು. ನಿನ್ನ ಆಜ್ಞಾನುವರ್ತಿ. ಅಪ್ಪಣೆ ಕೊಡು, ಹೋಗುತ್ತೇನೆ." ಎಂದು ಹೊರಟುಹೋಗಿ, ಕಾಳಿಂದೀ ಮಡುವನ್ನು ಸೇರಿ, ಕಾಳೀಯನ ರೂಪದಲ್ಲಿ ಅಡಗಿಕೊಂಡಿತು.

ಮೂಷಿಕಾಸುರನು ಮೂಷಿಕ ರೂಪದಲ್ಲಿ ಬಂದು ಅಡಗಿ ಕುಳಿತು, ವಿಘ್ನಕ್ಕೆ ಬಂದ ಗತಿಯನ್ನು ಆಲೋಚಿಸುತ್ತ, ಒಮ್ಮೆಲೇ ನಿಜರೂಪವನ್ನು ತಾಳಿ, ವಿಘ್ನೇಶ್ವರನ ಮುಂದೆ ನಿಂತು ಕರ್ಕಶವಾಗಿ ಸಿಂಹನಾದ ಮಾಡಿದನು.

ವಿಘ್ನೇಶ್ವರನು ಬಲಿಷ್ಠವಾದ ಅವನ ಶರೀರವನ್ನು ನೋಡಿ ಸೊಂಡಿಲಾಡಿಸುತ್ತ ಸಂತೃಪ್ತನಾಗಿ ನಿಂತಿರಲು, ಮೂಷಿಕಾಸುರನು ಗಣೇಶನನ್ನು ಸ್ವಲ್ಪವೂ ಲಕ್ಷ್ಯ ಮಾಡದೆ ವಿಷಮವಾಗಿ ನಗುತ್ತ, "ಹೇಡಿ ವಿಘ್ನವು ನಿನ್ನ ಅಡಿಯಾಳಾಗಿ ಹೋಯಿತೆಂದು ಬೀಗ ಬೇಡ. ನಾನು ನಿನ್ನ ಜನ್ಮವಿರೋಧಿ. ಆನೆಗೆ ಸಿಂಹಸ್ವಪ್ನವೆಂಬ ಮಾತು ನಿನಗೆ ಗೊತ್ತಿರಬೇಕು. ನಾನೀಗ ಸಿಂಹವಾಗಿ ನಿನ್ನ ಕುಂಭಸ್ಥಳವನ್ನೇ ಸೀಳುತ್ತೇನೆ!" ಎಂದು ಸಿಂಹವಾಗಿ ಮಾರ್ಪಟ್ಟು ಗರ್ಜಿಸಿದನು.

ಕೂಡಲೇ ವಿಘ್ನೇಶ್ವರನು ಸಿಂಹಕ್ಕೆ ಕೈ ಮುಗಿದು, "ಓ ಮಹಾ ಸಿಂಹಾ! ನೀನು ಜಗನ್ಮಾತೆಯ ದಿವ್ಯ ವಾಹನ! ನಿನ್ನನ್ನು ಗೌರವಿಸಬೇಕಾದುದು ನನ್ನ ಧರ್ಮ!" ಎಂದನು. ಸಿಂಹವು ಮತ್ತೆ ಗರ್ಜಿಸಿ ಹಾರಲು ನೋಡುವಾಗ ವಿಘ್ನೇಶ್ವರನು "ಶಿವಶಿವಾ! ಶರಭಾ!" ಎಂದು ಸ್ಮರಿಸಿದನು.



ಮರುಕ್ಷಣದಲ್ಲಿ ಸಿಂಹದ ಇದಿರಿನಲ್ಲಿ ಶಿವನ ಶರಭಾವತಾರವು ಘೀಂಕಾರ ಗರ್ಜನೆ ಮಾಡುತ್ತ ನಿಂತಿತು. ಶರಭಕ್ಕೆ ಸಿಂಹದ ಶರೀರವೂ, ಕೇಸರಗಳೂ, ನಖದಂಷ್ಟ್ರಗಳೂ ಇದ್ದುವು. ಆನೆಯ ಸೊಂಡಿಲೂ ಅದಕ್ಕಿತ್ತು. ದಂತಗಳೂ ಭಯಂಕರವಾಗಿದ್ದುವು. ಮಹಾ ಸರ್ಪದಂತಹ ಬಾಲದ ಕೊನೆಯಲ್ಲಿ ಜ್ವಾಲೆಗಳನ್ನು ಕಕ್ಕುವ ಮಕರದ ಮುಖ! ಶರಭದ ಮೂಲು ಅಗ್ನಿ ಶಿಖೆಗಳಂತೆ ಹಾರಾಡುತ್ತಿದ್ದುವು. ಬಾಯಿಯಿಂದ ಗುಪ್ಪು ಗುಪ್ಪಾಗಿ ಬಿಸಿಬಿಸಿ ಹೊಗೆ ಬರುತ್ತಿದ್ದಿತು. ಆ ಶರಭವು ಸೊಂಡಿಲಿನಿಂದ ಸಿಂಹದ ಮುಖವು ಬಾತು ಹೋಗುವ ಹಾಗೆ ಒಂದೇಟು ಕೊಟ್ಟಿತು. ಸಿಂಹವು ಬಾಲ ಮುದುಡಿ ಓಡುವಾಗ ಶರಭಾವತಾರವು ಮಾಯವಾಯಿತು.

ವಿಘ್ನೇಶ್ವರನು ಸೊಂಡಿಲನ್ನು ಒಂದು ಯೋಜನ ದೂರಕ್ಕೆ ಸಾಗಿಸಿ ಸಿಂಹದ ಸೊಂಟ ಹಿಡಿದು ಸುತ್ತಿ ಎತ್ತಿದನು. ಸಿಂಹವು ಕರ್ಕಶವಾಗಿ ಕಿರಿಚುತ್ತಿರಲು, ಅದೇ ಸಮಯದಲ್ಲಿ ಆಕಾಶ ಗಮನ ಮಾಡುತ್ತಿದ್ದ ನಾರದನು 'ಸಾ' ಎಂದು ದೀರ್ಘವಾಗಿ ರಾಗವನ್ನು ಹೊರಡಿಸಿ, ಹಾಗೆಯೇ "ಸಾಮಜವರ ವದನಾ" ಎಂದು ಹಿಂದೋಳ ರಾಗವನ್ನು ಹಿಡಿದು ಹಾಡ ತೊಡಗಿದನು.

ದೇವತೆಗಳು ಆಕಾಶದಲ್ಲಿ ಗುಂಪುಗೂಡಿ ವಿನಾಯಕನನ್ನು ನೋಡುತ್ತಿದ್ದರು. ವಿಷ್ಣು ವಿನಾಯಕನನ್ನು ಪ್ರಶಂಸಿಸುತ್ತ, "ವಿಜಯ ವಿಘ್ನೇಶ್ವರಾ! ನೀನು ಹಿಡಿದ ಈ ಸಿಂಹವನ್ನು ನನಗೆ ಕೊಡು. ಬೆಳೆಯಿಸುತ್ತೇನೆ. ಕೊಡಲಾರೆಯಾ?" ಎಂದನು.

ವಿಘ್ನೇಶ್ವರನು ನಗುತ್ತ, "ಬೆಳೆಯಿಸುವೆನೆಂದು ಹೇಳಿ, ಇದರ ತಲೆಯನ್ನೂ ಉಗುರುಗಳನ್ನೂ ತೆಗೆದುಕೊಂಡು ನರಸಿಂಹಾವತಾರ ಎತ್ತಿ ಹಿರಣ್ಯಕಶಿಪುವನ್ನು ಸೀಳಿಬಿಡುವ ಆಲೋಚನೆಯೊ? ಅದೇನೂ ಸಾಧ್ಯವಿಲ್ಲ. ಈ ಮೃಗರಾಜನ ಅಗತ್ಯ ನನಗೇ ಬೇಕಾಗಿದೆ. ನಿನ್ನ ನರಸಿಂಹಾವತಾರವನ್ನು ನೀನೇ ನೋಡಿಕೋ. ಸುಮ್ಮನೆ ನಾನು ಮುಟ್ಟಿದ್ದಕ್ಕೆಲ್ಲಾ ಕಣ್ಣು ಹಾಕಬೇಡ" ಎಂದನು.

ವಿಘ್ನೇಶ್ವರನ ಸೊಂಡಿಲು ಮೂಷಿಕಾಸುರ ಸಿಂಹವನ್ನೆತ್ತಿಕೊಂಡು ಸಾಗಿ ಸಾಗಿ ಮಹಾಶ್ವೇತೆಯ ಮುಂದೆ ಸಿಂಹವನ್ನು ಹಾಕಿ ಮಾಯವಾಗಿ ಹೋಯಿತು. ಅಷ್ಟಾದರೂ ಮೂಷಿಕಾಸುರನಾದ ವಜ್ರದಂತನ ಗರ್ವ ಅಡಗಲಿಲ್ಲ. ಅವನು ಸಿಂಹ ರೂಪ ಬಿಟ್ಟು ನಿಜರೂಪದಲ್ಲಿ ನಿಂತು ಮತ್ತೆ ವಿಘ್ನೇಶ್ವರನ ಮೇಲೆ ಢೀಕೊಡಲು ಓಡತೊಡಗಿದನು.

ಮಹಾಶ್ವೇತೆ ಬೇರೆ ಉಪಾಯ ಗಾಣದೆ ದೇವಿಯನ್ನು ಪ್ರಾರ್ಥಿಸತೊಡಗಿದಳು. ದೇವಿ ಅವಳ ಮುಂದೆ ಪ್ರತ್ಯಕ್ಷಳಾಗಿ, "ಹೆದರಬೇಡ. ನಿನ್ನ ಗಂಡನು ಪೂರ್ತಿ ಗರ್ವವನ್ನು ಬಿಟ್ಟು, ವಿಘ್ನೇಶ್ವರನಿಗೆ ಮೂಷಿಕ ರೂಪದ ವಾಹನವಾಗುವನು. ನೀನು ಕೊಡೆ ಶ್ವೇತಛತ್ರವಾಗಿ ವಿಘ್ನೇಶ್ವರನ



ಸೇವೆಯಲ್ಲಿ ಚಿರಂಜೀವಿಯಾಗಿರುವಿ" ಎಂದು ಹೇಳಿ ಸಂತೋಷಪಡಿಸಿ ಅಂತರ್ಧಾನಳಾದಳು.

ವಜ್ರದಂತನು ಕಾಮರೂಪಿಯಾದುದರಿಂದ ಈಸಾರಿ ಆನೆಗಳನ್ನು ಎತ್ತಿಕೊಂಡು ಹೋಗುವಂತಹ ಗಂಡಭೇರುಂಡ ಪಕ್ಷಿಯ ರೂಪದಲ್ಲಿ ಬರುತ್ತ ದಾರಿಯಲ್ಲಿ ಕಂಡ ಎರಡು ಆನೆಗಳನ್ನು ಒಂದೊಂದು ಕಾಲಿನ ಬೆರಳುಗಳಲ್ಲಿ ಹಿಡಿದು ಹಾರತೊಡಗಿದನು. ಆಗ ಅವನ ರೆಕ್ಕೆಗಳಿಂದೆದ್ದ ಬಿರುಗಾಳಿಯ ವೇಗಕ್ಕೆ, ಸಣ್ಣ ಹದ್ದಿನ ರೂಪದಲ್ಲಿ ಮರದ ಮೇಲೆ ಕುಳಿತು ಹರಿಯನ್ನು ಧ್ಯಾನಿಸುತ್ತಿದ್ದ ಗರುತ್ಮಂತನಿಗೆ ಧ್ಯಾನ ಭಂಗವಾಯಿತು. ಕೂಡಲೇ ಕೋಪಗೊಂಡ ಗರುತ್ಮಂತನು ಗಂಡಭೇರುಂಡವನ್ನು ಕೊಕ್ಕಿನಿಂದ ತಿವಿಯಲು ಆ ತಿವಿತದಿಂದ ನಿರ್ವೀರ್ಯನಾದ ವಜ್ರದಂತನು ನಿಜರೂಪದಿಂದ ನೆಲಕ್ಕೆ ಬಿದ್ದನು.

"ಇದಕ್ಕಿಂತಲೂ ಮೇಲಾದ ತಿವಿತದ ಹಿಂಡಿ ಕೈಲಾಸದಲ್ಲಿ ಕಾದಿದೆ. ಹೋಗತ್ತ !" ಎಂದು ಗರುತ್ಮಂತನು ವಜ್ರದಂತನನ್ನು ಜಾಡಿಸಿ ಒದ್ದು, ತನ್ನ ಪಾಡಿಗೆ ಹಾರಿಹೋದನು.

ಮೂಷಿಕಾಸುರನು ವಿಘ್ನೇಶ್ವರನ ಬಳಿಗೆ ಹೋಗಿ, "ನಿನಗೂ ದೊಡ್ಡದೊಡ್ಡ ದಂತಗಳಿವೆ. ಕಡಲೇ ಉಸುಳಿಯನ್ನು ತಿನ್ನುವುದಕ್ಕೆ ಹೊರತು ಮತ್ತಾವುದಕ್ಕೂ ಉಪಯೋಗವಿಲ್ಲ. ನನ್ನ ದಂತಗಳಿಂದ ಕೈಲಾಸವನ್ನು ಪುಡಿ ಮಾಡುತ್ತೇನೆ. ಸಾಧ್ಯವಿದ್ದರೆ ಪ್ರತ್ಯಕ್ಷ ಪ್ರತಾಪ ತೋರಿಸು !" ಎಂದನು.

ವಿನಾಯಕನು ನಾಲ್ಕು ದಿಕ್ಕುಗಳನ್ನೂ ನೋಡುತ್ತ ತನ್ನೊಳಗೆ ತಾನೇ ಗೊಣಗುಟ್ಟುವವನಂತೆ, "ಹೌದೌದು. ಯಾವುದಕ್ಕೂ ಉಪಯೋಗವಿಲ್ಲದ ಈ ದಂತಗಳಿಂದ ಏನು ಪ್ರಯೋಜನ ?" ಎನ್ನುತ್ತ ಒಂದು ದಂತವನ್ನು ಪಟಕ್ಕನೆ ಮುರಿದು ಎತ್ತಿ ಆಕಾಶದಲ್ಲಿ ಬಿಸುಟನು.

ಆ ದಂತವು ಗಾಳಿಯಲ್ಲಿ ಇಂದ್ರಜಾಲ ಪ್ರದರ್ಶಕವಾಗಿ, ಮೇಲೆ ಕೆಳಗೆ ಹಾರುತ್ತ, ವಜ್ರದಂತನನ್ನು ಚುಚ್ಚುತ್ತ ತಿವಿಯುತ್ತ ಆಟ ತೋರಿಸಲು ತೊಡಗಿತು. ಅವನ ಶರೀರದಿಂದ ರಕ್ತವು ಧಾರೆಧಾರೆಯಾಗಿ ಇಳಿಯಲು ತೊಡಗಿತು. ಮಹಾಶ್ವೇತೆ ಅದನ್ನು ನೋಡಲಾಗದೆ ಮೂರ್ಛೆ ಹೋಗಿಬಿದ್ದಳು. ವಜ್ರದಂತನು ಚಿಕ್ಕ ಇಲಿಯಾಗಿ ಬದಲಾಯಿಸಿ ತಟ್ಟನೆ ಓಡುತ್ತ ಕಲ್ಲುಗಳ ನಡುವೆ ಬಿಲ ಮಾಡಿಕೊಂಡು ಒಳಗೆ ತೂರಿದನು. ಒಂದು ದಂತವನ್ನು ಮುರಿದುಕೊಂಡ ವಿಘ್ನೇಶ್ವರನು ಏಕದಂತನೆನಿಸಿದನು.

ಆ ದಂತದ ತುಂಡು ಅಷ್ಟಕ್ಕೆ ಬಿಡಲಿಲ್ಲ. ಬಿಲದೊಳಗೆ ತೂರಿ ಇಲಿಯನ್ನು ತಿವಿದುಕೊಂಡೇ, ಇಲಿ ಮುಂದೆ ಮುಂದೆ ಹೋದ ಹಾಗೆ ದಂತದ ತುಂಡೂ ಹೋಯಿತು. ಇಲಿಯ ಬಾಲದ ಹಿಂದೆ ರಕ್ತ ಧಾರೆಯು ಗೆರೆ ಹೋಗುತ್ತಿತ್ತು. ಇಲಿ ಸುರಂಗ ತೋಡುತ್ತಾ ಪಾತಾಳದ ವರೆಗೂ ಹೋಯಿತು. ಪಾತಾಳದಿಂದ ಭೂಮಿಯ ಮೇಲೆ ಬಂತು. ಮತ್ತೆ



ಓಡುತ್ತಾ ಲೋಕವನ್ನೆಲ್ಲಾ ಪ್ರದಕ್ಷಿಣೆ ಮಾಡಿ ಕಡೆಗೆ ವಿಘ್ನೇಶ್ವರನ ಪಾದಗಳ ಬಳಿ ಬಿದ್ದುರುಳುತ್ತ, "ನನಗೆ ಸಾವು ಬರುವುದಿಲ್ಲ. ನಿನ್ನ ದಂತವು ನನ್ನನ್ನು ಬಿಡದೆ ಚುಚ್ಚುತ್ತಾ ಇದೆ. ಈ ಕಾಟ ತಾಳಲಾರೆ! ಕಾಪಾಡು ದೇವಾ!" ಎಂದು ಪೂರ್ತಿ ಗರ್ವವಳಿದು ಮೊರೆಯಿಡುವ ಮೂಷಿಕಾಸುರನ ಮೇಲೆ ವಿಘ್ನೇಶ್ವರನಿಗೆ ಕರುಣೆಯುಂಟಾಯಿತು. ಕೂಡಲೇ ದಂತದ ತುಂಡು ಅವನ ಅಭಯಹಸ್ತವನ್ನು ಅಲಂಕರಿಸಿತು.

ವಿಘ್ನೇಶ್ವರನು ಇಲಿಯನ್ನು ನೋಡಿ, "ಎಲೋ ಮೂಷಿಕಾ! ಸಣ್ಣ ಇಲಿಯಾಗಿದ್ದರೂ ಮಹಾ ಬಲಿಷ್ಠನಾಗಿರುವಿ. ವಿಷ್ಣು ಕೂರ್ಮಾವತಾರದಿಂದ ಮಂದರ ಪರ್ವತವನ್ನೂ, ಆದಿವರಾಹಾವತಾರದಿಂದ ಭೂಮಿಯನ್ನೂ ಎತ್ತಿದ್ದಾನೆ. ನೀನು ಅವನಿಗಿಂತ ಹೆಚ್ಚಿನ ಬಲಿಷ್ಠನು. ತಕ್ಕ ವಾಹನವಿಲ್ಲದೆ ಈ ಲಂಬೋದರನನ್ನು ಹೊತ್ತುಕೊಂಡು ನಡೆಯಲಾಗದೆ ಕಷ್ಟಪಡುತ್ತಿದ್ದೇನೆ. ನಿನ್ನಂತಹ..." ಎಂದು ಮುಂದೆ ಹೇಳಲು ಸಂದೇಹಪಟ್ಟನು.

ವಿಘ್ನೇಶ್ವರನ ಸ್ತುತಿ ಪಾಠದಿಂದ ಮೂಷಿಕಾಸುರನು ತುಂಬಾ ಉಬ್ಬಿ, "ಸ್ವಾಮಿ, ನಿನ್ನ ದಂತವು ನನ್ನೊಳಗೆ ತುಂಬಿದ್ದ ಅಜ್ಞಾನವನ್ನು ಚುಚ್ಚಿ ಚುಚ್ಚಿ ಕಿತ್ತು ಹೊರಗೆ ಹಾಕಿ ಜ್ಞಾನವನ್ನು ತುಂಬಿತು. ನನಗೆ ಚಿಕಿತ್ಸೆ ಮಾಡಿತು. ನಾನು ನಿನ್ನ ವಾಹನವಾಗುವುದಾದರೆ ನನ್ನ ಭಾಗ್ಯವೆಂದೇ ಭಾವಿಸುತ್ತೇನೆ. ನಿನಗಾಗಿ ಎಷ್ಟು ದೊಡ್ಡ ವಾಹನವಾಗಿಯೂ ಬೆಳೆಯಬಲ್ಲೆ" ಎಂದು ಆನೆಯಷ್ಟು ದೊಡ್ಡ ಇಲಿಯಾಗಿ ಬೆಳೆದು ನಿಂತನು.

ವಿಘ್ನೇಶ್ವರನು ಅದರ ಮೇಲೆ ಕಾಲುಗಳನ್ನು ಏರಿಸಿ ಕುಳಿತುಕೊಳ್ಳಲು ನೋಡುವಾಗ ಮಹಾ ಮೂಷಿಕವು ಕೀಚುಕೀಚು ಅನ್ನುತ್ತ ಸಣ್ಣ ಇಲಿಯಾಗಿ ಇಳಿಯಿತು. ವಿಘ್ನೇಶ್ವರನು "ಅಪ್ಪಾ ಮೂಷಿಕಾ, ನೀನು ಸಣ್ಣ ಇಲಿಯಾಗಿದ್ದರೇನೇ ನನ್ನನ್ನು ಸುನಾಯಾಸವಾಗಿ ಹೊರಬಲ್ಲೆ. ನನ್ನ ಆಕಾರಕ್ಕೆ ಸಣ್ಣ ಇಲಿಯ ವಾಹನವೇ ಎಲ್ಲಾ ವಿಧದಲ್ಲಿಯೂ ತಕ್ಕುದಾಗಿದೆ." ಎಂದನು. ಮೂಷಿಕಾಸುರನು ಸಣ್ಣ ಇಲಿಯ ರೂಪದಲ್ಲೇ ವಿಘ್ನೇಶ್ವರನನ್ನು ಏರಿಸಿಕೊಂಡು, ಸರಸರನೆ ಸುತ್ತಲೂ ತಿರುಗುತ್ತ, "ಹೌದು ಸ್ವಾಮಿ, ಹೌದು, ಈಗ ನಿನ್ನನ್ನು ಹೊತ್ತಿರುವಂತೆ ಅನಿಸುವುದೇ ಇಲ್ಲ!" ಎಂದನು.

ಇಷ್ಟಾಗುವಾಗ ಮೂರ್ಛೆಯಿಂದ ತನ್ನಂತೆ ಎಚ್ಚರಕ್ಕೆ ಬಂದ ಧವಳೆ ವಿಘ್ನೇಶ್ವರನಿಗೆ ನಮಸ್ಕಾರ ಮಾಡಿ, "ನನ್ನ ಗಂಡ ನಿನಗೆ ವಾಹನವಾಗಿ ಇಲಿಯ ರೂಪದಲ್ಲೇ ಇರುತ್ತಾನೆ. ನಾನು ಕೂಡಾ ನಿನಗೆ ಶ್ವೇತಛತ್ರವಾಗಿ ನೆರಳಿನ ಸೇವೆ ಮಾಡುತ್ತೇನೆ. ಇದು ದೇವಿಯ ಆಜ್ಞೆ. ಅನುಗ್ರಹಿಸು" ಎಂದಳು. "ಅಮ್ಮಾ! ಬಹಳ ಸಂತೋಷ. ನಿನ್ನ ಬಿಳಿ ಕೊಡೆಯ ತಣ್ಣಗಿನ ನೆರಳು ನನಗೆ ರಕ್ಷೆಯೇ



ಹೌದು. ಇದು ನನಗೆ ಬಂದ ಪರಮ ಭಾಗ್ಯ !" ಎಂದು ಹೇಳಿ ಇಲಿಯನ್ನು ನೋಡಿ, "ಕೇಳಿದೆಯಾ ವಕ್ರದಂತಾ ! ದೇವಿಯ ಅನುಗ್ರಹ ಪಡೆದ ಧವಳೆಯ ಮಾತಿಗೆ ಬೇರೆ ಮಾತಿಲ್ಲ. ಇನ್ನೇನೂ ಸಂದೇಹಿಸಬೇಡ. ನನ್ನ ವಾಹನವಾಗಿ ನನ್ನ ಹತ್ತಿರವೇ ಇರು. ನನ್ನೊಂದಿಗೆ ನನಗೆ ಸಿಗುವುದನ್ನು ನೀನೂ ತಿನ್ನು. ನಿನಗೂ ಕಣ್ಣಿಗೆ ಹಬ್ಬವಾಗಿ ದೇವತಾದಿಗಳಿಂದ ಹಿಡಿದು ಎಲ್ಲರೂ ಗಲ್ಲ ಬಡಿದು ಕೊಂಡು ಮೂರು ಮೂರು ಸಾರಿ ಮುಂಡಗಾಲೂರಿ ನಮಸ್ಕರಿಸುತ್ತಾರೆ. ಅದು ನಿನಗಲ್ಲವೆಂಬುದನ್ನು ಮಾತ್ರ ನೆನಪಿಟ್ಟುಕೊಂಡರೆ ನಿನಗೂ ಆ ಗೌರವ ಸಂದ ಹಾಗೆಯೇ ! ಗರ್ವಿಷ್ಠನಾಗದಿರು ಕಂಡೆಯಾ !" ಎಂದನು.

"ಗೊತ್ತಾಯಿತು ದೇವಾ ! ನನ್ನ ಬಹು ದಿನಗಳ ಆಶೆ ಕೈಗೂಡಿದಂತಾಗಿದೆ. ನಾನು ವಕ್ರದಂತನಾಗಿ ದ್ದಾಗ ನನ್ನ ಮುಂದೆ ದೇವತೆಗಳಿಂದ ಹೀಗೆಲ್ಲಾ ಮಾಡಿಸಿಕೊಳ್ಳುತ್ತಿದ್ದೆ. ನಿನ್ನ ವಾಹನವಾಗಿ ಅದೀಗ ವರವಾಗಿ ಪರಿಣಮಿಸಿ, ನನ್ನ ನಿರ್ಗರ್ವ ಸ್ಥಿತಿಯಲ್ಲಿ ಮುಂದುವರಿಯುವಂತಾಯಿತು. ಕೃತಾರ್ಥನಾದೆನು" ಎಂದನು ಮೂಷಿಕಾಸುರ.

ಧವಳೆ ಎಂಬ ನಾಮಾಂತರವುಳ್ಳ ಮಹಾಶ್ವೇತೆ ಬಿಳಿಯ ಕೊಡೆಯ ರೂಪತಾಳಿ ವಿಘ್ನೇಶ್ವರನ ಹಿಂದೆ ನಿಂತಳು. ಆ ದಂಪತಿಗಳು ಚಿರಂಜೀವಿಗಳಾಗಿ, ವಿನಾಯಕನನ್ನು ಹಾಗೆಯೇ ಸೇವಿಸಿಕೊಂಡಿರುವರು. ಮೂಷಿಕವಾಹನವಿಲ್ಲದ ವಿಘ್ನೇಶ್ವರನನ್ನು ಯಾರೂ ನೋಡದಂತಾಯಿತು.

ಆಗ ವಿಷ್ಣು ವಿಘ್ನೇಶ್ವರನ ಬಳಿಗೆ ಬಂದು, "ಎಲೋ ಏಕದಂತಾ ! ಮೂಷಿಕೋತ್ತಮ ವಾಹನಾ ! ನಿನ್ನ ವಾಹನವನ್ನು ನೋಡಿದರೆ ನನಗೆ ಅಸೂಯೆಯಾಗುತ್ತದೆ. ಎಷ್ಟು ಒಳ್ಳೆಯ ವಾಹನ ವನ್ನು ಸಂಪಾದಿಸಿ ಬಿಟ್ಟೆಯಲ್ಲ !" ಎಂದು ಶ್ಲಾಘಿಸಿದನು.

"ನಿನ್ನ ಕಲ್ಕಿ ಅವತಾರದಲ್ಲಿ ನನ್ನ ವಾಹನವನ್ನು ನಿನಗೆ ಕೊಡುವೆನು. ಅದು ಬಿಳಿಯ ಕುದುರೆಯಾಗಿ. ನಿನ್ನನ್ನು ಅಂತರಿಕ್ಷವನ್ನು ದಾಟಿಸಿ, ಗ್ರಹಾಂತರಗಳಿಗೆ ಕೂಡಾ ಒಯ್ಯುತ್ತದೆ. ವಿಹರಿಸಿ ಹೋಗುವ ಮಾನವರಿಗೆ ಹೊಸ ಹೊಸ ವಲಸೆ ರಾಜ್ಯಗಳನ್ನು ಹೊಂದಿಸಿಕೊಡುವೆಯಂತೆ" ಎಂದನು ವಿಘ್ನೇಶ್ವರ.

"ನಿನ್ನ ಬಾಯಿಯಿಂದ ಹೊರಟ ಮಾತು ಸುಳ್ಳಾಗಲಾರದು" ಎಂದು ವಿಷ್ಣು ಸಂತೋಷ ಪಟ್ಟನು. ಆಗ ನಾರದನು ಬಂದು, "ಹೇ ವಿಜಯ ವಿಘ್ನೇಶ್ವರಾ ! ಇಷ್ಟರ ವರೆಗೆ ನಿನ್ನೊಂದಿಗೆ ವಿಷ್ಣುವಿನ ಒಂಬತ್ತು ಅವತಾರಗಳೂ ತಿಳಿದು ಬಂದುವು. ಒಂದೇ ಉಳಿದಿದೆ" ಎಂದನು.

ವಿಷ್ಣು ನಾರದನನು ನೋಡಿ ಕಣ್ಣು ಕಿಸಿದು, "ಬೇಗದಲ್ಲೇ ಆ ಕಲ್ಯಾಣ ಘಳಿಗೆ ಬಂದಾಗ ಅದೂ ತಿಳಿಯುತ್ತದೆ. ಅವಸರವೇಕೆ ?" ಎಂದನು.

"ಯಾರ ಕಲ್ಯಾಣದೇವಾ ?" ಎಂದು ನಾರದನು ಕೇಳಿದನು. "ನಮ್ಮ ಕಲ್ಯಾಣ ಚಕ್ರವರ್ತಿಯಾದ ವಿಜಯ ವಿಘ್ನೇಶ್ವರನದೇ" ಎಂದನು ವಿಷ್ಣು.

ಆಗ ವಿಘ್ನೇಶ್ವರನು ಕಿರುಗೋಪದಿಂದ ವಿಷ್ಣುವನ್ನು ನೋಡುತ್ತ, "ಹುಂ. ಸಾವಿರ ವಿಘ್ನಗಳನ್ನು ಉಂಟುಮಾಡಲೇ ಬೇಕಾಯಿತು !" ಎಂದು ತನಗೆ ತಾನೇ ಗಟ್ಟಿಯಾಗಿ ಗೊಣಗಿದನು.

"ಸಾವಿರಕ್ಕೆ ನಿಲ್ಲಿಸಿಬಿಡಪ್ಪಾ ! ಸಾವಿರ ವಿಘ್ನಗಳು ಪೂರ್ತಿಯಾದ ಮೇಲೆ ಅರ್ಧ ವಿಘ್ನವನ್ನು ಕೂಡಾ ಹುಟ್ಟಿಸಬೇಡ. ನೆನಪಿರಲಿ !" ಎಂದನು ವಿಷ್ಣು ಎಚ್ಚರಿಸುವ ಧೋರಣೆಯಲ್ಲಿ.

ನಾರದನು, "ಸಾವಿರ ವಿಘ್ನಗಳು ತಾನೇ ? ಅದೇನೂ ದೊಡ್ಡದಲ್ಲ. ಸಾವಿರ ವಿಘ್ನಗಳು ಬಂದು ಹೋದ ಮೇಲೆ ವಿಘ್ನೇಶ್ವರನ ಕಲ್ಯಾಣ ಖಂಡಿತವಾಗಿ ಆಗುತ್ತದೆ" ಎಂದು "ಸರಿಮಾಂಗರಿ" ಬಾರಿಸುತ್ತಾ ಹಾಡುತ್ತಾ ನಾರದನು ಲೋಕಸಂಚಾರಕ್ಕೆ ಹೊರಟನು.

ಶಿವನಿಗೆ ಪಾರ್ವತಿಯ ಮೇಲಿನ ಮೋಹಾನುರಾಗಗಳೆಲ್ಲ ಒಂದಾಗಿ ದಿವ್ಯತೇಜಸ್ಸಾಗಿ ಮಾರ್ಪಟ್ಟಿತು. ಅಗ್ನಿದೇವನು ಅದನ್ನು ಒಯ್ದು ಶರವಣ ಸರೋವರದಲ್ಲಿ ಸೇರಿಸಿಬಿಟ್ಟನು. ಅದು ತೀರವನ್ನು ಸೇರಿ, ಅಲ್ಲಿ ಆರು ಮುಖಗಳ ಕಿರು ಬಾಲನು ಅವತರಿಸಿದನು. ಋಷಿಗಳು ಅವನಿಗೆ ಕುಮಾರಸ್ವಾಮಿ ಎಂದು ನಾಮಕರಣ ಮಾಡಿದರು. ಆರು ಮಂದಿ ಋಷಿಪತ್ನಿಯರು ಹಾಲೂಡಿ ಬೆಳೆಸುತ್ತ, ಆಮೇಲೆ ಪಾರ್ವತೀ ಪರಮೇಶ್ವರರಿಗೆ ಒಪ್ಪಿಸಿದರು. ಕುಮಾರಸ್ವಾಮಿ ದೊಡ್ಡವನಾದ ಮೇಲೆ ಗರುತ್ಮಂತನು ನವಿಲನ್ನು ಅವನಿಗೆ ವಾಹನವಾಗಿ ಕೊಟ್ಟನು. ಇಂದ್ರನು ಅವನಿಗೆ ಅನೇಕ ಆಯುಧಗಳನ್ನು ಕೊಟ್ಟನು. ಪಾರ್ವತಿ ಶೂಲದಲ್ಲಿ ಶಕ್ತಿಯನ್ನಿರಿಸಿ ಅವನಿಗೆ ಕೊಟ್ಟಳು. ಇದೆಲ್ಲಾ ತಾರಕಾಸುರನಿಗೆ ತಿಳಿಯಿತು. ತಾನು ಯಾರು ಅವತರಿಸಬಾರದೆಂದು ಮಾಡಬಾರದ ಪ್ರಯತ್ನಗಳನ್ನೆಲ್ಲ ಮಾಡಿದನೋ ಅಂಥವನೇ ಹುಟ್ಟಿದುದನ್ನು ತಿಳಿದು ತಾರಕಾಸುರನು ಭಯಕಂಪಿತನಾಗಿ, ಕೆಟ್ಟ ಕೆಟ್ಟ ಸ್ವಪ್ನಗಳನ್ನು ಕಾಣತೊಡಗಿದನು.

ಕುಮಾರಸ್ವಾಮಿ ದೊಡ್ಡ ತಪಸ್ಸು ಮಾಡಿ ಬ್ರಹ್ಮಜ್ಞಾನವನ್ನು ಪಡೆದು, ಓಂಕಾರದ ನಿಗೂಢ ರಹಸ್ಯಗಳನ್ನು ಸಾಕ್ಷಾತ್ ಶಿವನಿಗೆ ಗುರುವಾಗಿ ಉಪದೇಶಿಸಿ ಸ್ವಾಮಿನಾಥನೆನಿಸಿದನು. ಅಂಥವನಿಗೆ ಅಗ್ರಜನಾದ ವಿಘ್ನೇಶ್ವರನು ತನ್ನ ತಮ್ಮನೊಂದಿಗೆ ಶಿವ ಪಾರ್ವತಿಯರ ಕಣ್ಣಿನ ರಂಜಕನಾದನು. ಈ ಅಣ್ಣ ತಮ್ಮಂದಿರ ಲೀಲಾವಿಲಾಸಗಳಿಂದ ಕೈಲಾಸವು ಕಳೆಗೊಂಡು ಬೆಳಗುತ್ತಿದ್ದಿತು.





# ವಿಘ್ನೇಶ್ವರ

ಒಂದಾನೊಂದು ದಿನ ತ್ರಿಲೋಕಸಂಚಾರಿಯಾದ ನಾರದನು ಯಾವುದಕ್ಕೋ ಕೈಲಾಸದ ಕಡೆಗೆ ಹೋಗುತ್ತಿದ್ದನು. ಆಗ ಕಂಟಕಮುಖಿ ಎಂಬ ಯಕ್ಷಿಣಿ ಅವನಿಗೆ ಇದಿರಾಗಿ ಬಂದು ಮಂದಹಾಸದಿಂದ, "ಹೀಗೆ ಒಂದೇ ಸಮನೆ ತಿರುಗಾಡುವುದರಲ್ಲಿ ಏನು ಸುಖವಿದೆ? ನನ್ನನ್ನು ಮದುವೆಯಾಗಿಬಿಡು, ನಾರದ ಮಹಾಶಯಾ!" ಎಂದು ಕೇಳಿಕೊಂಡಳು.

"ನಾನು ಕಲಹಭೋಜನನೆಂದು ನಿನಗೆ ಗೊತ್ತಿದೆ ತಾನೇ? ಕಲಹದ ಅಡಿಗೇ ಮಾಡಿಬಡಿಸುವವಳು ಸಿಗಬೇಕಷ್ಟೆ? ಅಂಥವಳೆಲ್ಲಿದ್ದಾಳೋ ಏನೋ?" ಎಂದನು ನಾರದ.

"ನನ್ನನ್ನು ಏನೆಂದುಕೊಂಡೆ? ನಿನಗಿಂತಲೂ ದೊಡ್ಡ ಜಗಳಗಂಟಿ ನಾನು. ಬೇಕಾದರೆ ಈಗಲೇ ತೋರಿಸುತ್ತೇನೆ, ಸ್ವಲ್ಪ ಹೊತ್ತು ಇಲ್ಲಿಯೇ ನೋಡ್ತಾ ಇರು. ಪ್ರತ್ಯಕ್ಷವಾಗಿ ನಿರೂಪಿಸುತ್ತೇನೆ" ಎಂದಳು ಯಕ್ಷಿಣಿ.

ಆ ಸಮಯದಲ್ಲಿ ವಿಘ್ನೇಶ್ವರನೂ, ಕುಮಾರಸ್ವಾಮಿಯೂ ಕೈಕೈ ಹಿಡಿದುಕೊಂಡು ಮಾತಾಡುತ್ತಾ ಉತ್ಸಾಹದಿಂದ ಬರುತ್ತಿದ್ದರು. ನಾರದನು ಅವರನ್ನು ಯಕ್ಷಿಣಿಗೆ ತೋರಿಸುತ್ತ "ಅಕೋ ಅಲ್ಲಿ ನೋಡು. ಆ ಅಣ್ಣ ತಮ್ಮಂದಿರ ನಡುವೆ ಜಗಳ ಹುಟ್ಟಿಸು ನೋಡುವಾ. ಅಷ್ಟು ಮಾಡಿದರೆ ಸಾಕು, ಬೇರೇನೂ ಬೇಡ." ಎಂದನು.

"ಓ! ಈ ಕ್ಷಣದಲ್ಲೇ!" ಎಂದು ಕಂಟಕಮುಖಿ, ಪಕ್ಕದಲ್ಲಿದ್ದ ಸರೋವರದಲ್ಲಿ ಧುಮುಕಿ ಬಂಗಾರದ ಕಮಲಪುಷ್ಪವಾಗಿ ಮಾರ್ಪಟ್ಟಳು. ಆ ಹೂವಿನ ಕಡೆಯಿಂದ "ಪಾರ್ವತೀ ಪರಮೇಶ್ವರರ ಸುಪುತ್ರರಿಗಾಗಿಯೇ ಅರಳಿರುವ ನಾನು! ಬೇರೆ ಯಾರೂ ನನ್ನನ್ನು ಮುಟ್ಟಲು ಅರ್ಹರಲ್ಲ." ಎಂದು ಸಣ್ಣನೆಯ ರಾಗವೂ ಇಂಪಾಗಿ ಹೊರಟಿತು.

ವಿಘ್ನೇಶ್ವರನೂ ಕುಮಾರಸ್ವಾಮಿಯೂ ಗಟಗಟನೆ ಸರೋವರಕ್ಕಿಳಿದು ಆ ಹೂವನ್ನು ಹಿಡಿದು ನನ್ನದು, ತನ್ನದೆಂದು ವಾದ ಮಾಡುತ್ತ, "ನೀನೊಬ್ಬ ಅಮ್ಮ



ಮಾಡಿದ ಬೊಂಬೆ! ಕೊಳೆ ಮುದ್ದೆ!" ಎಂದು ಕುಮಾರಸ್ವಾಮಿ ವಿಘ್ನೇಶ್ವರನನ್ನೂ, "ನೀನು ಕೊಳಕು ಕುಂಟೆ ಶರವಣದಲ್ಲಿ ಹುಟ್ಟಿದ ಕೊಳಕ!" ಎಂದು ವಿಘ್ನೇಶ್ವರನು ಕುಮಾರಸ್ವಾಮಿಯನ್ನೂ ಹಳಿದುಕೊಳ್ಳ ತೊಡಗಿದರು. ಮಾತಿಗೆ ಮಾತಾಗಿ ವಾದ ವಿವಾದ ಕೈಗಳಿಗೆ ಹರಡಿತು.

ಕುಮಾರಸ್ವಾಮಿ ಮುಷ್ಟಿ ಬಿಗಿದು ವಿಘ್ನೇಶ್ವರನನ್ನು ತಿವಿಯಲು ನೋಡಿದನು. ವಿಘ್ನೇಶ್ವರನು ತನ್ನ ಸೊಂಡಿಲಿನಿಂದ ಅವನ ಮಣಿ ಗಂಟನ್ನು ಬಿಗಿ ಹಿಡಿದನು. ಇಬ್ಬರೂ ಒಬ್ಬರನ್ನೊಬ್ಬರು ದೂಡಾಡಿಕೊಂಡರು. ವಿಘ್ನೇಶ್ವರನು ಕುಮಾರಸ್ವಾಮಿಯ ಸೊಂಟವನ್ನು ಸೊಂಡಿಲಿನಿಂದ ಬಿಗಿ ಹಿಡಿದು ಮೇಲೆತ್ತಿದನು. ಕುಮಾರಸ್ವಾಮಿ ಮೇಲಿನಿಂದ ಶೂಲವನ್ನು ವಿನಾಯಕನ ಲಂಬೋದರಕ್ಕೆ ಗುರಿ ಹಿಡಿದನು.

ನಾರದನು ಓಡುತ್ತಾ ಬಂದು ಅವರ ಕಲಹವನ್ನು ನಿವಾರಿಸಿ, "ಇದೇನೂ ಇಲ್ಲೇ ಜಗಳವಲ್ಲ. ಇದರ ಬದಲಿಗೆ ಇಬ್ಬರೊಳಗೆ ಏನಾದರೂ ಪಂಥ ಕಟ್ಟಿಕೊಳ್ಳಿ" ಎಂದನು.

ನಾರದನ ಮಾತಿಗೆ ಗೌರವವಿತ್ತು ಅಣ್ಣ ತಮ್ಮಂದಿರಿಬ್ಬರೂ ದೂರ ದೂರ ನಿಂತರು. ಕುಮಾರಸ್ವಾಮಿ ತುಸು ಆಲೋಚಿಸಿ, "ಹಾಗಾದರೆ ಯಾರು ವಿಶ್ವಪ್ರದಕ್ಷಿಣೆಯನ್ನು ಮೊದಲು ಮಾಡಿ ಬರುವರೋ ಅವರಿಗೇ ಈ ಸ್ವರ್ಣಕಮಲ" ಎಂದನು.

"ಚೆನ್ನಾಗಿದೆ! ಚೆನ್ನಾಗಿದೆ!" ಎಂದನು ನಾರದ.

"ಇದೋ ನಾನು ಹೊರಟೆನು" ಎಂದವನೇ ಕುಮಾರಸ್ವಾಮಿ ತನ್ನ ನವಿಲಿನ ಮೇಲೇರಿ ವಿಶ್ವ ಪ್ರದಕ್ಷಿಣೆ ಮಾಡಲು ಆಕಾಶಮಾರ್ಗದಲ್ಲಿ ಹೊರಟನು.

ವಿಘ್ನೇಶ್ವರನು ಬೆಪ್ಪುಬಡಿದಂತೆ ನಿಟ್ಟುಸಿರುಬಿಟ್ಟು ಸುಮ್ಮನಿರುವುದನ್ನು ನೋಡಿ ನಾರದನು, "ಏನಿದು ವಿಘ್ನೇಶ್ವರಾ! ಪಂಥ ಕಟ್ಟಿಕೊಂಡು ಹೀಗೆ ಸುಮ್ಮನಿರುವೆಯಲ್ಲಾ!" ಎಂದನು.

"ಹೋಗಲಿ ಬಿಡಯ್ಯಾ. ಯಾರಿಗೆ ಎಷ್ಟು ಪ್ರಾಪ್ತಿಯೋ ಅಷ್ಟೇ ಸಿಗುತ್ತೆ. ಸ್ವರ್ಣಕಮಲ ನನಗೇ ಬೇಕೆಂದರೆ ಬಂದುಬಿಡುತ್ತೇನು? ನಾನು ಈ ಬೊಜ್ಜುಹೊಟ್ಟೆ ಹೊತ್ತುಕೊಂಡು ಪುಟ್ಟಿಲಿಯ ಮೇಲೆ ವಿಶ್ವಪ್ರದಕ್ಷಿಣೆ ಏನು ಮಾಡೇನು? ತಮ್ಮನೇ ತೆಗೆದುಕೊಳ್ಳಲಿ ಕಮಲವನ್ನು! ಪಾಪ! ಎಷ್ಟಾದರೂ ಚಿಕ್ಕವನು." ಎಂದನು.

"ಅಯ್ಯಾ ವಿಶ್ವಪತೀ! ವಿಶ್ವ ಜನನೀಜನಕರಾದ ಪಾರ್ವತೀ ಪರಮೇಶ್ವರರನ್ನು ದರ್ಶಿಸಬೇಕೆಂದು ಬಂದೆನು. ನಿನ್ನಿಷ್ಟ. ಆಮೇಲೆ ಬರುತ್ತೇನೆ" ಎಂದು ಹೇಳಿ ನಾರದನು ಹೊರಟುಹೋದನು.

ವಿಘ್ನೇಶ್ವರನು ತಟಕ್ಕನೆ ಎದ್ದು ಗುಡುಗುಡು ಓಡುತ್ತಾ ಹೋಗಿ, ಒಂದು ದಿಣ್ಣೆಯ ಮೇಲೆ ಒಟ್ಟಾಗಿ ಕುಳಿತಿದ್ದ ಪಾರ್ವತೀ ಪರಮೇಶ್ವರರಿಗೆ ಮೂರು ಪ್ರದಕ್ಷಿಣೆ ಮಾಡಿ ಬದಿಯಲ್ಲಿ ತಮ್ಮನು ಬರುವುದನ್ನೇ ಕಾದು ನಿಂತನು.



ಬಹಳ ಹೊತ್ತಿನ ಮೇಲೆ ಆಯಾಸದಿಂದ ಉಸಿರುಬಿಡುತ್ತ, ವಿಶ್ವಪ್ರದಕ್ಷಿಣೆ ಮುಗಿಸಿ ಕುಮಾರಸ್ವಾಮಿ ನವಿಲು ವಾಹನದಿಂದ ಇಳಿದನು. ವಿಘ್ನೇಶ್ವರನು ತಮ್ಮನನ್ನು ಆಲಿಂಗಿಸಿಕೊಂಡು, "ತಮ್ಮಾ ! ಪಾಪ ! ಬಹಳ ಕಷ್ಟಪಟ್ಟು ವಿಶ್ವವನ್ನು ಸುತ್ತಿ ಬಂದಿರುವಿ. ಸ್ವರ್ಣ ಕಮಲವನ್ನು ನೀನೇ ತೆಗೆದುಕೋಪ್ಪ. ಪಂದ್ಯದಲ್ಲಿ ನಾನೇ ಗೆದ್ದವನಾದರೂ ನನಗೆ ಹೂವೇನೂ ಬೇಡ ಬಿಡು". ಎಂದನು.

ಕುಮಾರಸ್ವಾಮಿ ಬೆರಗಾಗಿ "ಅದು ಹೇಗೆ ?" ಎಂದು ಕಣ್ಣರಳಿಸಿ ಕೇಳಿದನು.

"ನಿನಗಿಂತ ಮೊದಲು ನಾನೇ ಒಂದಲ್ಲ, ಮೂರು ಸಾರಿ ವಿಶ್ವಪ್ರದಕ್ಷಿಣೆ ಮಾಡಿದ್ದೇನೆ. ಸುಳ್ಳೋ ಸತ್ಯವೋ ಯಾರನ್ನು ಬೇಕಾದರೂ ಕೇಳು !" ಎಂದನು ವಿಘ್ನೇಶ್ವರ.

"ನಿಜ ! ವಿಘ್ನೇಶ್ವರನೇ ಗೆದ್ದವನು !" ಎಂದು ನಾಲ್ಕು ಮೂಲೆಗಳಿಂದಲೂ ಧ್ವನಿ ಕೇಳಿಸಿತು.

ಕುಮಾರಸ್ವಾಮಿ ನಿಜವನ್ನು ತಿಳಿದುಕೊಂಡು, ವಿಘ್ನೇಶ್ವರನ ಮುಂದೆ ಮೊಣಕಾಲೂರಿ ವಂದಿಸಿ, "ಅಣ್ಣಾ, ನಾನು ದೊಡ್ಡ ತಪಸ್ಸುಮಾಡಿ ಬ್ರಹ್ಮಜ್ಞಾನ ಹೊಂದಿದೆನೇ ಹೊರತು ಸಣ್ಣ ವಿಷಯದಲ್ಲಿ ಅಜ್ಞಾನಿಯೇ ಸರಿ. ನೀನು ಕುಶಾಗ್ರಬುದ್ಧಿಯುಳ್ಳವನು. ನಿನ್ನ ಮುಂದೆ ನಾನೆಲ್ಲಿ ? ಎಷ್ಟಾದರೂ ನಾನು ನಿನ್ನ ತರುವಾಯದವನು ತಾನೇ ? ಈ ಸಂಗತಿ ಹೋಗಲಿ. ನನ್ನ ದುಡುಕನ್ನು ಕ್ಷಮಿಸಿಬಿಡು. ನಾನೀಗ ತಾರಕಾಸುರನ ಮೇಲೆ ಯುದ್ಧಕ್ಕೆ ಹೋಗುತ್ತೇನೆ. ನನ್ನನ್ನು ಆಶೀರ್ವದಿಸು ಅಣ್ಣಾ!" ಎಂದನು.

ವಿಘ್ನೇಶ್ವರನು ಕುಮಾರಸ್ವಾಮಿಯ ಭುಜ ಹಿಡಿದೆತ್ತಿ, "ತಮ್ಮಾ, ನಾನು ದೊಡ್ಡವನೆಂದೂ ನೀನು ಚಿಕ್ಕವನೆಂದೂ ಭಾವಿಸಿಕೊಳ್ಳಬೇಡ. ನೀನು ಹೇಳಿದಹಾಗೆ ಅಮ್ಮ ಮಾಡಿದ ಒಂದು ಆಟದ ಬೊಂಬೆಯೇ ನಾನು. ನಿನಗಾಗಿಯೇ ಪಾರ್ವತೀ ಪರಮೇಶ್ವರರಿಗೆ ಮದುವೆಯಾಗಿದೆ. ಅವರ ಅನುರಾಗದ ಫಲವೇ ನೀನು. ನಿನ್ನ ವಿಜಯವು ಎಂದೋ ಬರೆದಿಟ್ಟ ಮಾತು. ತಾರಕಾಸುರನು ನಿನ್ನಿಂದಲೇ ಸಾಯಬೇಕೆಂದು ವರ ಪಡೆದಿದ್ದಾನೆ. ಸುಬ್ರಹ್ಮಣ್ಯೇಶ್ವರನು ನೀನು. ನನಗೆ ಎಲ್ಲಾ ಕಡೆಯಲ್ಲಿಯೂ ಒಂದು ಸಾಧಾರಣ ಗುಡಿ ಇದ್ದರೆ, ನೀನಿರುವ ಆಲಯ ಪ್ರಾಂತವು ದೊಡ್ಡ ಪುಣ್ಯಕ್ಷೇತ್ರವಾಗುತ್ತದೆ. ದೊಡ್ಡ ಗೋಪುರವಿರುವ ಆಲಯಗಳಲ್ಲಿ ನೀನು ಎಲ್ಲ ದೇವತೆಗಳಿಗಿಂತಲೂ ಪ್ರಥಮ ಪೂಜೆ ಪಡೆಯುವ ಪ್ರಮುಖ ದೈವಮೂರ್ತಿಯಾಗಿ ಆರಾಧಿಸಲ್ಪಡುವೆಯಪ್ಪಾ. ಶೀಘ್ರವಾಗಿ ಹೋಗಿ ತಾರಕಾಸುರನ ಉಪದ್ರವಗಳನ್ನು ನಿಲ್ಲಿಸಿಬಿಡು." ಎಂದನು.

ಕುಮಾರಸ್ವಾಮಿ ದೇವ ಸೇನಾಧಿಪತಿಯಾಗಿ ತಾರಕಾಸುರನ ಮೇಲೆ ಯುದ್ಧಕ್ಕೆ ಹೊರಟನು.



ಇಷ್ಟರಲ್ಲಿ ಯಕ್ಷರ ಅಧಿಪತಿಯಾದ ಕುಬೇರನಿಗೆ ಕಂಟಕಮುಖಿ ಮಾಡಿದ ಜಗಳಗಂಟಿತನವು ಗೊತ್ತಾಯಿತು. ಅವನು ಕಂಟಕಮುಖಿಯನ್ನು ಹಿಡಿ ತರಿಸಿ, "ಎಲೇ ಪಾಪಿಷ್ಠಳೇ! ಮಾಯದಮಾರೀ! ಶಿವಕುಮಾರರೊಳಗೆ ಕಲಹ ತರುವಷ್ಟು ನಿನ್ನ ಹಾರಾಟವಾಯಿತೇನೇ? ಕಂಟಕೀಲತೆಯಾಗಿ ಭೂಮಿಯಲ್ಲಿ ಬಿದ್ದಿರು" ಎಂದು ಅವಳನ್ನು ಶಪಿಸಿ ದೂಡಿಸಿದನು.

ಕಂಟಕಮುಖಿ ತಪ್ಪು ಕ್ಷಮಿಸಬೇಕೆಂದು ಹೊರಳಿ ಹೊರಳಿ ಬೇಡಿಕೊಂಡಳು. ಆಗ ಕುಬೇರನು, "ವಿಘ್ನೇಶ್ವರನ ಅನುಗ್ರಹದಿಂದ ನಿನ್ನ ಶಾಪ ತೊಲಗುತ್ತದೆ" ಎಂದನು.

ಕಂಟಕಮುಖಿ ಮುಳ್ಳಿನ ಹಾಸು ಬಳ್ಳಿಯಾಗಿ ಭೂಮಿಯಲ್ಲಿ ಮೊಳೆತಳು.

ಅತ್ತ ಕುಮಾರಸ್ವಾಮಿ ದೇವತೆಗಳಿಗೆ ಸೇನಾನಾಯಕನಾಗಿ ಯುದ್ಧ ಮಾಡಿ ತಾರಕಾಸುರನನ್ನು ನಿರ್ಮೂಲ ಮಾಡಿದನು. ದೇವೇಂದ್ರನು ಅವನಿಗೆ ತನ್ನ ಕುಮಾರಿಯಾದ ದೇವಯಾನಿಯನ್ನು ಕೊಟ್ಟು ವಿವಾಹ ನಡೆಸಲು ಎಲ್ಲಾ ಏರ್ಪಾಡುಗಳನ್ನೂ ಮಾಡಲು ತೊಡಗಿದನು. ಆಗ "ಅಣ್ಣನಿಗಾಗದೆ ತಮ್ಮನ ಮದುವೆಯೆ?" ಎಂಬ ಪ್ರಶ್ನೆಯೊಂದು ಹೊರಟಿತು. ಅದರಿಂದ ಆ ಮದುವೆ ನಿಂತಿತು.

ಆಗ ಪಾರ್ವತಿ ವಿಘ್ನೇಶ್ವರನನ್ನು ನೋಡಿ, "ಪ್ರಿಯ ಕಂದಾ! ನಿನ್ನ ತಮ್ಮನಿಗೆ ಮದುವೆಯಾಗಬೇಕಾದರೆ ನೀನು ಮದುವೆ ಮಾಡಿಕೊಳ್ಳಬೇಕು. ಅದು ನಿನ್ನ ಧರ್ಮ ಕೂಡಾ" ಎಂದಳು.

"ಇಂತಹ ಅರ್ಥವಿಲ್ಲದ ನಿಯಮಗಳೆಲ್ಲ ಏತಕ್ಕೆ ಅಮ್ಮಾ? ಯಾರ ಇಷ್ಟಾನುಸಾರ ಅವರು ಮದುವೆಯಾಗುವುದು ಬಿಟ್ಟು, ಬಾಲ ಮುರಿದ ನರಿಯ ಹಾಗೆ, ನನ್ನಂಥ ಏಕದಂತನನ್ನು ಕೂಡಾ ಕಾಂತಾಮಣಿಯರ ಕೊರಳಿಗೆ ಕಟ್ಟುವುದೇನೂ ಚೆನ್ನಾಗಿಲ್ಲ ಅಮ್ಮಾ!" ಎಂದು ವಿಘ್ನೇಶ್ವರನು ಮೊದಲನೇ ವಿಘ್ನವೊಡ್ಡಿದನು.

ಹೀಗೆ ಅವನು ತನ್ನ ಮದುವೆಗೆ ಸೊಂಡಿಲು, ಹೊಟ್ಟೆ, ಕಿವಿ ಮುಂತಾದ ನೆಪಗಳನ್ನು ಹೇಳುತ್ತಾ, ಎಷ್ಟೋ ವಿಘ್ನಗಳನ್ನು ಒಡ್ಡುತ್ತಾ ಬಂದನು. ಒಂದುಸಾರಿ ಪಾರ್ವತಿ ಈಸಾರಿ ಮದುವೆಯಾಗಲೇ ಬೇಕೆಂದು ಹಟ ಹಿಡಿದು ಹೇಳಿದಳು.

"ಇಲ್ಲಮ್ಮಾ, ನನ್ನದೊಂದು ಕೆಲಸ ಉಳಿದಿದೆ. ನಾನು ತಪಸ್ಸೇ ಮಾಡಲಿಲ್ಲ. ತಮ್ಮನು ತಪಸ್ಸು ಮಾಡಿದ್ದಾನೆ. ಅಣ್ಣನಾದ ನಾನು ತಪಸ್ಸು ಮುಗಿಸಿ ಬರುತ್ತೇನೆ" ಎಂದು ಅಭ್ಯಂತರ ಹೇಳಿ ವಿಘ್ನೇಶ್ವರನು ತಪಸ್ಸಿಗೆ ಹೋದನು.

ಅವನ ತಪಸ್ಸನ್ನು ನೋಡಿ ಇಂದ್ರನು ಹೆದರಿ ವಿಘ್ನೇಶ್ವರನ ತಪಸ್ಸನ್ನು ಕೆಡಿಸಲು ಅನೇಕಮಂದಿ ಅಪ್ಸರಸಿಯರನ್ನು ನಿಯಮಿಸಿದನು. ಅರ್ಕಳೆಂಬ ಅಪ್ಸರೆ ತನ್ನಿಂದಾಗದೆಂದು ನಿರಾಕರಿಸಿದಳು.

"ಹೊಲೆಕಾಗೆಯುವಳೇ! ನೀನು ಮುಟ್ಟಲಾಗದ ಎಕ್ಕೆಗಿಡವಾಗಿ ಭೂಮಿಯಲ್ಲಿ ಮೊಳೆತುಕೊಂಡಿರು!" ಎಂದು ಶಪಿಸಿದನು ಇಂದ್ರ.

ವಿಘ್ನೇಶ್ವರನು ತಪಸ್ಸಿಗೆ ಅನುಕೂಲವಾದ ಸ್ಥಳದಲ್ಲಿ ಕುಳಿತು ಧ್ಯಾನಮಗ್ನನಾಗಿದ್ದನು. ಅವನ ಸುತ್ತಲೂ ಮುಳ್ಳು ತುಂಬಿದ ಪಾಸುಕಳ್ಳಿ ಹೂವುಗಳೂ ಇದ್ದವು. ಅಪ್ಸರಸಿಯರು ಅಲ್ಲಿಗೆ ಬಂದು ನಾಟ್ಯವಾಡಲು ಪ್ರಯತ್ನಿಸಿದರು. ಅವರ ಕಾಲಿಗೆ ಮುಳ್ಳುಗಳು ಚುಚ್ಚುವುದರಿಂದ "ಹಾಯ್, ಹೋಯ್" ಎಂದು ಆರ್ತನಾದ ಮಾಡುತ್ತ ಅಡ್ಡಾದಿಡ್ಡಿಯಾಗಿ ಕುಪ್ಪಳಿಸ ತೊಡಗಿದರು. ಅಪ್ಸರಸಿಯರ ಭಯ ಆರ್ತನಾದಗಳಿಂದ ವಿಘ್ನೇಶ್ವರನಿಗೆ ಧ್ಯಾನಭಂಗವಾಗಿ ತನ್ನ ತಪಸ್ಸನ್ನು ಕೆಡಿಸಿದವರ ಮೇಲೆ ಅಭಿಮಾನ ಉಂಟಾಯಿತು. ಅಪ್ಸರಸಿಯರು ಭಯಪಡುತ್ತ ಬಿದ್ದೇಳುತ್ತ ಕುಂಟುತ್ತ ಓಡಿಹೋಗಿ ಬಿಟ್ಟರು. ಅಲ್ಲಿ ಪಾಸು ಮುಳ್ಳಾಗಿ ಬೆಳೆದ ಯಕ್ಷಿಣಿ ಕಂಟಕಮುಖಿ, ನಿಜರೂಪದಿಂದೆದ್ದು "ಸ್ವಾಮಿ! ನೀವಿಬ್ಬರು ಅಣ್ಣ ತಮ್ಮಂದಿರೊಳಗೆ ಕಲಹ ತಂದು ಕುಬೇರನ ಶಾಪದಿಂದ ಹೀಗೆ ಬಿದ್ದಿದ್ದೇನೆ. ನನ್ನ ಮೇಲೆ ಅನುಗ್ರಹಿಸಬೇಕು" ಎಂದು ಅಡ್ಡಬಿದ್ದು ಬೇಡಿಕೊಂಡಳು.

ಆದಿನ ಸರಿಯಾಗಿ ಭಾದ್ರಪದ ಶುಕ್ಲ ಚತುರ್ಥಿ. ವಿನಾಯಕಚೌತಿಯ ದಿನವೇ ಅದು. ವಿಘ್ನೇಶ್ವರನು ಕಂಟಕಮುಖಿಯ ಶಾಪವನ್ನು ತೊಲಗಿಸಿ, ವಿನಾಯಕ ಚೌತಿಯ ದಿನ ನಿನ್ನ ಮುಳ್ಳು ಕಾಯಿಗಳನ್ನು ಎಲ್ಲರೂ ಸ್ಮರಿಸಿಕೊಳ್ಳುವಂತಾಗಲಿ" ಎಂದು ನುಡಿದನು.

ಕಂಟಕಮುಖಿ ಶಾಪ ವಿಮೋಚನೆಯಾಗಿ ಅಲಕಾಪುರಿಗೆ ಹೋದ ಮೇಲೆ, ಎಕ್ಕೆಗಿಡಗಳಾಗಿ ಹುಟ್ಟಿದ ಅರ್ಕಳು ವಿಘ್ನೇಶ್ವರನ ಮುಂದೆ ಬಂದು, "ಸ್ವಾಮಿ, ನನ್ನನ್ನು ಕೂಡಾ ಅನುಗ್ರಹಿಸಬೇಕು. ಇಂದ್ರನ ಆಜ್ಞೆಯನ್ನು ನಿರಾಕರಿಸಿ ಯಾರೂ ಮುಟ್ಟಲಾಗದ ಹೊಲೆಗಿಡವಾಗಿ ಹುಟ್ಟಿದ್ದೇನೆ. ಅರ್ಕ ಎಂಬ ಅಪ್ಸರಸಿ ನಾನು. ನಿಮ್ಮ ಮೇಲೆ





ತುಂಬಾ ಭಕ್ತಿಶ್ರದ್ಧೆಯುಳ್ಳವಳು. ಕಾಪಾಡಿರಿ" ಎಂದು ಬೇಡಿಕೊಂಡಳು.

ವಿಘ್ನೇಶ್ವರನು ಅರ್ಕಳನ್ನು ನೋಡಿ, "ಮುಟ್ಟಿ ಲಾಗದು ಎಂದು ಪ್ರಪಂಚದಲ್ಲಿ ಯಾವುದೂ ಇರಲಾಗದು. ನಿನ್ನ ಮೊಗ್ಗೆಗಳನ್ನೂ ಹೂವು ಗಳನ್ನೂ ನಾನು ಪ್ರೀತಿಯಿಂದ ಮಾಲೆಯಾಗಿ ಧರಿಸುತ್ತೇನೆ. ನೀನು ದ್ವಾಪರಯುಗದಲ್ಲಿ ಕುಬ್ಜೆಯಾಗಿ ಹುಟ್ಟುವಿ. ಕೃಷ್ಣನಿಂದ ನೀನು ಪುನೀತಳಾಗುವಿ. ನಿನ್ನ ಶಾಪ ಹೋಯಿತು. ನಿಶ್ಚಿಂತಳಾಗಿ ಸ್ವರ್ಗಕ್ಕೆ ಹೋಗು. ನನ್ನನ್ನು ಮೀರಿ ಇಂದ್ರನು ನಿನಗೇನೂ ಮಾಡಲಾರನು. ಯಾರಿಂದಲೂ ನಿನಗೆ ಯಾವ ಭಯವೂ ಇಲ್ಲ. ಯಾರ ಶಾಪವೂ ನಿನಗೆ ತಗಲದು. ಎಕ್ಕೆ ಗಿಡವಾಗಿ ಹುಟ್ಟಿದ ನಿನ್ನ ಆ ಸಸ್ಯರೂಪ ಭೂಮಿಯಲ್ಲಿ ಶಾಶ್ವತವಾಗಿರುತ್ತದೆ. ಅದು ಆಯುರ್ವೇದ ಔಷಧಕ್ಕೆ ಉಪಯೋಗವಾಗಲಿ! ಸೂರ್ಯನಿಗೆ ಪ್ರೀತಿಯಾಗಲಿ!" ಎಂದನು.

ಅರ್ಕ ಅಪ್ಸರೆಯ ರೂಪದಲ್ಲಿ ಸ್ವರ್ಗಾರೋಹಣ ಮಾಡಿದಳು. ವಿಘ್ನೇಶ್ವರನು ತಪಸ್ಸು ಬಿಟ್ಟು ಕೈಲಾಸಕ್ಕೆ ಹೋದನು.

ಪಾರ್ವತಿ ಆಶೆಯಿಂದ "ಕಂದಾ, ತಪಸ್ಸು ಮುಗಿಯಿತಷ್ಟೆ? ಇನ್ನು ಮದುವೆ..." ಎನ್ನಲು, ವಿಘ್ನೇಶ್ವರನು, "ಮುಗಿಯುವುದೆಲ್ಲಿ? ಅಸಲು ತಪಸ್ಸೇ ಸಾಗಲಿಲ್ಲ. ಮತ್ತೆ ಹೋಗಬೇಕು ತಪಸ್ಸಿಗೆ" ಎಂದು ಹೇಳಿ ಹೊರಟು, ತನ್ನ ತಪಸ್ಸಿಗೆ ಇನ್ನೊಂದು ಸ್ಥಳವನ್ನು ಆರಿಸಿಕೊಂಡನು.

ಆ ಪ್ರದೇಶವೆಲ್ಲಾ ಹಾವುಗಳ ಹುತ್ತಗಳು ತುಂಬಿದ್ದುವು. ಸುತ್ತಲೂ ವಲಯಾಕಾರದಲ್ಲಿ ಹುತ್ತ ಗಳಿರುವ ಜಾಗ ನೋಡಿ ವಿಘ್ನೇಶ್ವರನು ತಪಸ್ಸಿಗೆ ಕುಳಿತನು. ಹುತ್ತಗಳಿಂದ ಹಾವುಗಳು ನೆಟ್ಟಗೆ ಎದ್ದು ಹೆಡೆಬಿಡಿಸಿ ಭುಸುಗುಡುತ್ತ ಕಾವಲು ಕಾಯ ತೊಡಗಿದುವು.

ಇದನ್ನು ನೋಡಿ ಇಂದ್ರನು ಮೂಷಿಕಾಸುರನ ಅನುಚರರೊಂದಿಗೆ, "ನೋಡಿದಿರಾ! ನಿಮ್ಮ ಒಡೆಯ ನನ್ನು ವಾಹನವಾಗಿ ಮಾಡಿಕೊಂಡ ವಿಘ್ನೇಶ್ವರನು ನಿಮ್ಮನ್ನೆಲ್ಲಾ ನಿರ್ಮೂಲ ಮಾಡಲು ತಪಸ್ಸು ಮಾಡುತ್ತಿದ್ದಾನೆ. ಹೋಗಿ ಹಗೆ ತೀರಿಸಿಕೊಳ್ಳಿರಿ" ಎಂದು ಕೆರಳಿಸಿದನು.

ಆ ರಾಕ್ಷಸರು ವಿನಾಯಕನ ಮೇಲೆ ದಾಳಿ ಮಾಡಲು ಬಂದರು. ಆಗ ಪಾತಾಳದಿಂದ ಸಾವಿರಾರು ಸರ್ಪಗಳು ಬಂದು ಆ ರಾಕ್ಷಸರನ್ನು ಮುತ್ತಿಕೊಂಡವು. ಅನೇಕರು ಸತ್ತರು. ಉಳಿದವರು ಮದವಿಳಿದು, ತಮ್ಮ ಬುದ್ಧಿ ಹೀನತೆಯನ್ನು ಹಳಿದುಕೊಳ್ಳುತ್ತಾ, ಇಂದ್ರನನ್ನು ಬಯ್ಯುತ್ತಾ ಓಡಿಹೋದರು.

ಅಷ್ಟಕ್ಕೆ ಬಿಡದೆ ಇಂದ್ರನು ಉಲ್ಲಾಸವಂತರಾದ ದೇವತಾಪುರುಷರನ್ನೂ, ಅವರೊಂದಿಗೆ ಅಪ್ಸರಸಿಯ ರನ್ನೂ ಸೇರಿಸಿ, "ನೀವು ಹೋಗಿ ವಿಘ್ನೇಶ್ವರನಲ್ಲಿ

ಅನುರಾಗೋದಯವಾಗುವ ಹಾಗೆ ನಿಮ್ಮ ಆಟಗಳನ್ನು ತೋರಿಸಿ" ಎಂದು ಆಜ್ಞೆ ಮಾಡಿ ಕಳುಹಿಸಿದನು. ಅವರ ಹಿಂದೆಯೇ ವಜ್ರಾಯುಧವನ್ನು ಧರಿಸಿ ತಾನೂ ಹೊರಟನು.

ದೇವತೆಗಳು ಅಪ್ಸರಸಿಯರೊಂದಿಗೆ ಸುರಾಪಾನ ಮಾಡುತ್ತ, ಕೋಲಾಹಲದಿಂದ ನಾಟ್ಯ ಪ್ರಾರಂಭಿಸಿದರು. ಸರ್ಪಗಳು ಅವರ ಮೇಲೆ ಹಾರಿ ಸುತ್ತಿ ಅನೇಕರನ್ನು ಕಡಿದುವು. ಇಂದ್ರನು ಸರ್ಪಗಳ ಮೇಲೆ ವಜ್ರಾಯುಧವನ್ನು ಝಳಪಿಸಿದನು. ಪಾತಾಳದಿಂದ ಇನ್ನಷ್ಟು ಸರ್ಪಗಳು ಬಂದು, ದೇವತೆಗಳನ್ನೆಲ್ಲ ಸ್ವರ್ಗಕ್ಕೆ ಓಡಿಸಿದುವು. ಆ ಸಮಯದಲ್ಲಿ ವಿಚಿತ್ರವೆನಿಸುವಂತೆ ದೇವತೆಗಳಿಗೂ ಸರ್ಪಗಳಿಗೂ ಒಂದು ಬಗೆಯ ಯುದ್ಧವೇ ನಡೆಯಿತು.

ಸರ್ಪಗಳ ಕಡಿತದಿಂದ ಅಮರರಾದ ದೇವತೆಗಳಿಗೆ ನೋವಾಗುತ್ತಿತ್ತೇ ಹೊರತು ಮರಣವಾಗುತ್ತಿದ್ದಿಲ್ಲ. ಇಂದ್ರನ ವಜ್ರಾಯುಧವೂ ಸರ್ಪವಾಹಿನಿಯ ಮುಂದೆ ವ್ಯರ್ಥವಾಯಿತು. ಈ ಬಗೆಯ ಯುದ್ಧ ಮುಗಿದು ಶಾಂತವಾದ ಮೇಲೆ, ವಿಘ್ನೇಶ್ವರನು ನಾಗರ ಸಹಾಯಕ್ಕೆ ಸಂತೋಷಪಟ್ಟು, ಹಾವುಗಳನ್ನು ಮುದ್ದಾಡಿ, ಅಲಂಕಾರವಾಗಿ ತನ್ನ ಮೇಲೆ ಹಾಕಿಕೊಂಡು ಕೈಲಾಸಕ್ಕೆ ಹೋದನು.

ಅವನ ಹಾವಾಡಿಗನಂತಹ ವೇಷ ನೋಡಿ ಪಾರ್ವತಿ ಬೆರಗಾದಳು. "ಆಶ್ಚರ್ಯವೇಕೆ ಅಮ್ಮಾ? ತಂದೆಯ ಸೊತ್ತು ಮಗನಿಗೆ ಸಂಕ್ರಮಿಸಬೇಕಾದುದು ಸಹಜ ತಾನೆ? ಶಂಕರಾಭರಣವು ನನಗೂ ಭೂಷಣವೇ! ಹಾವುಗಳು ನನಗೆ ಪ್ರಾಣ ಮಿತ್ರಗಳಾಗಿ, ತಮ್ಮ ಪ್ರಾಣವನ್ನೇ ತುಚ್ಛೀಕರಿಸಿ ನನ್ನನ್ನು ಕಾಪಾಡಿವೆ. ಆಪ್ತಮಿತ್ರರ ಸಂಗವೇ ನಿಜವಾದ ರಕ್ಷಾದಂಡವಲ್ಲವೇ ಅಮ್ಮಾ? ಅದಕ್ಕೇ ನಾನು ನಾಗಭೂಷಣನಾದೆನು" ಎಂದನು ವಿಘ್ನೇಶ್ವರ.

ಅದನ್ನು ಕೇಳಿ ಶಿವನಿಗೆ ಮುಗುಳುನಗು ಬಂತು. ಪಾರ್ವತಿ ವಿನಾಯಕನ ವಿಚಿತ್ರ ಚೇಷ್ಟೆಗಳಿಗೆ ಕೋಪಿಸಿಕೊಂಡಳು. ಅಂತೂ ವಿನಾಯಕನ ಮದುವೆಗೆ ವಿಘ್ನಗಳು ತಪ್ಪಲಿಲ್ಲ.

ಪಾರ್ವತಿ ಮತ್ತೊಂದುಸಾರಿ ಮದುವೆಗೆ ಬಲವಂತ ಮಾಡಿದಳು. "ಅಮ್ಮಾ, ಏನಾದರೂ ಘನಕಾರ್ಯ ಮಾಡಿದರೇನೇ ಸಮರ್ಥನೆನಿಸಲು ಸಾಧ್ಯ. ತಮ್ಮನ ಹಾಗೆ ನಾನು ಕೂಡಾ ಏನಾದರೂ ದೊಡ್ಡ ಕೆಲಸ ಮಾಡಿ ಘನವಂತನೆನಿಸಿಕೊಳ್ಳದೆ ಹೇಗೆ ಮದುವೆಯಾಗಲಿ?" ಎಂದನು ವಿಘ್ನೇಶ್ವರ.

"ನಿನಗೇನು ಕಡಿಮೆಯೋ ಕಂದಾ? ನೀನು ಸಮರ್ಥನಲ್ಲದೆ ಕೇವಲ ದಡ್ಡಮ್ಮನೆಂದು ಕೊಂಡೆಯಾ?" ಎಂದಳು ಪಾರ್ವತಿ.





# ವಿಘ್ನೇಶ್ವರ

ಕುಮಾರಸ್ವಾಮಿಗೆ ತನ್ನ ಮದುವೆ ನಿಂತುಹೋಗಲು ಕಾರಣನಾದ ವಿಘ್ನೇಶ್ವರನ ಮೇಲೆ ಕೋಪವಾಗಿತ್ತು. ಮನಸ್ಸಿನೊಳಗೆ ವಿಘ್ನೇಶ್ವರನ ಮೇಲೆ ಗುರು ಗುಡುತ್ತಿದ್ದನು.

ಒಂದುದಿನ ಕುಮಾರಸ್ವಾಮಿ ಮಾತಿನ ಸಂದರ್ಭದಲ್ಲಿ ತಾಯಿಯೊಂದಿಗೆ, " ಏಕೋ ಅಮ್ಮಾ, ನೀನು ಅಣ್ಣನನ್ನು ಸುಮ್ಮನೆ ಆಕಾಶಕ್ಕೆತ್ತಿ ಹೊಗಳುತ್ತಿರುವಿ. ಎಂಥ ಅಣ್ಣನೋ ! ಈ ತಿಂಡಿಬಾಕ ಅಣ್ಣನು ಏನು ಘನಕಾರ್ಯ ಸಾಧಿಸುತ್ತಾನೆ !" ಎಂದನು.

ಆಗ ಅಲ್ಲಿಯೇ ಇದ್ದ ವಿನಾಯಕನು ಕಣ್ಣೀರು ತುಂಬಿಕೊಂಡು, "ನೋಡಮ್ಮಾ ! ತಮ್ಮನು ಸ್ವಲ್ಪವೂ ಗೌರವಕೊಡದೆ ಎಂತಹ ಹೀನಮಾತು ಹೇಳುತ್ತಾನೆ!" ಎಂದನು.

ಪಾರ್ವತಿಗೂ ಕೋಪ ಬಂತು, ಅವಳು ವಿನಾಯಕನನ್ನು ಬಾಚಿತಬ್ಬಿ ಸಮಾಧಾಯಿಸುತ್ತ "ನೀನು ನನ್ನಿಂದಾದ ಬೊಂಬೆ ಅಂತ ಇವರಿಗೆಲ್ಲಾ ಕೋಪ ! ತಂದೆಯಂತೂ ನಿನ್ನನ್ನು ಕೊಂದೇಬಿಟ್ಟರು. ತಮ್ಮನು ಹೀಗೆ ಮಾತಿನಿಂದ ಹೊಡೆಯುತ್ತಾನೆ. ಹೋಗಲಿಬಿಡು, ಅವರ ಅಜ್ಞಾನ ಅವರಿಗೇ ನಾಚಿಗ್ಗೇಡು ! ನಿನ್ನ ಮೇಲೆ ನನ್ನ ಪೂರ್ತಿ ಅಭಿಮಾನವಿದೆಯಪ್ಪಾ ! ನನ್ನ ಬಂಗಾರದ ಮುದ್ದೆ ನೀನು !" ಎಂದಳು.

" ಅಮ್ಮಾ, ತಮ್ಮನು ಅಜ್ಞಾನಿಯಾಗಿದ್ದರೂ ಇರಬಹುದು. ತಂದೆಗೆ ಅಜ್ಞಾನ ಎಲ್ಲಿಯದು ಅಮ್ಮಾ ! ಹಾಗೆಂದವರನ್ನು ಹುಚ್ಚರೆನ್ನಬೇಕು " ಎಂದನು ವಿನಾಯಕ.

ಪಾರ್ವತಿ ಏನನ್ನೋ ನೆನೆದುಕೊಂಡು, " ನನಗೆ ಹುಚ್ಚೇನಿಲ್ಲ ಮಗಾ. ಆ ಶಂಕರ ಮಹಾದೇವನಿಗೇ ಆಗಾಗ ಹುಚ್ಚು ತಲೆಗೇರುವುದುಂಟು! ಒಮ್ಮೆ ಹಾಗೆ ಹುಚ್ಚು ತಲೆಗೇರಿ, ವಿಷ್ಣುವಿನ ಜಗನ್ಮೋಹಿನೀ ಅವತಾರದ ಹಿಂದೆಬಿದ್ದು ನಗೆಪಾಟಲಿಗೇ ಈಡಾದನಲ್ಲ! ಅದು ನಿನಗೇನು ಗೊತ್ತು?" ಎಂದಳು.

" ಓಹೋ ! ಅದು ಬೇರೆ ಇದೆಯೆ? ಆಮೇಲೆ ಏನಾಯಿತಮ್ಮಾ ?" ಎಂದು ಕೇಳಿದನು ಗಣಪತಿ.

೮. ಪ್ರಮಥಗಣಾಧಿಪತ್ಯ



"ಏನೋ ಬಹಳ ಘೋರವೇ ನಡೆಯಿತುಬಿಡು. ಅವರಿಬ್ಬರ ಮಧ್ಯದಲ್ಲಿ ಭೈರವನೆಂಬ ಕಾರ್ಗಪ್ಪು ಕತ್ತಲೆಯಂಥ ಹುಡುಗನೊಬ್ಬ ಹುಟ್ಟಿದನಂತೆ !" ಎಂದಳು ತಾಯಿ.

"ಹೌದೇನು ? ಹಾಗಾದರೆ ಅವನೂ ನನ್ನ ಅಣ್ಣ ನಾಗುತ್ತಾನೆ. ಅವನನ್ನು ನಾನು ನೋಡಲೇಬೇಕು. ಎಲ್ಲಿದ್ದಾನಮ್ಮಾ ಅವನು ?" ಎಂದು ಕೇಳಿದನು ಮಗ ಆತುರದಿಂದ.

"ಎಲ್ಲಿಯೋ ಶಬರರ ಕೇರಿಯಲ್ಲಿ ಇದ್ದಾನೆ. ಗುಡ್ಡಬಿಟ್ಟು ಕೆಳಗೆ ಬರುವುದೇ ಇಲ್ಲಂತೆ. ಕಪ್ಪು ಬಟ್ಟೆಗಳನ್ನೇ ಉಟ್ಟುಕೊಳ್ಳುತ್ತಾನಂತೆ. ತಪ್ಪಿ ಕೂಡಾ ಅವನ ಹತ್ತಿರ ಹೋಗಬೇಡಪ್ಪಾ. ಹೆದರಿಕೊಂಡು ಜ್ವರಬಂದೀತು !" ಎಂದಳು ಪಾರ್ವತಿ.

"ಹೆದರಿಕೊಳ್ಳುವ ಹಾಗೆ ಏನಿದೆಯಮ್ಮಾ ? ಅದನ್ನೂ ನಾನು ತಿಳಿದುಕೊಳ್ಳಬೇಡವೇ ?" ಎಂದನು ಗಣಪತಿ.

"ಹೆದರಿಕೆ ತಿಳಿಯಲು ಅಲ್ಲಿಗೆ ಹೋಗಬೇಕೆ ? ಮದುವೆಯಾದರೆ ತನ್ನಂತಾನೇ ತಿಳಿಯುತ್ತದೆ !" ಎಂದಳು ಪಾರ್ವತಿ.

"ಓಹೋ ! ಅದು ಬೇರೆ ಇದೆಯೋ ! ಪತ್ನೀ ರತ್ನವೆಂದರೆ ಅಷ್ಟೊಂದು ಭಯಂಕರವೆಂದಾಯಿತು. ಅದಕ್ಕೇ ನಾನು ಮದುವೆಯಾಗಲಾರೆ ಅನ್ನುವುದು ! ಬೇಡವೇ ಬೇಡಮ್ಮಾ ನನಗೆ ಮದುವೆ!" ಎಂದನು ಗಣೇಶ.

ಆ ಮಾತನ್ನು ಹಿಡಿದುಕೊಂಡು ಕುಮಾರಸ್ವಾಮಿ "ಅದೇ ನಿನ್ನ ಘನಕಾರ್ಯ ಅಣ್ಣಾ ! ನಾನು ಈಗಲೇ ಹೋಗಿ ಸೂರ್ಯನನ್ನು ಸುತ್ತಿಬರುತ್ತೇನೆ ನೋಡು" ಎಂದು ನವಿಲಿನ ಮೇಲೇರಿ ಹಾರಿಹೋದನು.

ವಿಘ್ನೇಶ್ವರನು ಸುಮ್ಮನಿರದೆ ನೆಟ್ಟಗೆ ಹೋಗಿ ಮೇರು ಪರ್ವತವನ್ನೇರಿ, ಅದರ ಶಿಖರಾಗ್ರದ ಮೇಲೆ ಕುಳಿತುಬಿಟ್ಟನು. ಮೇರುಪರ್ವತದ ಸುತ್ತಲೂ ಸೂರ್ಯನು ತಿರುಗುತ್ತಿರುವುದರಿಂದ ಅಲ್ಲಿ ಸೂರ್ಯನ ಅಸ್ತಮಾನವೇ ಇಲ್ಲ.

ಕುಮಾರಸ್ವಾಮಿ ಕಷ್ಟಪಟ್ಟು ಸೂರ್ಯನ ಸುತ್ತಲೂ ಪ್ರದಕ್ಷಿಣೆ ಮಾಡಿ ಬಂದನು. ಅಣ್ಣ ವಿಘ್ನೇಶ್ವರನು ಮೇರುಪರ್ವತದ ಮೇಲೆ ಕುಳಿತಿರುವುದನ್ನು ತಿಳಿದು ಅವನ ಮುಖವು ಬಾಡಿ ಹೋಯಿತು.

"ಕುಮಾರಾ ! ಸೂರ್ಯನನ್ನು ಸುತ್ತಿ ವಿಜಯ ಶಾಲಿಯಾಗಿ ಬಂದ ನೀನು ಹೀಗೇಕೆ ಮುಖಬಾಡಿಸಿ ಕೊಂಡಿರುವಿ ?" ಎಂದು ಪಾರ್ವತಿ ಆಶ್ಚರ್ಯದಿಂದ ಕೇಳಿದಳು.

"ಅಮ್ಮಾ, ನಾನು ಅಷ್ಟುಕಷ್ಟಪಟ್ಟು ಸೂರ್ಯನ ಸುತ್ತಲೂ ತಿರುಗಿದರೆ ಅಣ್ಣನು ಸೂರ್ಯನನ್ನೇ ತನ್ನ ಸುತ್ತಲೂ ತಿರುಗಿಸಿಕೊಂಡನು. ನಿಜ ಹೇಳುವುದಾದರೆ ಅಣ್ಣನು ಮಾಡಿದ್ದೇ ಘನಕಾರ್ಯ

ವಾಗಿದೆ! ನನ್ನದು ಘನಕಾರ್ಯವೇ ಅಲ್ಲ!" ಎಂದನು ಕುಮಾರಸ್ವಾಮಿ.

ಗಣಪತಿಯ ಮದುವೆ ಮಾತು ಅಲ್ಲಿಗೆ ನಿಲ್ಲಲಿಲ್ಲ. ಕೆಲವು ದಿನಗಳ ಮೇಲೆ ಪಾರ್ವತಿ ಮತ್ತೆ ಅವನ ಮದುವೆಯ ಪ್ರಸ್ತಾವನೆ ಮಾಡಿದಳು.

"ಅಮ್ಮಾ, ನಾನು ಮದುವೆಯಾಗಲೇ ಬೇಕೆಂದಿದ್ದರೆ, ಸೌಂದರ್ಯದಲ್ಲಿ ನಿನಗೆ ಸರಿಸಮಳಾಗಿರುವವಳು ಕಣ್ಣಿಗೆ ಬೀಳಬೇಕು. ಆಗ ಮದುವೆಯಾಗುತ್ತೇನೆ" ಎಂದನು ವಿಘ್ನೇಶ್ವರ.

ಪಾರ್ವತಿ ಹುಬ್ಬು ಗಂಟಿಕ್ಕಿ ಕೋಪದಿಂದ, "ಹಾಗಾದರೆ ಮನೆಯ ಮುಖಮಂಟಪದಲ್ಲಿ ಕುಳಿತುಕೊಂಡು ಬರುವವರ, ಹೋಗುವವರ ಮುಖನೋಡುತ್ತಾ ಇರು." ಎಂದು ಹೇಳಿ ಎದ್ದು ಒಳಗೆ ಹೊರಟು ಹೋದಳು.

"ಹಾಗೇ ಮಾಡುತ್ತೇನಮ್ಮಾ! ನಿನ್ನ ಅಜ್ಞೆ!" ಎಂದು ವಿನಾಯಕನು ಬೀದಿಯ ಬದಿಯಲ್ಲಿ ಕುಳಿತುಕೊಂಡು, ಸ್ವಲ್ಪ ಹೊತ್ತು ಉತ್ತರದಿಕ್ಕಿಗೂ, ಹಾಗೆಯೇ ಎಂಟು ದಿಕ್ಕುಗಳಿಗೂ ಮುಖ ತಿರುಗಿಸಿ ನೋಡಲು ತೊಡಗಿದನು.

ಹೊರಗೆ ಬಂದ ಪಾರ್ವತಿ ಮಗನ ವಿಚಿತ್ರ ಚೇಷ್ಟೆಯನ್ನು ನೋಡಿ, ಆಶ್ಚರ್ಯಪಡುತ್ತ, "ಏನಪ್ಪಾ, ಕಂದಾ, ವಿಘ್ನರಾಜಾ! ಎಲ್ಲಾ ದೇವತೆಗಳೂ ಪೂರ್ವಮುಖಿಯಾಗಿದ್ದು ಪೂಜೆಗಳನ್ನು ಮಾಡಿಸಿಕೊಳ್ಳಬೇಕೆಂದು ನಿಯಮವಿದೆಯೇ ಹೊರತು ನೀನು ಯಾವದಿಕ್ಕಿಗೆ ಮುಖ ಮಾಡಿ ಕುಳಿತರೂ ಅರಾಧನೀಯನೇ ಹೌದು." ಎಂದು ವರವನ್ನು ಕೊಟ್ಟಳು. ಮಗನ ಮುದ್ದು ಚೇಷ್ಟೆಗಳನ್ನು ನೋಡಿ ತಾನು ಆನಂದಿಸಿದ್ದು ಸಾಲದೆ ಶಿವನೊಡನೆಯೂ ಹೇಳಿಹೇಳಿ ಆನಂದಿಸಿದಳು. ಅವಳೊಂದಿಗೆ ಶಿವನೂ ಆನಂದಿಸಿದನು.

ಕಡೆಗೆ ಪಾರ್ವತಿ ಹಟಹಿಡಿದು ಅವನ ಮದುವೆಯ ಪ್ರಸ್ತಾವನೆ ತಂದಳು. ಆಗ ವಿಘ್ನೇಶ್ವರನು, "ಅಮ್ಮಾ, ತಮ್ಮನು ದೇವಸೇನಾಧಿಪತಿ ಪದವಿಯಲ್ಲಿದ್ದಾನೆ. ಅವನು ಇಬ್ಬರನ್ನು ಮದುವೆಯಾದರೂ





ತಪ್ಪೇನಿಲ್ಲ. ನಾನು ಸುಮ್ಮನೆ ಕುಳಿತು ತಿನ್ನುವವನು. ನನ್ನನ್ನು ಹೇಗೆ ಮದುವೆ ಮಾಡಿಕೊಳ್ಳಲು ಹೇಳುವಿ?" ಎಂದನು ವಿಘ್ನರಾಜ.

ಅವನು ಹೇಳುತ್ತಿರುವಾಗಲೇ ಅಲ್ಲಿಗೆ ಬಂದ ಶಿವನು, "ಗಣೇಶಾ, ನಿನಗೂ ಒಂದು ಪದವಿ ಕೊಡುತ್ತೇನೆ. ನೀನು ನಮ್ಮ ಪ್ರಮಥಗಣಗಳಿಗೆಲ್ಲಾ ನಾಯಕನಾಗಿರು" ಎಂದನು.

"ಅಪ್ಪಾ ! ನೀವು ಹಾಗೆ ಪದವಿ ಕೊಟ್ಟು ಬಿಟ್ಟರೆ ಆಯಿತೆ ? ಅದಕ್ಕೊಂದು ಅರ್ಹತೆ ನನಗಿರಬೇಡವೆ ? ತಮ್ಮನಂತೂ ಹೇಗೂ ಸೇನಾಧಿಪತ್ಯದಲ್ಲಿ ಒಳ್ಳೆಯ ತೇರ್ಗಡೆ ಹೊಂದಿದವನು. ಅಂಥವನ ಮುಂದೆ ನಾನೆಲ್ಲಿ ? " ಎಂದನು ವಿಘ್ನೇಶ್ವರ.

ಅದನ್ನು ಕೇಳಿದ ಪ್ರಮಥರು ಕುಮಾರಸ್ವಾಮಿಯನ್ನೇ ನಾಯಕನೆಂದು ಅಭಿಮಾನಿಸಿ "ದೇವಸೇನಾಧಿಪತಿಗೆ ಜಯಜಯಾ" ಎಂದು ಜಯಕಾರ ಮಾಡಿದರು. ಆಗ ಶಿವನು, "ಹಾಗೆ ಕೂಡದು. ನನ್ನ ಗಣಗಳಿಗೆ ಗಣನಾಥನಾಗಿ ವಿಘ್ನೇಶ್ವರನೇ ಇರಬೇಕು. ಕುಮಾರಸ್ವಾಮಿಗೆ ದೇವಸೇನಾಧಿಪತ್ಯವಷ್ಟೇ ಆಯಿತು. ಎರಡು ಪದವಿಗಳನ್ನೂ ಒಬ್ಬನೇ ನೋಡಿಕೊಳ್ಳುವುದು ಕಷ್ಟ. ಸರಿಯೂ ಅಲ್ಲ" ಎಂದನು.

ಆಗ ವಿಘ್ನೇಶ್ವರನು ವಿನಯದಿಂದ, "ಆದರೂ ಅಪ್ಪಾ, ಏನಾದರೊಂದು ಪರೀಕ್ಷೆ ಇಟ್ಟು, ಅದರಲ್ಲಿ ಗೆದ್ದವರಿಗೇ ಗಣನಾಯಕತ್ವ ಕೊಟ್ಟರೆ ಸಮಂಜಸವಾದೀತು, ಅಲ್ಲವೇ ? " ಎಂದನು.

ಶಿವನ ಇಚ್ಛೆಯಂತೆ ದೇವತೆಗಳೂ, ಪ್ರಮಥರೂ ಕೂಡಿ ಒಂದು ಪಂಥವನ್ನು ಒಡ್ಡಿದರು. ಈ ಭೂಮಿಯ ಮೇಲಿರುವ ಎಲ್ಲಾ ತೀರ್ಥಗಳನ್ನೂ, ಕ್ಷೇತ್ರಗಳನ್ನೂ ಯಾರು ಮೊದಲು ಸೇವಿಸಿ ಹಿಂದಿರುಗಿ ಬರುವರೋ, ಅವರೇ ಪಂಥ ಗೆಲ್ಲುವರೆಂದು ನಿರ್ಣಯವಾಯಿತು.

ಕುಮಾರಸ್ವಾಮಿ ತನ್ನ ನವಿಲಿನ ಮೇಲೆ ಹಾರಿ ಕುಳಿತು ಹೊರಟುಬಿಟ್ಟನು. ವಿನಾಯಕನು ಏನೂ ತೋರದೆ ತನ್ನ ಬೊಜ್ಜು ಹೊಟ್ಟೆಯನ್ನು ತಡವುತ್ತಾ ಸುಮ್ಮನೆ ಕುಳಿತುಬಿಟ್ಟನು.

ಆಗ ವಿಷ್ಣು ಅವನನ್ನು ಏಕಾಂತಕ್ಕೆ ಕರೆದುಕೊಂಡು ಹೋಗಿ, "ಅಪ್ಪಾ, ನಾವೆಲ್ಲಾ ನಿನ್ನನ್ನೇ ಅಭಿಮಾನಿಸುವವರು. ನಿನಗೆ ಸೋಲು ಬಂದರೆ ದೇವತೆಗಳಿಗೆಲ್ಲಾ ಸೋಲು ಬಂದ ಹಾಗೇ ಆಗುತ್ತದೆ. ನಮ್ಮೆಲ್ಲರ ಮುಖ ತಗ್ಗಿಸುವಂತೆ ಮಾಡುವುದು ನಿನಗೆ ಒಳ್ಳೆಯದಲ್ಲ. ಅದೂ ಅಲ್ಲದೆ ತಂದೆಯ ದೊಡ್ಡತನವನ್ನು ತನಯನು ನಿರೂಪಿಸಿದರೇನೇ ಸಾರ್ಥಕವಾಗುತ್ತದೆ. ಅದಕ್ಕಾಗಿ ನೀನೇನೂ ಕಷ್ಟಪಟ್ಟು ತಿರುಗಬೇಕಾಗಿಲ್ಲ. ನಾನು ಹೇಳಿದಂತೆ ಮಾಡಿದರೆ ಸಾಕು." ಎಂದು ವಿಘ್ನೇಶ್ವರನ ಕಿವಿಯಲ್ಲಿ ಏನನ್ನೋ ರಹಸ್ಯವಾಗಿ ಹೇಳಿದನು.

ಪಾರ್ವತಿ, "ಹಮ್ಮಯ್ಯ ! ಬದುಕಿದೆ !" ಎಂದು ವಿಷ್ಣುವನ್ನು ಕೃತಜ್ಞತೆಯಿಂದ ನೋಡಿದಳು.

ವಿಘ್ನೇಶ್ವರನು ಅಲ್ಲಿಂದ ಹೊರಟು ಪ್ರಶಸ್ತವಾದ ಜಾಗದಲ್ಲಿ ಚಟ್ಟ ಮುಟ್ಟ ಹಾಕಿ ಕುಳಿತು, ಕಣ್ಣುಗಳನ್ನು ಮುಚ್ಚಿ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಲು ತೊಡಗಿದನು.

ನವಿಲಿನ ಮೇಲೆ ಹೊರಟ ಕುಮಾರಸ್ವಾಮಿ ಹೋದ ತೀರ್ಥಕ್ಷೇತ್ರಗಳಿಗೆಲ್ಲಾ, ಅವನಿಗಿಂತ ಮೊದಲೇ ವಿಘ್ನೇಶ್ವರನು ಇಲಿಯ ಮೇಲೆ ಕುಳಿತು ಆ ತೀರ್ಥ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ ಹೊರಟು ಹೋಗಿರುವನೆಂದು ತಿಳಿದು ಆಶ್ಚರ್ಯಪಟ್ಟನು. ಕಡೆಗೆ ಅವನು ಹತಾಶನಾಗಿ ತಿರುಗಿ ಬಂದು, ವಿಘ್ನೇಶ್ವರನಿಗೆ ವಂದಿಸಿ ತಾನು ಸೋತುಹೋದೆನೆಂದೂ ವಿಘ್ನೇಶ್ವರನೇ ಗೆದ್ದನೆಂದೂ ಹೇಳಿದನು.

ವಿಘ್ನೇಶ್ವರನು ತಮ್ಮನ ಕೈಯನ್ನು ಹಿಡಿದು ಶಿವನ ಬಳಿಗೆ ಕರೆದುಕೊಂಡು ಹೋಗಿ, "ತಮ್ಮಾ, ನಾನು ಜಯಿಸಲೂ ಇಲ್ಲ, ನೀನು ಸೋಲಲೂ ಇಲ್ಲ. ನಾವಿಬ್ಬರೂ ನಿಮಿತ್ತಮಾತ್ರರು ಅಷ್ಟೆ! ಜಯಿಸಿದ್ದು ನಮ್ಮ ತಂದೆಯೇ! ಶಿವಪಂಚಾಕ್ಷರಿಯ ಮಹಿಮೆ ಅಂಥಾದ್ದು. ಗೆದ್ದುದು ಶಿವನಾಮವೇ! ಗೆಲ್ಲಿಸಿದವನು ಮಹಾವಿಷ್ಣು!" ಎಂದು ನಡೆದ ಸಮಾಚಾರವನ್ನು ಹೇಳಿ ಶಿವನಿಂದಲೇ ಹೌದೆನಿಸಿದನು.

ವಿಘ್ನೇಶ್ವರನೂ ಕುಮಾರಸ್ವಾಮಿಯೂ ಶಿವನ ಪಾದಗಳಿಗೆ ನಮಸ್ಕಾರ ಮಾಡಿದರು. ಕುಮಾರಸ್ವಾಮಿ ಎಲ್ಲರ ನಡುವಿನಲ್ಲಿ ನಿಂತುಕೊಂಡು, "ಇನ್ನು ತಡ ಮಾಡಬಾರದು. ವಿಘ್ನೇಶ್ವರನಿಗೆ ಪ್ರಮಥಗಣಾಧಿಪತ್ಯವನ್ನು ಬೇಗನೇ ನಡೆಯಿಸಬೇಕು. ಶಿವನ ಆಜ್ಞೆ ಎಲ್ಲರಿಗೂ ಶಿರೋಧಾರ್ಯವಾಗಿದೆ" ಎಂದು ಒತ್ತಿ ಹೇಳಿದನು. "ನಿಜ ನಿಜ" ಎಂದು ಎಲ್ಲರೂ ಕೊರಳೆತ್ತಿ ಹೇಳಿದರು.

ದೇವತೆಗಳೆಲ್ಲಾ ಒಕ್ಕೊರಲಿನಿಂದ ಸಂತೋಷಿಸಿದರು. ಸಿದ್ಧ, ಸಾಧ್ಯ, ಯಕ್ಷ, ಭೂತಗಣಾದಿಗಳೆಲ್ಲಾ ಹರ್ಷವನ್ನು ಪ್ರಕಟಿಸಿದರು. ಪ್ರಮಥಗಣಗಳ ಪ್ರಮುಖರಾದ ಭೃಂಗೀಶ್ವರ, ಶೃಂಗೀಶ್ವರ, ಚಂಡೀಶ್ವರ, ನಂದೀಶ್ವರರು ಮಾತ್ರ ವ್ಯತಿರೇಕವನ್ನು ವ್ಯಕ್ತಪಡಿಸಿದರು. ಈ ಮೊದಲು ವಿಘ್ನೇಶ್ವರನು ಪುತ್ರ





ಗಣಪತಿ ರೂಪದಲ್ಲಿ ಅವರಿಗೆ ಸ್ವಲ್ಪ ಶೃಂಗಭಂಗ ಮಾಡಿದ್ದನಷ್ಟೆ? ಅದು ಅವರ ಮನಸ್ಸಿನೊಳಗೆ ಇದ್ದಿರಬೇಕು. ಆ ಕೋಪವನ್ನು ಹೊರಪಡಿಸುತ್ತ ಅವರು, "ಕುಮಾರಸ್ವಾಮಿಗೆ ತನ್ನ ಬಲಗಳು ಎಂಬಂತೆ ದೇವಗಣಗಳ ಸೇನೆಗಳಿವೆ. ನಾವು ಶಿವನನ್ನು ನಂಬಿದ ಬಂಟರಾಗಿ ಶಿವಗಣಗಳೆಂದು ಮೊದಲಿನಿಂದಲೂ ಪರಿಗಣಿಸಲ್ಪಟ್ಟವರು. ಹಾಗಿರುವಾಗ ವಿಘ್ನೇಶ್ವರನು ನಮಗೆಲ್ಲ ಅಧಿಪತಿ ಹೇಗಾದಾನು? ಗಣಪತಿ ಅನ್ನಿಸಿಕೊಳ್ಳಲಿಕ್ಕಾದರೂ ಅವನಿಗೆ ತನ್ನದಾದ ಯಾವ ಬಳಗವೂ ಇಲ್ಲ. ಹಾಗಿರುವಾಗ ಗಣಾಧಿಪತ್ಯದ ಪಟ್ಟಾಭಿಷೇಕದಿಂದ ಏನು ಮಹತ್ವ ಬರುತ್ತದೆ? ನಾವು ಒಪ್ಪಲಾರೆವು." ಎಂದು ತಮ್ಮ ಮನದಲ್ಲಿದ್ದ ಹಳಿಯುದನ್ನೆಲ್ಲ ಹೊರಗೆ ಹಾಕಿದರು.

ಅದನ್ನು ಕೇಳಿ ಶಿವನ ಕಣ್ಣುಗಳು ಕೆಂಪಾದುವು. "ನನ್ನ ನಿರ್ಣಯವನ್ನೇ ಆಕ್ಷೇಪಿಸುವಷ್ಟು ದೊಡ್ಡವರಾದಿರಾ ನೀವು? ಅಷ್ಟು ಗರ್ವ ಹೇಗೆ ಬಂದಿತು?" ಎಂದು ಪ್ರಮಥ ನಾಯಕರನ್ನು ದುರುಗುಟ್ಟಿ ನೋಡಿದನು.

ಆಗ ವಿಘ್ನೇಶ್ವರನು ಶಾಂತನಾಗಿ "ಹೌದು. ನಿಜವೇ. ನನ್ನ ಗಣಗಳು ಎಲ್ಲಿವೇ? ಯಾರಿದ್ದಾರೆ? ಇಲ್ಲವೆಂಬುದೇ ನಿಜ. ಅಂದಹಾಗೆ ಪುತ್ರಗಣಪತಿಯಾಗಿ ನಾನಿದ್ದಾಗ ನನಗೂ ಸ್ವಲ್ಪ ಬಳಗವಿದ್ದಂತೆ ಅನುಮಾನ. ಆ ಗಣಗಳು ಎಲ್ಲಿವೆ? ಎತ್ತಹೋದರು?" ಎಂದು ಕಡೇ ಮಾತುಗಳನ್ನು ಗಟ್ಟಿಯಾಗಿ ಹೇಳಿದನು.

ಆಗ "ಇಲ್ಲಿದ್ದೇವೆ! ಬಂದೆವು ಬಂದೆವು!" ಎನ್ನುತ್ತ ಕೋಟಾನುಕೋಟಿ ವಿಘ್ನೇಶ್ವರನಂಥವರು ದಿಕ್ಕುಗಳು ಪ್ರಸವಿಸಿದಂತೆ ಎಂಟು ದಿಕ್ಕುಗಳಿಂದಲೂ ಹುಟ್ಟಿ ಬಂದು, ದಿಕ್ಕುಗಳೆಲ್ಲ ಗಡಚಿಕ್ಕುವಂತೆ ಜಯ ಜಯ ಧ್ವಾನ ಮಾಡುತ್ತ, ವಿಘ್ನೇಶ್ವರನ ಬಲಗಳಾಗಿ ಬಂದು ಅವನನ್ನು ಸುತ್ತುಮುತ್ತಿ ನಿಂತರು.

ಅವರು ಒಬ್ಬೊಬ್ಬರಿಗೂ ನಾಲ್ಕುನಾಲ್ಕು ಕೈಗಳಿದ್ದುವು. ನಾಲ್ಕು ಕೈಗಳಲ್ಲಿಯೂ ಆಯುಧಗಳಿದ್ದುವು. ಒಬ್ಬೊಬ್ಬರಲ್ಲಿ ಒಂದೊಂದು ಬಗೆಯ ಆಯುಧಗಳು! ಪರಿಕರಗಳು! ಚಿತ್ರ ವಿಚಿತ್ರವಾದ ವಸ್ತುಜಾಲಗಳು! ಕೆಲವರ ಕೈಗಳಲ್ಲಿ ಕಂಟ ಪತ್ರಗಳೂ, ಲೇಖನಿಗಳೂ, ಕುಂಚಗಳೂ, ಬಣ್ಣಗಳೂ, ಇದ್ದರೆ ಮತ್ತೆ ಕೆಲವರ ಕೈಗಳಲ್ಲಿ ಶೂಲಗಳೂ, ಬಿಲ್ಲಂಬುಗಳೂ, ಕತ್ತಿಗಳೂ, ಗದೆಗಳೂ ಇದ್ದುವು. ಇನ್ನು ಕೆಲವು ವಿಘ್ನೇಶ್ವರರು ಕೊಡಲಿ, ಸುತ್ತಿ, ಕತ್ತಿ, ಉಳಿ, ಗರಗಸ, ಕೀಸುಳಿ, ಇಕ್ಕುಳ ಮೊದಲಾದ ಪರಿಕರಗಳೊಂದಿಗಿದ್ದರು. ಮತ್ತೆ ಕೆಲವರ ಕೈಯಲ್ಲಿ ವೀಣೆಗಳು ಮೃದಂಗಗಳು, ಕೊಳಲು, ಡೋಲು, ತಮಟೆ ಮೊದಲಾದುವಿದ್ದುವು. ಅವರಲ್ಲಿ ಕೆಲವರು ಸಂಗೀತ ಹಾಡುತ್ತಿದ್ದರು. ಮೂಲಿಕೆಗಳು,

ಔಷಧಗಳು, ಪಾನೀಯಗಳು, ನೇಗಿಲುಗಳು, ರಾಟೆಗಳು, ನವರತ್ನಗಳು, ಆಭರಣಗಳು, ಹೂಮಾಲೆಗಳು, ಹಣ್ಣು ಹಂಪಲ ಮೊದಲಾದ ಅನೇಕ ಬಗೆಯ ಭಕ್ಷ್ಯಗಳು ಅನೇಕರ ಕೈಗಳಲ್ಲಿದ್ದುವು.

ಅವರ ನಡುವೆ ದೇವತೆಗಳೂ, ಪ್ರಮಥಗಣಗಳೂ ಅಕ್ಕಿಯ ರಾಶಿಯಲ್ಲಿ ಕಾಣುವ ಕಲ್ಲು ಹರಳುಗಳಂತೆ ಅಲ್ಲಲ್ಲಿ ಕಾಣುತ್ತಿದ್ದರು.

ಕೆಲಮಂದಿ ವಿಘ್ನೇಶ್ವರ ರೂಪರು ಆಕಾಶದಲ್ಲಿ ಹಾರುತ್ತ, ಅಂತರಿಕ್ಷ ದೊಳಗೆ ತೂರಿ ಹೋಗುತ್ತಿದ್ದರು. ಆ ಗಣಾಧಿಪ ಗಣಗಳ ಕೈಯಲ್ಲಿ ಛತ್ರಚಾಮರಗಳೂ, ಬಗೆಬಗೆಯ ಬೀಸಣಿಗೆಗಳೂ ಆಡಿಕೊಂಡಿದ್ದುವು. ಆಕಾಶದಲ್ಲಿ ರಪರಪನೆ ನಲಿಯುವ ಅರುಣಪತಾಕೆಗಳನ್ನೂ, ಇನ್ನೂ ಬಣ್ಣಬಣ್ಣದ ಧ್ವಜಗಳನ್ನೂ ಅನೇಕ ವಿಘ್ನೇಶ್ವರರೂಪರು ಹಿಡಿದಿದ್ದರು. ಅವರ ನಡುವಿನಿಂದ ಕೆಲವರು ರತ್ನಖಚಿತವಾದ ಭದ್ರ ಸಿಂಹಾಸನವನ್ನು ಎತ್ತಿ ತಂದಿಟ್ಟು ವಿಘ್ನೇಶ್ವರನನ್ನು ಅದರ ಮೇಲೆ ಕೂಡಿಸಿ ಛತ್ರಚಾಮರಗಳನ್ನು ಹಿಡಿದರು. ಶ್ವೇತಚ್ಛತ್ರವು ಮುತ್ತುಗಳ ಜಾಲರಿಗಳಿಂದ ವಿರಾಜಿಸಿತು. ಪುಟ್ಟಮೂಷಿಕವು ಸಿಂಹಾಸನದ ಮುಂದೆ ನೃತ್ಯವಾಡ ತೊಡಗಿತು. ಭೃಂಗೀಶ್ವರ, ಶೃಂಗೀಶ್ವರ, ಚಂಡೀಶ್ವರ, ನಂದೀಶ್ವರರು ಮೂಕ ವಿಸ್ಮಿತರಾಗಿ ಏನೂ ಹೇಳಲು ತೋರದೆ ಶರಣಾಗತ ಭಾವದಲ್ಲಿ ಕೈಜೋಡಿಸಿದರು.

ಪಾರ್ವತಿ ಮತ್ತೊಂದು ಸಾರಿ ಮೈಮರೆತು ಭದ್ರಸಿಂಹಾಸನಾಸೀನನಾದ ವಿಘ್ನೇಶ್ವರನಿಗೆ ನಮಸ್ಕರಿಸಲು ನೋಡಿದಳು. "ಬೇಡಮ್ಮಾ ಬೇಡ! ನಾನು ನಿನ್ನ ಮುದ್ದು ಕುಮಾರನಲ್ಲವೇನು?" ಎಂದು ವಿಘ್ನೇಶ್ವರನು ಅವಳನ್ನು ತಡೆದು ಕೈಯಾಡಿಸಿದನು. ಎಲ್ಲಾ ವಿಘ್ನೇಶ್ವರರೂಪರೂ ಅದೃಶ್ಯರಾಗಿ. ಒಬ್ಬ ವಿಘ್ನೇಶ್ವರನು ಮಾತ್ರ ತಾಯಿಯ ಪಾದಗಳಿಗೆ ನಮಸ್ಕಾರ ಮಾಡಿದನು.

"ವಿಘ್ನೇಶ್ವರಾ!" ಎಂಬೊಂದು ಕರೆ ಶಂಖಧ್ವನಿಯ ಹಾಗೆ ಕೇಳಿಸಿತು, ಹಾಗೆ ಕರೆದವನು ವಿಷ್ಣು. ವಿಘ್ನೇಶ್ವರನು ಅತ್ತ ನೋಡದೆಯೇ, "ನೀನು ಏನು ಹೇಳುವಿಯೆಂದು ನನಗೆ ಗೊತ್ತಿದೆ" ಎಂದನು.

"ನಿನಗೆ ಗೊತ್ತಿದ್ದರೂ ಅದು ಎಲ್ಲರಿಗೂ ಗೊತ್ತಾಲಿಕ್ಕೇ ಹೇಳುತ್ತೇನೆ." ಎಂದು ವಿಷ್ಣು "ಈ ವಿಘ್ನೇಶ್ವರನ ಮದುವೆಗೆ ಸಾವಿರ ವಿಘ್ನಗಳೆಂದು ಸಾಮತಿಯಾಗಿ, ವಿಘ್ನೇಶ್ವರನು ಸ್ವತಃ ಕಲ್ಪಿಸಿಕೊಂಡ ವಿಘ್ನಗಳು ಈಗಾಗಲೇ ಸಾವಿರ ತುಂಬಿದುವು. ಇನ್ನು ಮೇಲೆ ವಿಘ್ನವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಕಲ್ಪಿಸಿದರೂ ಅದು ನಡೆಯದು! ತಿಳಿದಿರಲಿ!" ಎಂದು ಗಟ್ಟಿಯಾಗಿ ನುಡಿದನು.






ತನ್ನ ಮುದ್ದಿನ ಮಗ ವಿಘ್ನೇಶ್ವರನ ಗಣಾಧಿಪತ್ಯದ ಪಟ್ಟಾಭಿಷೇಕ ಮಹೋತ್ಸವಕ್ಕೆ, ಗಣೇಶನನ್ನು ಸಿಂಗರಿಸಲು ಪಾರ್ವತಿ ಜಗಜಗಿಸುವ ಬಣ್ಣದ ವಸ್ತ್ರಗಳನ್ನು ಆರಿಸಿಕೊಂಡಳು. ಆದರೆ ವಿಘ್ನೇಶ್ವರನು ಅವುಗಳನ್ನೆಲ್ಲ ಬಿಟ್ಟು ಬೆಳ್ಳಗಿನ ವಸ್ತ್ರಗಳನ್ನು ಧರಿಸಿಕೊಂಡನು.

"ಇದೇನಪ್ಪಾ, ಒಳ್ಳೊಳ್ಳೆಯ ವಸ್ತ್ರಭೂಷಣಗಳಿಂದ ಮೆರೆಯಬೇಕಾದ ನೀನು, ಹೀಗೆ ಶುಕ್ಲಾಂಬರಧರನೆನಿಸಿಕೊಳ್ಳುವುದೇನು ಚಂದವೋ ?" ಎಂದು ಕೇಳಿದಳು ಪಾರ್ವತಿ.

"ಒಳ್ಳೇ ಬಟ್ಟೆಗಳನ್ನು ಧರಿಸಬೇಕೆಂದು ತಾನೇ ಹೇಳುವಿ ? ನಾನು ಉಟ್ಟದ್ದು ಅಂಥವುಗಳೇ. ಬಿಳೀ ಬಣ್ಣವು ಒಳ್ಳೆಯತನವನ್ನೂ, ವಿವೇಕವನ್ನೂ ತಿಳಿಸುತ್ತದೆ ಅಮ್ಮಾ !" ಎಂದನು ವಿಘ್ನೇಶ್ವರ.

ವಿಘ್ನೇಶ್ವರನ ಗಣಾಧಿಪತ್ಯ ಪಟ್ಟಾಭಿಷೇಕವು ಮಹಾವೈಭವದಿಂದ ನಡೆಯಿತು. ವಿಘ್ನೇಶ್ವರನು ಸರ್ವ ಗಣಗಳಿಗೂ ನಾಥನಾದನು. ಆಗ ಜಯಲಕ್ಷ್ಮಿ ಎಂಬ ನಾಮಾಂಕಿತಳಾದ ಸಿದ್ಧಿಯೂ, ವಿದ್ಯಾವತಿ ಎಂಬ ಹೆಸರಿನವಳಾದ ಬುದ್ಧಿಯೂ ವಿಘ್ನೇಶ್ವರನನ್ನು ವರಿಸಿ ಅವನ ಇಕ್ಕೆಲಗಳನ್ನು ಅಲಂಕರಿಸಿದರು. ಆದರಿಂದ ವಿಘ್ನೇಶ್ವರನಿಗೆ ಸಿದ್ಧಿಬುದ್ಧಿವಿನಾಯಕನೆಂದು ಹೆಸರಾಯಿತು. ಆದೇ ಸಮಯದಲ್ಲಿ ಎಂಟು ದಿಕ್ಕುಗಳಿಂದ ಅಷ್ಟಸಿದ್ಧಿಯರು ಎಂಟುಮಂದಿ ಸುಂದರ ಕನ್ಯೆಯರಾಗಿ ಬಂದು ಬಕುಲಮಾಲಿಕೆಯನ್ನು ಹಾಕಿ ವಿನಾಯಕನನ್ನು ವರಿಸಿದರು. ಆದರಿಂದ ವಿಘ್ನೇಶ್ವರನು ಸಿದ್ಧಿವಿನಾಯಕನಾದನು. ಹೀಗೆ ವಿಘ್ನೇಶ್ವರನ ಕಲ್ಯಾಣ ಮಹೋತ್ಸವವು ಅತಿ ವೈಭವದಿಂದ ನಡೆಯಿತು.

ಎಲ್ಲಾ ಆದ ಮೇಲೆ ವಿಷ್ಣು ವಿಘ್ನೇಶ್ವರನನ್ನು ನೋಡಿ, "ಕೋಟಿ ವಿಘ್ನಗಳು ಬಂದರೂ ವಿನಾಯಕನ ಮದುವೆ ನಿಲ್ಲದು ಎಂಬ ಹೊಸದೊಂದು ಸಾಮತಿ ಪ್ರಪಂಚಕ್ಕೆ ಸಿಕ್ಕಿತು. ಅಪ್ಪಾ ಕಲ್ಯಾಣ ಗಣೇಶಾ, ಇನ್ನು ಮೇಲೆ ಎಲ್ಲಾ ಕಲ್ಯಾಣಗಳೂ ನಿನ್ನಕೈಯಿಂದಲೇ ನಡೆಯಬೇಕು. ಹಾಗೆ ನಡೆದ ಕಲ್ಯಾಣ ಫಲವಾಗಿ



ಅವತರಿಸಿದ ಜನ್ಮವೇ ಸಾರ್ಥಕ ಜನ್ಮ!" ಎಂದು ವಿಘ್ನೇಶ್ವರನ ಸೊಂಡಿಲನ್ನು ತಡವಿ ಬೆನ್ನು ತಟ್ಟಿದನು.

ವಿಘ್ನೇಶ್ವರನು ಮುಗುಳು ನಗುತ್ತ "ಹಾಗೆಯೇ ಆಗುತ್ತದಯ್ಯಾ. ನೀನು ಕೌಸಲ್ಯೆಗೆ ರಾಮನಾಗಿ ಅವತರಿಸಿ ರಾವಣನ ದಶೆಯನ್ನು ಅಂತ್ಯಗೊಳಿಸುವಿಯಂತೆ" ಎಂದನು.

ಪುನಃ ವಿಷ್ಣು "ಎಲೋ ಗಜಾನನಾ, ನಿನ್ನ ಪ್ರಸನ್ನ ವದನವನ್ನು ನೋಡುವಾಗ, ಆನೆಯ ಮೇಲೆ ನನಗೆ ತುಂಬಾ ಪ್ರೀತಿ ಉಕ್ಕುತ್ತದೆ" ಎಂದನು.

"ಉಕ್ಕಲಿ ಬಿಡೂ! ಮೊಸಳೆಯ ಬಾಯಿಯಿಂದ ಗಜೇಂದ್ರನನ್ನು ರಕ್ಷಿಸಿ ಕರಿವರದನೆಂಬ ಹೆಸರು ಹೊತ್ತುಕೋ" ಎಂದನು ವಿಘ್ನೇಶ್ವರ.

ಎಂಟು ಮಂದಿ ಸಿದ್ಧಿ ಕನ್ಯೆಯರು ಹಿತವಾಗಿ ಚಾಮರ ಬೀಸುತ್ತಿರಲು ಸಿಂಹಾಸನದ ಮೇಲೆ ಸಿದ್ಧಿ ಬುದ್ಧಿಯರೊಂದಿಗೆ ನಕ್ಷತ್ರಗಳ ನಡುವಿನ ಚಂದ್ರನಂತೆ ವಿಘ್ನೇಶ್ವರನು ಪ್ರಕಾಶಿಸಿಕೊಂಡಿದ್ದ ಆ ಸಮಯದಲ್ಲಿ ಲಕ್ಷ್ಮಿ ಮುಖ ತಿರುಗಿಸಿಕೊಂಡು ಹೊರಟು ಹೋಗಲು ನೋಡಿದಳು. ವಿಷ್ಣು ಅವಳನ್ನು ತಡೆದು ವಿಘ್ನೇಶ್ವರನೊಂದಿಗೆ. "ವಿಘ್ನೇಶ್ವರಾ, ಲಕ್ಷ್ಮಿ ಸ್ಥಿರವಾಗಿರುವವಳಲ್ಲವೆಂದು ಲೋಕದವರಿಗೆಲ್ಲಾ ಗೊತ್ತಾಗಿದೆ. ಅವಳನ್ನು ಸ್ವಲ್ಪ ನಿನ್ನ ಮಡಿಲಲ್ಲಿ ಕೂಡಿಸಿಕೊಂಡು ಬಿಡು. ಆದರಿಂದ ಲಕ್ಷ್ಮಿಗೆ ಸ್ಥಿರತ್ವವು ಬಂದೀತೆಂದು ಕಾಣುತ್ತದೆ" ಎಂದನು.

ವಿಘ್ನೇಶ್ವರನು ಆತ್ಮಾನಂದದಿಂದ, "ಆಹಾ! ಮಹಾ ತಾಯಿ ಲಕ್ಷ್ಮಿಯನ್ನು ಮಡಿಲಲ್ಲಿ ಕೂಡಿಸಿಕೊಳ್ಳುವ ನನ್ನದು ಎಂಥ ದೊಡ್ಡ ಅದೃಷ್ಟ!" ಎಂದು ಲಕ್ಷ್ಮಿಯ ಪಾದಗಳನ್ನು ಸೊಂಡಿಲಿನಿಂದ ಸುತ್ತಿ ಎತ್ತಿ ತನ್ನ ಬಲ ತೊಡೆಯ ಮೇಲೆ ಇರಿಸಿದನು.

ಆಗ ವಿಷ್ಣು, "ಈಗ ವಿಘ್ನೇಶ್ವರನು ಲಕ್ಷ್ಮೀ ಗಣಪತಿಯಾದ. ತಾಯಿ ಮಗನನ್ನು ಯಾವ ವಿಧವಾಗಿ ನೋಡಿಕೊಳ್ಳುತ್ತಾಳೋ, ಅದೇ ವಿಧವಾಗಿ ವಿಘ್ನೇಶ್ವರನ ಅನುಗ್ರಹವಿದ್ದವರ ಬಳಿಯಲ್ಲಿ ಲಕ್ಷ್ಮಿ ಸ್ಥಿರವಾಗಿರುತ್ತಾಳೆ" ಎಂದು ಹೇಳಿದನು.

ಇದನ್ನೆಲ್ಲಾ ನೋಡಿಕೊಂಡೇ ಇದ್ದ ನಾರದನು ಮುಂದೆ ಬಂದು, "ಓಹೋಹೋ! ವಿಘ್ನೇಶ್ವರನಿಗೆ ಎಷ್ಟು ಹೆಸರುಗಳು! ಸಿದ್ಧಿ ವಿನಾಯಕ, ಲಕ್ಷ್ಮೀ ಗಣಪತಿ, ಶುಕ್ಲಾಂಬರಧರ, ಮೂಷಿಕವಾಹನ, ಇನ್ನೂ ಎಷ್ಟೆಷ್ಟೋ!" ಎಂದು ಹೇಳುತ್ತ, ಮಹತೀ ವೀಣೆಯನ್ನು ಝೇಂಕರಿಸಿ, ವಿಘ್ನೇಶ್ವರನ ಶತಕೋಟಿ ಸಹಸ್ರನಾಮಗಳನ್ನು ಹಾಡ ತೊಡಗಿ, "ಜಯ ಜಯ ಜಯ ಗಣನಾಯಕ ಜಯಹೇ" ಎಂದು ಗಾನ ಮಾಡುತ್ತ ಲೋಕಗಳಲ್ಲಿ ತಿರುಗಾಡ ತೊಡಗಿದನು.

ಒಂದುದಿನ ವಿಘ್ನೇಶ್ವರನು ಇಲಿಯ ವಾಹನದ ಮೇಲೇರಿಕೊಂಡು ಆಕಾಶಮಾರ್ಗದಲ್ಲಿ ತಿರುಗುತ್ತಾ, ವಿಂಧ್ಯಪರ್ವತ ಶ್ರೇಣಿಯನ್ನು ದಾಟಿ, ಇನ್ನೂ ದಕ್ಷಿಣಕ್ಕೆ ಹೋಗಿ ದೊಡ್ಡದೊಂದು ಕರ್ರಗಿನ ಬೆಟ್ಟವನ್ನು ನೋಡಿ ಅಲ್ಲಿ ಕೆಳಗಿಳಿದನು. ಆ ಪ್ರದೇಶ

ವೆಲ್ಲಾ ಬಾಳೇ ವನಗಳೇ ವನಗಳು. ದೊಡ್ಡದೊಡ್ಡ ಬಾಳೇ ಮರಗಳಿಂದ ಬಾಳೆಯಕಾಡಿನಂತೆ ಕಾಣುತ್ತಿದ್ದಿತು. ಬೆಟ್ಟದ ಕೆಳಭಾಗದಲ್ಲಿ ಶಬರರು ಢಕ್ಕೆ ಡೋಲು ಡಮರಗಳನ್ನು ಕೋಲಾಹಲವಾಗಿ ಬಾರಿಸುತ್ತ, ಬಹಳ ಸಂಭ್ರಮದಿಂದ ಏನೋ ಉತ್ಸವ ನಡೆಸುತ್ತಿದ್ದರು.

ವಿಘ್ನೇಶ್ವರನು ಸ್ವಲ್ಪನಿಂತು ಆ ಉತ್ಸವದ ಚಂದವನ್ನು ನೋಡುತ್ತ ತನ್ನ ನಿಜರೂಪವನ್ನು ಉಪಸಂಹರಿಸಿಕೊಂಡು, ಸುಂದರಬಾಲಕನ ರೂಪದಿಂದ ಉತ್ಸವದಲ್ಲಿ ಮಗ್ನರಾದ ಜನರ ಸಮೀಪಕ್ಕೆ ಹೋದನು.

ಶಬರರು ಆ ಹೊಸ ಬಾಲಕನ ಸುತ್ತಲೂ ಕುತೂಹಲದಿಂದ ಕೂಡಿ, "ನಂ ದೇವ್ರು, ತನಗಾಗಿ ಒಳ್ಳೇ ಚಂದದ ಹುಡುಗನ್ನ ಕಳಿಸಿದ್ದಾರ್ರೋಯ್" ಎಂದು ಹೇಳಿಕೊಂಡು, ಅವನನ್ನು ಎತ್ತಿಕೊಂಡು ಹೋಗಿ ಉತ್ಸವದ ಮಧ್ಯದಲ್ಲೇ ಇಳಿಸಿದರು.

ಅಲ್ಲಿ ರಕ್ತದ ಕಲೆಗಳಿಂದ ಕೂಡಿದ ದೊಡ್ಡದೊಂದು ಕರಿಗಲ್ಲು ಕಾಣುತ್ತಿತ್ತು. ಅದರ ಇದಿರಿನಲ್ಲಿ ಚಿಕ್ಕ ಹುಡುಗನೊಬ್ಬ ಮೂಕತನದಲ್ಲಿ ಅಳುತ್ತಿದ್ದನು. ಅವನ ಶರೀರಕ್ಕೆಲ್ಲಾ ಅರಸಿನ ಬಳಿದಿತ್ತು. ಸೊಂಟಕ್ಕೆ ಕಪ್ಪು ವಸ್ತ್ರವನ್ನು ಸುತ್ತಿದ್ದರು. ಕೊರಳಿಗೆ ಕೆಂಪು ಮಂದಾರ ಹೂವಿನ ಮಾಲೆ ಹಾಕಲಾಗಿತ್ತು. ಹಣೆಗೆ ಕುಂಕುಮದ ಮುದ್ದೆ.

ಬಾಲರೂಪದ ವಿಘ್ನೇಶ್ವರನು ಶಬರನಾಯಕನನ್ನು ನೋಡಿ, "ನಿಮ್ಮ ದೇವರ ಹತ್ತಿರ ನನಗೆ ಮಾತಾಡಬೇಕು. ನನ್ನನ್ನು ಅವನ ಬಳಿಗೆ ಕರೆದುಕೊಂಡು ಹೋಗಿ" ಎಂದನು.

ಆ ಮಾತನ್ನು ಕೇಳಿ ಶಬರ ನಾಯಕನು ಬೆಳ್ಳಗಿನ ಹಲ್ಲುಗಳನ್ನು ತೋರಿಸಿ ನಗುತ್ತ, "ಭಲೆಭಲೆ ಭಲೆ ಹುಡುಗಾ! ನಮ್ಮ ದೇವ್ರು, ಹಾತ್ರಾನೇ ಮಾತಾಡಿ ಬಿಡ್ತೀಯೂ? ನಮ್ಮ ದೇವ್ರು ಕಾರು



ಕತ್ತಲಿನ ಹಾಗೆ ಮಹಾ ಭೀಕರರಾಗಿರುತ್ತಾರೇ! ಯಾರೂ ನೋಡಲಾರ್ರೂ! ನೋಡಿ ಗೀಡಿ ಬಿಟ್ಟರೆ ರಕ್ತ ಕಕ್ಕಿ ಹಾಗೇ ಬಿದ್ದು ಸಾಯ್ತಾರೇ!" ಎಂದು ಹೆದರಿಸಿದನು.

ವಿಘ್ನೇಶ್ವರನು ಪ್ರತಿಯಾಗಿ ನಗುತ್ತ, ಗುಡುಗುಡು ಓಡುತ್ತಾ ಹೋಗಿ ಕರಿಯ ಶಿಲೆಯನ್ನು ಸಮೀಪಿಸಿ, ಶಬರ ನಾಯಕನನ್ನು ನೋಡಿ, "ನೀವೆಲ್ಲಾ ನಿಮ್ಮ ಭಯವನ್ನೇ ಈ ದೇವರಿಗೆ ಅಂಟಿಸಿ, ಇವನು ಭಯಂಕರವಾಗಿರುವನೆಂದು ಅಂದುಕೊಂಡಿದ್ದೀರಿ. ಭಯವನ್ನೇ ಭಕ್ತಿ ಅಂದುಕೊಂಡಿದ್ದೀರಿ. ನಿಮ್ಮೊಳಗಿರುವ ಕ್ರೂರ ಸ್ವಭಾವವೇ ಬಲಿಗೊಡುವ ಕರ್ಮವಾಗಿ ರೂಪುಗೊಂಡಿತು. ಇದೆಲ್ಲಾ ದೊಡ್ಡ ತಪ್ಪು. ನೀವು ಯಾರೂ ನಿಮ್ಮ ಸ್ವಾಮಿಯನ್ನು ಈ ವರೆಗೂ ನೋಡಿಯೇ ಇಲ್ಲ. ನಿಮ್ಮ ಸ್ವಾಮಿ ಎಂದಿಗೂ ಇಂತಹ ಬಲಿಯನ್ನೂ ಉತ್ಸವವನ್ನೂ ಕೇಳಲಿಲ್ಲ. ನಿಮ್ಮ ಸ್ವಾಮಿ ತುಂಬಾ



ಅಂದಚೆಂದನಾದ ದೇವರು ಹೀಗೆ ಪ್ರಕಾಶಮಾನವಾಗಿರುತ್ತಾನೆ!" ಎಂದು ಹೇಳಿ ಅಂಗೈಯಿಂದ ಕರಿ ಶಿಲೆಯನ್ನು ತಟ್ಟಿದನು.

ಕರ್ರಗಿನ ಆ ಬಂಡೆಗಲ್ಲು ಬೆಳ್ಳಗಿನ ಬಾಳೇ ಹಾಳೆಗಳಿಂದ ಮಾಡಿದಂಥ ಸ್ವಾಮಿಯ ವಿಗ್ರಹವಾಗಿ ಮಾರ್ಪಟ್ಟಿತು. ಕಾಲ ಗಂಟುಗಳ ಮೇಲೆ ಎರಡು ಕೈಗಳನ್ನು ಚಾಚಿ ಕುಳಿತುಕೊಂಡ ಭಂಗಿಯಲ್ಲಿರುವ ಆ ಸ್ವಾಮಿಯ ವಿಗ್ರಹವು ನಗುಮೊಗದಿಂದ ಮನೋಹರವಾಗಿದ್ದಿತು. ಅನಂತರ ವಿಘ್ನೇಶ್ವರನು ಮೂಕಬಾಲಕನ ತಲೆಯನ್ನು ನೀವಿದನು.

ಕೂಡಲೇ ಆ ಹುಡುಗನು ಕೊರಳೆತ್ತಿ ಅಸ್ಖಲಿತವಾದ ವಾಣಿಯಿಂದ, "ಓ ಸ್ವಾಮಿ! ನೀನೇ ಶರಣಂ! ನಿನಗೇ ಶರಣಂ!" ಎಂದು ಧ್ವನಿಸಿ ವಿಗ್ರಹದ ಮುಂದೆ ಮುಂಡುಗಾಲೂರಿ ನಮಸ್ಕರಿಸುತ್ತ ಸ್ವಾಮಿಯ ಸ್ತೋತ್ರವನ್ನು ಪ್ರಾರಂಭಿಸಿದನು. ಶಬರರು ದಂಗುಬಡಿದು ನೋಡುತ್ತಿದ್ದರು.

ಕರಿಗಲ್ಲಿನ ಸ್ವಾಮಿ ಸುಂದರವಾದ ಬಿಳಿಯ ವಿಗ್ರಹ ಮೂರ್ತಿಯಾಗಿ ಬದಲಾಯಿಸುವುದೂ, ಮೂಕ ಹುಡುಗನು ಸ್ಪಷ್ಟ ಉಚ್ಚಾರದಿಂದ ಮಾತುಗಳನ್ನಾಡುವುದೂ ಕಣ್ಣು ಮುಚ್ಚಿ ಬಿಡಿಸುವುದರೊಳಗೆ ನಡೆದ ಸಂಭವಗಳು. ಈ ಅದ್ಭುತಗಳನ್ನು ನೋಡಿ, ಶಬರರು ಚಿತ್ರದ ಬೊಂಬೆಗಳಂತೆ ನಿಬ್ಬೆರಗಾಗಿ, ಕಡೆಗೆ ಮೆಲ್ಲಗೆ ಕೈಗಳನ್ನೆತ್ತಿ ವಿಘ್ನೇಶ್ವರನಿಗೆ ನಮಸ್ಕಾರ ಮಾಡಿದರು.

ಬಾಲಕನ ರೂಪದಲ್ಲಿದ್ದ ವಿಘ್ನೇಶ್ವರನು ತನಗೆ ನಮಸ್ಕರಿಸಬೇಡಿರೆಂದು ಕೈಗಳಿಂದ ನಿವಾರಿಸುತ್ತ, "ನೀವು ನನಗೆ ನಮಸ್ಕಾರಮಾಡುವುದಲ್ಲ. ನಿಮ್ಮ ದೇವರನ್ನು, ನಿಮ್ಮ ಸ್ವಾಮಿಯನ್ನು ಭಯಬಿಟ್ಟು ನಮಸ್ಕರಿಸಿ ಸೇವಿಸಿರಿ. ನೀವು ನಂಬಿದ ದೇವರನ್ನು ತಂದೆಯ ಹಾಗೆ, ಅಣ್ಣನಹಾಗೆ, ಸ್ನೇಹಿತನ ಹಾಗೆ ಭಾವಿಸಿರಿ. ರಕ್ತಪಾತ, ಬಲಿ, ಕೊಲೆ ಮೊದಲಾದ ಬೀಭತ್ಸಕರ ಕ್ರೂರಕರ್ಮಗಳನ್ನು ಬಿಟ್ಟು, ಫಲ ಪುಷ್ಪಗಳಿಂದ, ಬಾಳೆಯ ತೋರಣಗಳಿಂದ ತಣ್ಣಗಿನ ಆನಂದದಾಯಕವಾದ ಪೂಜೋತ್ಸವಗಳನ್ನು ಮಾಡಿರಿ. ಈಗ ತಾನೇ ಮಾತುಬಂದ ಈ ಹುಡುಗನೇ ನಿಮಗೆ ಗುರುವಾಗಿಯೂ ಇರುತ್ತಾನೆ. ನಾನೀಗ ನಿಮ್ಮ ಸ್ವಾಮಿಯ ಬಳಿಗೆ ಹೋಗುತ್ತೇನೆ. ನಿಮ್ಮ ಸ್ವಾಮಿ ನಿಮಗೂ ದರ್ಶನ ಕೊಡುತ್ತಾನೆ." ಎಂದು ಹೇಳಿ ಬೇಗ ಬೇಗನೆ ಬೆಟ್ಟದ ಮೇಲೆ ಏರುತ್ತಾ ಹೋದನು. ಶಬರರು ಸ್ವಲ್ಪ ದೂರದ ವರೆಗೆ ಅವನನ್ನು ಅನುಸರಿಸಿ ಆಮೇಲೆ ಅಲ್ಲಿಯೇ ನಿಂತರು.

ವಿಘ್ನೇಶ್ವರನು ಓಡುತ್ತಾ ಬೆಟ್ಟದ ಶಿಖರವನ್ನು ತಲಪಿದನು. ಅಲ್ಲಿ ಭೈರವಸ್ವಾಮಿ ತಲೆ ತಗ್ಗಿಸಿಕೊಂಡು ಚಿಂತಿಸುತ್ತಾ ಕುಳಿತಿದ್ದನು. ಅವನ ಶರೀರವು ಕರ್ರಗಾಗಿದ್ದಿತು.

ವಿಘ್ನೇಶ್ವರನು "ಭೈರವಣ್ಣಾ!" ಎಂದು ಕೂಗಿ ಅವನ ಎರಡು ಕೈಗಳನ್ನೂ ಹಿಡಿದು ಆಲಿಂಗನ



ಮಾಡಿಕೊಂಡನು. ಮರುಕ್ಷಣದಲ್ಲಿ ಭೈರವನ ಕಾರ್ಗಪ್ಪಿನ ಶರೀರವು, ಬೆಳ್ಳಗೆ ಬೆಳುದಿಂಗಳ ಕಾಂತಿಯಿಂದ ಪ್ರಕಾಶಿಸಿತು.

ದಿವ್ಯಮಂಗಳರೂಪವನ್ನು ಹೊಂದಿದ ಭೈರವನು, ಬಾಲಕನನ್ನು ಅತ್ಯಾನಂದದಿಂದ ಆಲಿಂಗಿಸಿ, "ಆಹಾ! ನೀನು ವಿಘ್ನೇಶ್ವರನೇ ನಿಜ. ನನಗೆ ಗೊತ್ತು. ನಿನ್ನ ಅನುಗ್ರಹದಿಂದಲೇ ನನ್ನ ಕಪ್ಪು ಬಣ್ಣವು ಹೋಗಿ ದೈವತ್ವಬರುತ್ತದೆಂದು ನಾನು ಅವತರಿಸಿದಾಗಲೇ ಆಕಾಶವಾಣಿ ತಿಳಿಸಿತ್ತು. ಈ ಬೆಟ್ಟವನ್ನೇರಿ ಬರಲು ಯಾರೂ ಸಾಹಸ ಮಾಡಲಾರರು. ನನ್ನನ್ನು ನೋಡಿ ಪಕ್ಷಿಗಳೂ ಹೆದರಿ ಶಬ್ದ ಮಾಡುವುದಿಲ್ಲ. ನನ್ನನ್ನು ನಾನೇ ಅಸಹ್ಯಪಟ್ಟುಕೊಳ್ಳುತ್ತ, ನಿನಗಾಗಿ ಎಷ್ಟೋ ಕಾಲದಿಂದ ನಿರೀಕ್ಷಿಸಿಕೊಂಡಿದ್ದೇನೆ. ನಿನ್ನ ನಿಜರೂಪ ದಿಂದ ನನ್ನ ಕಣ್ಣುಗಳಿಗೆ ಹಬ್ಬಮಾಡು!" ಎಂದನು.

ಕೂಡಲೇ ವಿಘ್ನೇಶ್ವರನು ನಿಜರೂಪದಿಂದ ಪ್ರತ್ಯಕ್ಷವಾಗಿ ಅವನೊಂದಿಗೆ: "ನೋಡಣ್ಣ. ಇಂದಿ ನಿಂದ ನೀನು ಈ ದಿವ್ಯರೂಪದಲ್ಲಿ ದೈವವಾಗಿ ಆರಾಧಿಸಲ್ಪಡುವ ಸ್ವಾಮಿಯಾಗು. ಶಿವಕೇಶವರಿಬ್ಬರ ಅಂಶವೂ ನಿನ್ನಲ್ಲಿದೆ. ನಿನ್ನ ಜನ್ಮವನ್ನು ಕುರಿತು ಅಮ್ಮ ನನಗೆ ಎಲ್ಲಾ ಸಂಗತಿ ಹೇಳಿದ್ದಾಳೆ. ಅಂದಿ ನಿಂದಲೂ ನಿನ್ನನ್ನು ನೋಡಬೇಕೆಂದು ಆತುರ ಪಡುತ್ತಲೇ ಇದ್ದೆ. ಅಮ್ಮ ನನ್ನನ್ನು ತುಂಬಾ ಹೆದರಿಸಿದಳು. ನಿನ್ನ ಮುಖ ಕಗ್ಗತ್ತಲೆಯ ಗವಿಯ ಹಾಗಂತೆ. ಶಿವವಿಷ್ಣುಗಳ ತೇಜಸ್ಸು ಒಂದಾಗಿ ಕೂಡಿ ನಿನ್ನ ಅವತರಣವಾಯಿತಂತೆ. ಅದು ಯಾರಿಗೂ ಕಾಣದಂತಿರಲು ನಿನಗೆ ಕಪ್ಪನೆಯ ರೂಪ ಬಂತಂತೆ. ಈಗ ನೋಡಿದಿಯಾ? ನಿನ್ನಂಥಾ ದಿವ್ಯಮಂಗಳ ಸುಂದರನಾದ ಸ್ವಾಮಿ ಬೇರೊಬ್ಬನಿಲ್ಲ. ನಿನ್ನನ್ನು ಭಕ್ತಿಯಿಂದ ಸೇವಿಸುವ ಶಬರರಿಗೆ ಒಮ್ಮೆ ದರ್ಶನ ಕೊಟ್ಟುಬಿಡು." ಎಂದು ಹೇಳಿದನು.

ಆಮೇಲೆ ವಿಘ್ನೇಶ್ವರನು ಬಾಲಕನ ರೂಪದಲ್ಲಿ ಶಬರರ ಬಳಿಗೆ ಬಂದು, "ನೀವೆಲ್ಲರೂ ನಿಮ್ಮ ಸ್ವಾಮಿಯ ಬಿಳಿಯ ಶಿಲಾವಿಗ್ರಹದ ಮುಂದೆ ಅಡ್ಡಬಿದ್ದು ಏಕ ಕಂಠದಿಂದ ಸ್ವಾಮಿಯೇ ಶರಣಂ ಎಂದು ಕೂಗಿಕೂಗಿ ಕರೆಯಿರಿ. ನಿಮ್ಮ ಸ್ವಾಮಿ ನಿಮಗೆ ದರ್ಶನ ಕೊಡುತ್ತಾನೆ. ಕರೆದಾಗಲೆಲ್ಲಾ ಓಗೊಡುತ್ತಾನೆಂದು ತಿಳಿಯಿರಿ. ಕಾಡು ಜೀವನ ವನ್ನು ಬಿಟ್ಟು ವ್ಯವಸಾಯ ಮಾಡಿರಿ. ಪೈರು ಪಚ್ಚೆಗಳನ್ನು ಏರ್ಪಡಿಸಿಕೊಂಡು ಮನುಷ್ಯರಾಗಿ ಜೀವಿಸಿರಿ. ನಿಮ್ಮ ಸ್ವಾಮಿಯ ಬೆಂಗಾವಲೂ ರಕ್ಷಣೆಯೂ ಯಾವಾಗಲೂ ನಿಮಗಿರುತ್ತವೆ" ಎಂದು ಹೇಳಿ ಅದೃಶ್ಯನಾಗಿ ಹೋದನು.

ಆಗ ತಾನೇ ಅವನು ಸಾಮಾನ್ಯ ಬಾಲಕನಲ್ಲ ವೆಂದೂ ತಮ್ಮನ್ನು ಜ್ಞಾನಬೋಧೆಯಿಂದ ಉದ್ಧರಿಸ ಲಿಕ್ಕಾಗಿ ಬಂದ ದೇವನೆಂದೂ ಶಬರರಿಗೆ ತಿಳಿಯಿತು. ಅವನು ಹೇಳಿದಂತೆಯೇ ಶಬರರು ಬೆಳ್ಳಗಾಗಿ



ಹೊಳೆಯುವ ವಿಗ್ರಹದ ಮುಂದೆ ಅಡ್ಡ ಬಿದ್ದು ಬಾಯಿ ತುಂಬ ಸ್ವಾಮಿಯನ್ನು ಕರೆಯುತ್ತ ಭಕ್ತಿ ಪರವಶರಾದರು. ಆಗ ದಿವ್ಯಸುಂದರ ರೂಪದಲ್ಲಿ ಸ್ವಾಮಿ ಅವರ ಮುಂದೆ ಸಾಕ್ಷಾತ್ಕರಿಸಿ ಕಿರುನಗುವಿನೊಂದಿಗೆ ಅಭಯಮುದ್ರೆಯಿಂದ ಅವರನ್ನೆಲ್ಲ ಆಶೀರ್ವದಿಸಿ ಅಂತರ್ಧಾನನಾದನು.

ಅಂದಿನಿಂದಲೇ ಶಬರರು ಪ್ರತಿವರ್ಷವೂ ಮಾರ್ಗಶಿರಮಾಸದಲ್ಲಿ ಬಾಳೆಯುಬೆಂಡು ಹಾಳೆಗಳಿಂದ, ಎಳೆಯ ಬಾಳೆಯೆಲೆಯ ಸೀಳುಗಳಿಂದ, ವಿವಿಧ ವಿನ್ಯಾಸಗಳಲ್ಲಿ ಸ್ವಾಮಿಗೆ ಮಂಟಪಗಳನ್ನೂ, ಚಪ್ಪರ ತೋರಣಗಳನ್ನೂ ಕಟ್ಟಿ ಅಲಂಕಾರಮಾಡಿ, ಪೂಜಿಸ ತೊಡಗಿದರು. ಬಲಿ ಮೊದಲಾದ ಬೀಭತ್ಸ ಕ್ರಮಗಳೇನಿಲ್ಲದೆ, ಸಾತ್ವಿಕಾರಾಧನೆಗಳಿಂದ, ಭಯವಿಲ್ಲದ ಸದ್ಭಕ್ತಿಯಿಂದ ವಿದ್ಯಾವಂತರಾಗಿ ಒಳ್ಳೆಯ ಮಾನವತೆಯನ್ನು ಸಾಧಿಸುತ್ತ ಧನ್ಯರಾಗುತ್ತ ಬಂದರು. ಸ್ವಾಮಿಯ ನಿವಾಸಸ್ಥಾನವಾದ ಬೆಟ್ಟದ ಮೇಲೆ, ಶಿಲ್ಪಕಲೆಗಳಿಂದ ಕೂಡಿದ ದೊಡ್ಡದೊಂದು ಆಲಯವನ್ನು ಕಟ್ಟಿದರು. ಉತ್ಸವಕಾಲದಲ್ಲಿ ಸ್ವಾಮಿಯ ಮುಂದೆ ಸಂಗೀತ ನೃತ್ಯ ಕವಿತೆಗಳು ಆನಂದದ ಒರತೆಗಳಾಗಿ ಹರಿಯ ತೊಡಗಿದುವು. ಆ ಬೆಟ್ಟಕ್ಕೆ ಶಬರಮಲೆ ಎಂಬ ಹೆಸರು ಪ್ರಸಿದ್ಧವಾಯಿತು.

ಬಾಲಕನ ರೂಪದಲ್ಲಿ ಬಂದು ಇಷ್ಟೆಲ್ಲಾ ಮಾರ್ಪಾಟು ಮಾಡಿದವನು ಯಾವ ದೇವರೆಂಬುದು ಶಬರರಿಗೆ ಗೊತ್ತಿರಲಿಲ್ಲ. ತಮ್ಮ ಸ್ವಾಮಿಯೇ ಆ ರೂಪದಲ್ಲಿ ಬಂದು ತಮ್ಮ ಅಜ್ಞಾನವನ್ನು ತೊಲಗಿಸಿ ಅನುಗ್ರಹಿಸಿದನೆಂದೇ ತಿಳಿದರಲ್ಲದೆ, ಇದು ವಿಘ್ನೇಶ್ವರನ ಲೀಲೆ ಎಂದು ತಿಳಿಯಲಿಲ್ಲ. ಹಾಗೆ ತಿಳಿದಿದ್ದರೆ ಶಬರರು ಆ ಸ್ವಾಮಿಯನ್ನು ಬಿಟ್ಟು ವಿಘ್ನೇಶ್ವರನನ್ನೇ ತಮ್ಮ ದೇವರೆಂದು ಆರಾಧಿಸಲು ತೊಡಗಿ, ಭೈರವಸ್ವಾಮಿಯನ್ನು ಮರೆತುಬಿಡುತ್ತಿದ್ದರು. ಈ ಸಂಗತಿಯನ್ನು ಅರಿತುಕೊಂಡಿದ್ದ ಭೈರವಸ್ವಾಮಿ ಪದೇ ಪದೇ ವಿಘ್ನೇಶ್ವರನನ್ನು ಸ್ಮರಿಸುತ್ತಾ ಮನಸಾರೆ ವಂದಿಸಿಕೊಂಡಿದ್ದನು. ತಾನು ಕೈಲಾಸಕ್ಕೆ ಹೋಗಿ ವಿಘ್ನೇಶ್ವರನೊಂದಿಗೂ, ಕುಮಾರಸ್ವಾಮಿಯೊಂದಿಗೂ ತನ್ನ ಆನಂದವನ್ನು ಹಂಚಿಕೊಳ್ಳಬೇಕೆಂದು ಅವನಿಗೆ ಆಗಾಗ ತೋರುತ್ತಿತ್ತು.

ವಿಘ್ನೇಶ್ವರನು ಶಬರರನ್ನು ಸಂಸ್ಕರಿಸಿ ಮೂಷಿಕ ವಾಹನನಾಗಿ ಆಕಾಶಮಾರ್ಗದಿಂದ ಕೆಳಗೆ ನೋಡುತ್ತಾ ಉತ್ತರದಿಶೆಗಾಗಿ ಪ್ರಯಾಣ ಮಾಡುತ್ತಿದ್ದನು. ಈ ದಕ್ಷಿಣದಲ್ಲಿ ಕಾಣುವ ಬೆಟ್ಟಗಳ ಇಳಿಜಾರಿನಲ್ಲೆಲ್ಲಾ ದಟ್ಟವಾದ ಅರಣ್ಯಗಳೇ ತುಂಬಿಕೊಂಡಿದ್ದುವು. ಭೂಭಾಗವು ಖಾಲಿಯಾಗಿ ಬಂಜರು ಬಿದ್ದ ಮೈದಾನದ ಹಾಗೆ ಕಾಣುತಿತ್ತು. ಬೇಕಾದಷ್ಟು ಜಲಸಮೃದ್ಧಿ ಇರುತ್ತಿದ್ದರೆ ಭೂಮಿ ಪೈರು ಪಚ್ಚೆಗಳಿಂದ ಕಂಗೊಳಿಸುತ್ತಿತ್ತು. ಆದರೆ ನೀರಿನ ಕೊರತೆ

ಯನ್ನು ತೀರಿಸಬೇಕಾಗಿದ್ದ ನದಿಗಳು ಎಲ್ಲಿಯೂ ಕಾಣಲಿಲ್ಲ. ಇರುವ ಪ್ರಜೆಗಳು ಆಕಾಶದಲ್ಲಿ ಕಾಣುವ ಮೋಡಗಳನ್ನು ನಂಬಿಕೊಂಡು ಹೇಗೋ ಜೀವನ ಯಾತ್ರೆ ಮಾಡುತ್ತಿದ್ದರು.

ಆಗ ಅಲ್ಲಿಯ ಜನರು ಹೇಳಿಕೊಳ್ಳುವ ಕೆಲವು ಮಾತುಗಳೂ ವಿಘ್ನೇಶ್ವರನ ದೊಡ್ಡ ಕಿವಿಗಳಲ್ಲಿ ಬಿದ್ದುವು:

"ಗಂಗೆಯಂಥ ಜೀವನದಿಗಳಿಂದ ಕೂಡಿದ ಉತ್ತರದೇಶದ ಪ್ರಜೆಗಳು ಎಷ್ಟು ಪುಣ್ಯಮಾಡಿ ಹುಟ್ಟಿದರೋ ಏನೋ! ಅಷ್ಟು ದೊಡ್ಡ ಗಂಗಾ ನದಿಯಂತಹುದು ನಮಗೇನೂ ಇಲ್ಲದಿದ್ದರೂ, ಯಾವ ದೇವರಾದರೂ ಇತ್ತಕಡೆ ಹರಿಯುವಂತೆ ಮಾಡಬಾರದೇ? ಮೂರು ಕೋಟಿ ದೇವತೆಗಳು ಇದ್ದಾರಂತೆ. ಯಾರಿಗೂ ಕರುಣೆಯಿಲ್ಲ. ಒಳ್ಳೆಯದಕ್ಕೆ ಮನಸ್ಸು ಕೊಡುವುದಿಲ್ಲ. ಮತ್ತೇಕೆ ಆ ದೇವತೆಗಳು?"

ಅತ್ತ ಪಡುವಣ ದಿಕ್ಕಿನಲ್ಲಿ ಎತ್ತರವಾದ ಪರ್ವತ ಶ್ರೇಣಿಗಳು, ಇತ್ತ ಮೂಡು ದಿಕ್ಕಿನಲ್ಲಿ ಸಣ್ಣಸಣ್ಣ ಬೆಟ್ಟದ ಸಾಲಿನ ಬದಿಯ ಭೂಭಾಗಗಳು ವಿಶಾಲವಾಗಿದ್ದು ಸಮುದ್ರದ ವರೆಗೂ ಸುಮ್ಮನಿವೆ. ಹೆಚ್ಚಿನ ಜನರು ಪ್ರಾಣಿಗಳನ್ನೂ ಪಕ್ಷಿಗಳನ್ನೂ ಬೇಟೆಯಾಡಿ ತಿನ್ನುತ್ತ ಜೀವನ ಕಳೆಯುತ್ತಿದ್ದಾರೆ. ಪ್ರಾಣಭೀತಿಯಿಲ್ಲದೆ ಸಮುದ್ರದಲ್ಲಿ ಸಾಗಿ ಮೀನು ಹಿಡಿದು ಬದುಕುವ ಬೆಸ್ತರು ಅನೇಕರಿದ್ದಾರೆ. ಸರಿಯಾದ ಮೇವಿಲ್ಲದೆ ಪಶುಗಣಗಳು ಸೊರಗಿ ದೈನ್ಯತೆಗೆ ಪಾತ್ರವಾಗಿವೆ. ಪೂರ್ವತೀರದ ಉದ್ದಕ್ಕೂ ಬೆಸ್ತರ ಹಳ್ಳಿಗಳೇ. ಮೀನುಗಾರರೇ.

ಈ ಭೂಮಿಯನ್ನು ಉತ್ತರದ ಭೂಮಿಯೊಂದಿಗೆ ಹೋಲಿಸುವಾಗ ವಿಘ್ನೇಶ್ವರನಿಗೆ ಚಿಂತೆಯಾಯಿತು. ಹಿಮಾಚಲ ಸೀಮೆಯಲ್ಲಿ ಎಲ್ಲಿ ನೋಡಿದರೂ ಸುಂದರ ಜಲಪಾತಗಳು; ರಮಣೀಯವಾದ ಸರೋವರಗಳು, ನದಿಗಳು, ಕೆರೆಕೊಳಗಳೆಲ್ಲ ಆನಂದದಾಯಕವಾಗಿವೆ. ಪ್ರಕೃತಿ ಹಸಿರಾಗಿದೆ. ಆದರೆ ಇಲ್ಲಿಯ ಪಶ್ಚಿಮ ಬೆಟ್ಟಗಳು ದೃಷ್ಟಿ ಬೊಂಬೆಗಳ ಹಾಗೆ ಬೋಳಾಗಿವೆ.

ಆ ಪರ್ವತಶ್ರೇಣಿಯ ನಡುವೆ ಸಹ್ಯಾದ್ರಿಯ ಕಣಿವೆಯಲ್ಲಿ ಗೌತಮನ ಆಶ್ರಮವು ಇದ್ದಲಿಯ ಗುಂಪಿನಲ್ಲಿರುವ ಮರಕತದಹಾಗೆ ಹಸಿರಾಗಿ ಹೊಳೆಯುತ್ತಿದ್ದಿತು. ವಿಘ್ನೇಶ್ವರನು ಏನೋ ಯೋಚಿಸುತ್ತ ಬಗ್ಗಿ ನೋಡಿದನು. ಬೇಗ ಹಾರಿ ಹೋಗುವಂತೆ ಇಲಿಗೆ ಎಚ್ಚರಿಸಿ, ದಾಕ್ಷಿಣಾತ್ಯದ ವಿಂಧ್ಯವನ್ನು ದಾಟಿ ಉತ್ತರಕ್ಕೆ ಹೋದನು. ಆ ಭಾಗವೆಲ್ಲಾ ಈಗ ಹೊಸರೀತಿಯಾಗಿರುವಂತೆ ತೋರಿತು. ಸಮೀಪ ಹೋದಹಾಗೆ ಏನೋ ವಿಪರೀತವಾದ ಅಯೋಮಯದಂಥ ಪರಿಸ್ಥಿತಿಯನ್ನು ನೋಡಿದನು.






**ಈ** ನಡುವೆ ಉತ್ತರ ಭಾರತದಲ್ಲಿ ಒಂದು ಸಂಗತಿ ನಡೆದಿತ್ತು. ಅದೇನೆಂದರೆ, ಸಾಧಾರಣವಾಗಿ ಗಂಗಾ ಪಾರ್ವತಿಯರ ನಡುವೆ ಮತ್ಸರವೂ ದ್ವೇಷವೂ ಇದ್ದೇ ಇರುವಾಗ, 'ಗಂಗಾಪುಷ್ಕರ'ದ ಕಾಲವು ಬಂತು.

ಆ ಸಮಯದಲ್ಲಿ ನಾರದನು ಪಾರ್ವತಿಯ ಬಳಿಗೆ ಬಂದು, "ಈಗ ನೋಡಿದಿಯಾ ತಾಯೇ, ಮುಕ್ಕೋಟಿ ದೇವತೆಗಳ ಮಹತ್ವವೂ ಶಕ್ತಿಗಳೂ ಗಂಗಾಜಲಕ್ಕೆ ಸಂಕ್ರಮಿಸುವ ಹಾಗೆ ಪುಷ್ಕರ ಸ್ನಾನವನ್ನು ಮಾಡುತ್ತಾ ಇದ್ದಾರೆ. ಅಮ್ಮಾ, ಗೌರಿ, ನೀನು ಕೂಡಾ ಹೋಗಿ ಪುಷ್ಕರ ಸ್ನಾನ ಮಾಡಬಾರದೆ? ಹಾಗೆ ಮಾಡಿದರೆ, ನೀನು ಸ್ವಲ್ಪವೂ ಮತ್ಸರ ದ್ವೇಷಗಳಿಲ್ಲದ ಪರಿಶುದ್ಧವಾದ ವಿಶಾಲ ಹೃದಯದವಳೆಂದು, ತುಂಬಾ ಒಳ್ಳೆಯವಳೆಂದು ಲೋಕವು ನಿನ್ನನ್ನು ಮೆಚ್ಚಿಕೊಳ್ಳುತ್ತದೆ!" ಎಂದು ಹೇಳಿದನು. ಹಾಗೆ ಮಾಡುವುದು ಒಳ್ಳೆಯದೆಂದು ಪಾರ್ವತಿಗೂ ತೋರಿತು. ಆ ವರೆಗೂ ಅವಳು ಗಂಗಾ ಪುಷ್ಕರದಲ್ಲಿ ಮಿಂದವಳಲ್ಲ.

ಅಲ್ಲಿಂದ ಹೊರಟ ನಾರದನು ಗಂಗೆಯ ಬಳಿಗೆ ಹೋಗಿ "ಅಮ್ಮಾ, ಗಂಗಾ ಭವಾನೀ! ನಿನ್ನನ್ನು ಪಾವನ ಮಾಡೋಣವೆಂದು ಪಾರ್ವತಿ ನಿನ್ನಲ್ಲಿ ಪುಷ್ಕರ ಸ್ನಾನ ಮಾಡಲು ಬರುತ್ತಾಳೆ. ನಿನ್ನ ಪುಣ್ಯ" ಎಂದನು.

"ಹಾಗೇನು? ತಾನು ತುಂಬಾ ದಯಾದಾಕ್ಷಿಣ್ಯದವಳೆಂದು ಪ್ರಪಂಚಕ್ಕೆ ತೋರಿಸಲು ಬರುತ್ತಾಳೆಂದು ಕಾಣುತ್ತೆ. ಬರಲಿ, ಹೇಳುತ್ತೇನೆ!" ಎಂದಳು ಗಂಗೆ.

ಪಾರ್ವತಿ ಎಲ್ಲರಂತೆ ಹೂಗಳಿಂದ ಅರ್ಚಿಸಿ ಗಂಗೆಯಲ್ಲಿ ಇಳಿದಳೋ ಇಲ್ಲವೋ, ಆಗ ಗಂಗೆ "ನಿಲ್ಲಲ್ಲಿ! ನನ್ನನ್ನು ಮುಟ್ಟಿ ಮಲಿನ ಮಾಡಬೇಡ" ಎಂದು ತಡೆದಳು. ಇಬ್ಬರಿಗೂ ದೊಡ್ಡ ವಿವಾದವೇ ನಡೆಯಿತು.

"ಇಷ್ಟು ವರ್ಷ ಬಾರದವಳು ನಿನ್ನ ವಿಷಯು ತಿಳಿದೇ ಬರಲಿಲ್ಲವೆಂದುಕೊಂಡರೆ, ಈಗೇಕೆ ಬಂದಿ? ಇಬ್ಬರು ಮಕ್ಕಳಿದ್ದಾವೆ ಅಂತ ಪರಿಶುದ್ಧಳಾದೆಯಾ? ಕುಮಾರಸ್ವಾಮಿಯನ್ನು ಶರವಣ ಸರೋವರವು

## ೧೦. ಗೋದಾವರಿಯ ಅವತರಣ



ಹಡೆಯಿತು. ನಿನ್ನ ಗೊಡ್ಡು ಕೈಗಳಲ್ಲಿ ಹಿಚುಕಿಸಿ ಕೊಂಡು ಬಂದ ಬೊಂಬೆ ಮಗು ಪಾಪ, ಗಜಮುಖ ನಾದನು. ನೀನು ದೊಡ್ಡ ಬಂಡೇ ಬಂಜೆ! ಹೋಗಾಚೆ!" ಎಂದಳು ಗಂಗೆ.

"ನನ್ನನ್ನು ಏನೆಂದುಕೊಂಡೆಯೇ? ಪರಮಶಿವನ ಅರ್ಧಾಂಗಿ, ಭಾಗೇಶ್ವರಿ! ನನ್ನನ್ನು ನಿಂದಿಸುವಷ್ಟು ಗರ್ವ ಬಂತೇನೆ?" ಎಂದಳು ಪಾರ್ವತಿ.

"ಎಲ್ಲಾ ಗೊತ್ತೇ! ಮಾಡಿಕೊಂಡ ಪಾಪದ ಗಂಡನನ್ನು ಅರ್ಧ ತಿಂದು ಹಾಕಿದ ಪರಮ ಪಾತಕಿ" ಎಂದಳು ಗಂಗೆ.

"ಜಾರಿ ಬಿದ್ದ ಭ್ರಷ್ಟೆ ನೀನು!" ಎಂದು ಪಾರ್ವತಿ ಹೇಳಿದರೆ, "ಆತನು ನುಂಗಿದ ಹಾಲಾಹಲವು ಕುತ್ತಿಗೆಯಲ್ಲಿ ಸಿಕ್ಕಿಕೊಂಡು ಉರಿಯುತ್ತಿರುವಾಗ, ನಾನು ತಣಿಸಿದೆ. ಅದಕ್ಕೆ ಮೆಚ್ಚಿ, ನನ್ನನ್ನು ಮನೋಹರ ಕುಸುಮ ಕುಮಾರಿಯಾಗಿ ಮಾಡಿ ಧರಿಸಿಕೊಂಡ ಜಗದ್ರಕ್ಷಕನಿಗೆ ನಾನು ಇಷ್ಟಳೋ ಭ್ರಷ್ಟಳೋ ಎಂಬುದು ಲೋಕಕ್ಕೇ ಗೊತ್ತಿದೆ! ನೀನೇನು ಹೇಳಿದರೆ ಆಯಿತೆ?" ಎಂದಳು ಗಂಗೆ.

"ಯಾರೋ ಒಬ್ಬ ಕೂಗಿ ಕರೆದರೆ ಓಡಿಬಂದು ಸಿಕ್ಕಿ ಕೊಂಡವಳು ನೀನು! ಬುದ್ಧಿಗೇಡಿ, ಚಪಲೆ! ಸುಕುಮಾರಿಯಂತೆ,ಸುಕುಮಾರಿ!"ಎಂದಳು ಪಾರ್ವತಿ.

"ನೀನೆಂಥವಳೇ? ಬಲಿಗಳಿಗೆ ಬಾಯಿ ಬಿಡುವ ಕಲ್ಗುಂಡಿಗೆಯ ಮಾರಮ್ಮ! ಮಾತಾಯಿ! ವಾಮಾ ಚಾರಿಣಿ! ಮಲಿನದವಳು! ಮುಟ್ಟಲಾಗದ ಮಾತಂಗಿನಿ! ಮೊರಟೆ! ಶಕ್ತಿದೇವಿ ಅಂತ ನಾಲಗೆ ಚಾಚಿ ಹಾರುವವಳು!" ಎಂದು ಗಂಗೆ ಬಡಬಡನೆ ಹೇಳಿದಳು.

"ಹೌದೇಹೌದು! ಚೆನ್ನಾಗಿ ನೆನಪು ಮಾಡಿದೆಯೇ ಗಂಗಾ! ನಾನು ಶಕ್ತಿ, ಮಹಾಶಕ್ತೀದೇವಿ!" ಎಂದು ಪಾರ್ವತಿ ಆವೇಶ ತಾಳಿದಳು. ಅದರಿಂದ ಲೋಕದಲ್ಲಿ ಶಕ್ತಿಯು ಒತ್ತಡವೆದ್ದಿತು, ಪ್ರಳಯಪ್ರಭಂಜನವು ಬೀಸ ತೊಡಗಿತು. ಮುಸುಕಿಕೊಂಡು ಬರುವ ಕಾರ್ಮುಗಿಲು ಗಳಿಂದ ಕತ್ತಲೆ ಹರಡಿತು. ಕೋಲ್ಮಿಂಚುಗಳೊಂದಿಗೆ ಗಗನ ಗರ್ಜನೆ ಮೊಳಗಿತು. ಸಿಡಿಲುಗಳು ಹೊಡೆ ದುವು. ಭೂಮಿ ಕಂಪಿಸಿ ಮಂಜಿನ ಶಿಖರಗಳು ಉರುಳಿದುವು. ಪ್ರಕೃತಿ ಸಂಕ್ಷೋಭೆಯಿಂದ ಪ್ರಜೆ ಗಳೂ ಪ್ರಾಣಿಕೋಟಿಗಳೂ ಹಾಹಾಕಾರ ಮಾಡಿದರು.

ಈ ಬಗೆಯ ಪಾರ್ವತಿಯ ಮಹಾವೇಶಕ್ಕೆ ಗಂಗೆ ಪರಿಹಾಸ ಮಾಡುತ್ತಾ "ಸಾಕು ನಿಲ್ಲಿಸೇ. ತಣ್ಣಗಿನವ ಳಾದ ನಾನು ಸ್ವಲ್ಪ ಬಿಸಿಯೇರಿಸಿಕೊಂಡು ಹೇಳಿದ್ದಕ್ಕೇ ಇಷ್ಟೆಲ್ಲಾ ಹಾರುವಿಯಾ? ನಾನೂ ಮಹಾಜಲಶಕ್ತಿ ಎಂಬುದನ್ನು ನೆನಪಿಟ್ಟುಕೋ. ನೋಡೇ, ನೋಡು! ಈಗ ನನ್ನನ್ನು ಕೆರಳಿಸಿದ ಪಾಪ ನಿನ್ನದೇ!" ಎಂದು ಗಂಗಾದೇವಿ ಹಿಮಾಲಯದ ಶಿಖರಾಗ್ರದಷ್ಟು ಎತ್ತರಕ್ಕೆ ಉಕ್ಕೇರಿದಳು. ಗಂಗಾ ಜಲವು ಹುಚ್ಚೆದ್ದು ಹರಿದು ಉತ್ತರ ಭಾರತದ ಭೂಮಿಯನ್ನೆಲ್ಲಾ ಜಲಮಯವಾಗಿ ಮಾಡಿತು.

ಈ ವಿಪರೀತವನ್ನು ದೇವತೆಗಳೆಲ್ಲಾ ಆಕಾಶದಲ್ಲಿ ಸಾಲುಗಟ್ಟಿ ನಿಂತು ನೋಡುತ್ತಾ, "ಈ ಅಮ್ಮಂದಿರು ಮಾತಿಗೆ ಮಾತಾಡುತ್ತ ಲೋಕಕ್ಕೇ ಪ್ರಳಯ ತರುವರು!" ಎಂದು ನಿಟ್ಟುಸಿರು ಬಿಟ್ಟು, ಕಲಹದ ಬೀಜವನ್ನು ಬಿತ್ತಿದ ನಾರದನನ್ನು ಎಲ್ಲರೂ ಸೇರಿ ನಿಂದಿಸ ತೊಡಗಿದರು. "ನಿನಗೇಕೆ ಬೇಕಿತ್ತೋ ಈ ಕರ್ಮ?" ಎಂದು ಬೈದರು.

ವಿಘ್ನೇಶ್ವರನು ದಕ್ಷಿಣ ಭಾರತದಿಂದ ಹಿಂದಿರುಗಿ ಬರುತ್ತ ನಾರದನನ್ನು ನೋಡಿ, "ಇದೇನು ನಾರದಾ?" ಎಂದು ನಡೆದ ಸಂಗತಿಯನ್ನು ತಿಳಿದು, "ಓಹೋ! ಈಗ ನಿನ್ನ ಹೊಟ್ಟೆ ತುಂಬಿತೇ? ಎಂತಹ ಕಲಹ ತಂದಿಟ್ಟೆಯಯ್ಯಾ?" ಎಂದನು.

"ಇಂತಹ ಉಪದ್ರವಗಳೆಲ್ಲಾ ಬಂದರೆ ತಾನೇ ಹೊಟ್ಟೆ ತುಂಬಿದ ವಿನಾಯಕನು ಯಾರು, ಲೋಕ ಕಲ್ಯಾಣಕ್ಕಾಗಿ ಸೊಂಟ ಕಟ್ಟಿಗ ನಾಯಕನು ಯಾರು ಎಂಬುದೆಲ್ಲಾ ಗೊತ್ತಾಗುತ್ತದೆ?" ಎಂದು ಹೇಳಿ ನಾರದನು ನೆಗಾಡಿಕೊಂಡು ನಾರಾಯಣ ನಾದವನ್ನೆಬ್ಬಿಸಿಕೊಂಡು ತನ್ನ ದಾರಿ ಹಿಡಿದು ಹೊರಟನು. ವಿಘ್ನೇಶ್ವರನು ನೇರಾಗಿ ಕೈಲಾಸವನ್ನು ತಲಪಿದನು.

ಆಗ ಗಂಗೆಯ ಉಕ್ಕೂ ತಗ್ಗಿತ್ತು. ಕೈಲಾಸದಲ್ಲಿ ಪಾರ್ವತಿ ಪಶ್ಚಾತ್ತಾಪದಿಂದ ಚಿಂತೆಯಿಂದ ಮುದುಡಿ ಕುಳಿತಿದ್ದಳು. "ಏನಿದು? ಇವಳು ಹೀಗೆ ಉಕ್ಕಿ ಬಿಟ್ಟಳಲ್ಲಾ! ಮತ್ತೊಬ್ಬ ಭಗೀರಥನು ಬಂದು ಹೊರಡಿಸಿಕೊಂಡು ಹೋದರೆ ಹೊರತು ಇವಳ ಸೊಕ್ಕಿನ ಉಕ್ಕು ತಗ್ಗುವಂತಿಲ್ಲ." ಎಂದು ಅವಳು ತನಗೆ ತಾನೇ ಹೇಳಿಕೊಂಡ ಮಾತು ವಿನಾಯಕನ ಕಿವಿಗೆ ಬಿತ್ತು.

ವಿನಾಯಕನು ಏನೂ ತಿಳಿಯದಂತೆ ಪಾರ್ವತಿಗೆ ಪಾದಾಭಿವಂದನೆ ಮಾಡಿ, "ಅಮ್ಮಾ, ನಾನೊಂದು ಒಳ್ಳೆಯ ಕೆಲಸಕ್ಕೆ ತಲೆ ಹಾಕಿದ್ದೇನೆ. ಆಶೀರ್ವಾದ ಮಾಡಮ್ಮಾ!" ಎಂದನು.




"ವಿಘ್ನೇಶ್ವರನು ತಲೆ ಹಾಕಿದ ಕಾರ್ಯಕ್ಕೆ ಅಡ್ಡಿ ಏನಿದೆಯಪ್ಪಾ? ನೀನೇನೋ ದಕ್ಷಿಣ ದೇಶದಿಂದ ತಿರುಗಿ ಬಂದ ಹಾಗಿದೆ. ಏನು ವಿಶೇಷ ಅಲ್ಲಿ?" ಎಂದು ಕೇಳಿದಳು ಪಾರ್ವತಿ.

"ಏನು ಹೇಳಲಮ್ಮಾ? ವಿಂಧ್ಯಾದ್ರಿಯಾಚೆಗೆ ತುಂಬಾ ಶೂನ್ಯವಾಗಿದೆ. ಬರಡುನೆಲವೆಂದೇ ಹೇಳಬಹುದು. ಆ ಪ್ರದೇಶವು ಪೈರುಪಚ್ಚೆಗಳಿಂದ ಬೆಳಗಿ ಅನ್ನಪೂರ್ಣೆ ಎಂಬ ನಿನ್ನ ನಾಮಧೇಯವನ್ನು ಸಾರ್ಥಕ ಮಾಡುವಂತಾದರೆ ಎಷ್ಟು ಒಳ್ಳೆಯದಿತ್ತು. ನಮ್ಮ ಗಂಗಮ್ಮ ಸ್ವಲ್ಪ ಆ ಕಡೆಗೆ ತಣ್ಣಗಿನ ನೋಟ ಬೀರಿಯಾಳೆ? ಏನನ್ನುವೆಯಮ್ಮಾ?" ಎಂದನು.

"ಇದರಲ್ಲಿ ನಾನು ಹೇಳುವುದಕ್ಕೇನಿದೆಯಪ್ಪಾ? ಎಲ್ಲಾ ಆ ವಿಶ್ವನಾಥನದೇ ಭಾರ. ಆತನ ಇಚ್ಛೆ!" ಎಂದಳು ಪಾರ್ವತಿ.

"ಹೀಗೆ ಹೇಳಿ ನಾವು ಸುಮ್ಮನೆ ನೋಡುತ್ತಾ ಇರಬೇಕೇನು? ನಮ್ಮ ಒಳ್ಳೆಯ ಪ್ರಯತ್ನಕೆ



ಶುಭ ಶಂಕರಪ್ಪನ ದಯುವಿಲ್ಲದೇ ಇದ್ದೀತ? ನಂಬಿ ಮುಂದುವರಿಯಲೆ?" ಎಂದನು ಗಣಪತಿ.

"ಅದು ನಿಜ. ನಮ್ಮ ಪ್ರಯತ್ನವಂತೂ ಬೇಕೇ ಬೇಕು. ನೀನು ಮಾಡುವ ಕೆಲಸಕ್ಕಂತೂ ಹಿರಿಯರ ಬೆಂಬಲ ಇದ್ದೇ ಇರುತ್ತದೆ" ಎಂದಳು ಪಾರ್ವತಿ.

"ನೀನು ಇಷ್ಟು ಹೇಳಿದರೆ ಸಾಕಮ್ಮ. ಹೋಗಿ ಬರುತ್ತೇನೆ" ಎಂದು ಪಾರ್ವತಿಯ ಪಾದಗಳನ್ನು ಸೊಂಡಿಲಿನಿಂದ ಒತ್ತಿ ಕಣ್ಣಿಗೊತ್ತಿಕೊಂಡು ಹೊರಟ ವಿಘ್ನೇಶ್ವರನು, ನೆಟ್ಟಗೆ ಹೋಗಿ ಗೌತಮ ಮಹರ್ಷಿಯ ಆಶ್ರಮ ಪ್ರಾಂತವನ್ನು ತಲುಪಿದನು.

ಗೌತಮನು ಪಶ್ಚಿಮ ಕಣಿವೆಗಳ ನಡುವೆ ಆಶ್ರಮ ಕಟ್ಟಿಕೊಂಡು, ತನಗೆ ಬೇಕಾದಷ್ಟೇ ಸಣ್ಣ ವ್ಯವಸಾಯ ಮಾಡಿಕೊಂಡಿದ್ದನು. ಗಣಪತಿ ತನೆ ತುಂಬಿದ ಒಂದು ದನದ ರೂಪವನ್ನು ತಾಳಿದನು.

ಆ ಗಬ್ಬದ ಗೋವು ಬೆಳೆಯ ಗದ್ದೆಯನ್ನು ಮೇಯುತ್ತಾ ಇರುವುದನ್ನು ನೋಡಿ ಗೌತಮನು ಅದನ್ನು ಗದರಿಸಿ ಓಡಿಸಲು ನೋಡಿದನು. ಅದೇನೂ ಲಕ್ಷ್ಯ ಮಾಡದಿರಲು ಕಮಂಡಲುವಿನ ನೀರನ್ನು ಅಂಗೈಯಲ್ಲಿ ತೆಗೆದು ಅದರ ಮೇಲೆ ಬೀಸಿ ಒಗೆದನು. ಆ ನೀರಿನ ಚುಕ್ಕೆಗಳು ಗೋವಿನ ಮೇಲೆ ಬಿದ್ದ ಕೂಡಲೇ ಅದು ಬಿದ್ದು ತಟಪಟನೆ ಹೊರಳಿ ಮರಗಟ್ಟಿ ಸ್ತಬ್ಧವಾಯಿತು. ಹೆದರಿದ ಗೌತಮನು ತನ್ನ ಸುಕೃತವನ್ನೂ, ತಪಸ್ಸನ್ನೂ ಧಾರೆಯೆರೆದರೂ ಮುಚ್ಚಿದ ಕಣ್ಣು ತೆರೆಯಲಿಲ್ಲ ಆ ಮಾಯದ ದನ.

ಈ ಸಂಗತಿಯನ್ನು ಕೂಡಲೇ ನಾರದನು ಇಂದ್ರನೊಡನೆ ಹೇಳಿ ಹುರಿದುಂಬಿಸಿದನು. ಇಂದ್ರನಿಗೆ ಗೌತಮನ ಮೇಲೆ ಮೊದಲೇ ಹಗೆ ಇದ್ದಿತು.

ಆ ಹಗೆಗೆ ಕಾರಣ ಅಹಲ್ಯೆ. ಬ್ರಹ್ಮನು ಅಪೂರ್ವ ಸುಂದರಿಯಾಗಿ ಅಹಲ್ಯೆಯನ್ನು ಸೃಷ್ಟಿ ಮಾಡಿದ್ದನು. ಅವಳ ಮೇಲೆ ಇಂದ್ರನಿಗೆ ಬಹಳ ಆಶೆಯಾಗಿತ್ತು. ಇನ್ನೂ ಅನೇಕರು ಅಹಲ್ಯೆಯನ್ನು ಮದುವೆಯಾಗಲು ಸ್ಪರ್ಧೆಗೆ ಬಿದ್ದರು. ಆಗ ಬ್ರಹ್ಮನು ಜಗಳ ಬೇಡವೆಂದು, ಯಾರು ಭೂಮಿಯನ್ನು ಪ್ರದಕ್ಷಿಣೆ ಮಾಡಿ ಮೊದಲು ಬರುವರೋ ಅವರಿಗೇ ಅಹಲ್ಯೆಯನ್ನು ಕೊಡುವೆನೆಂದು ಪಂಥವನ್ನು ಒಡ್ಡಿದನು.

ಗೌತಮನು ಪ್ರಸವಿಸುವ ದನವನ್ನು ಪ್ರದಕ್ಷಿಣೆ ಮಾಡಿ ಬಂದು, ಅದು ಭೂ ಪ್ರದಕ್ಷಿಣೆಗೆ ಸಮಾನವೆಂದು ವಾದಿಸಿ, ಒಪ್ಪಿಸಿ ಗೆದ್ದು ಅಹಲ್ಯೆಯನ್ನು ವರಿಸಿದರು.

ಗೋವು ಭೂದೇವಿಗೆ ಸಮಾನವೆಂದು ಹೇಳಿದ ಗೌತಮನ ಕೈಯಿಂದಲೇ ಗೋಹತ್ಯವಾಗಿದೆ. ಹಗೆ ತೀರಿಸಿಕೊಳ್ಳಲು ಇದಕ್ಕಿಂತ ಒಳ್ಳೆಯ ಅವಕಾಶ ಬೇರೆನಿದೆ? ಅಂತೆಯೇ ಇಂದ್ರನು ದೊಡ್ಡ ಮುನಿ ಪುಂಗವನ ವೇಷದಿಂದ ಎಲ್ಲಾ ಋಷಿಗಳ ಹತ್ತಿರ ಹೋಗಿ, "ಗೌತಮನು ಗೋಹತ್ಯೆ ಮಾಡಿದ ಮಹಾಪಾಪಿ! ಅವನ ಆಶ್ರಮವು ಮೈಲಿಗೆಯಾಗಿ



ಹೋಯಿತು. ಗೌತಮನನ್ನು ನೋಡಿದರೂ, ಆವನ ಆಶ್ರಮದ ಗಾಳಿ ಸೋಂಕಿದರೂ ಮಹಾ ಪಾತಕವು ಸುತ್ತಿಕೊಳ್ಳುತ್ತದೆ! ಗಂಗಾಜಲವು ಬಂದು ಆಶ್ರಮ ಸೀಮೆಯಲ್ಲಿರುವ ಗೋವಿನ ಮೇಲಿಂದಾಗಿ ಪ್ರವಹಿಸಿದ ಹೊರತು ಇದಕ್ಕೆ ಬೇರೆ ಪರಿಹಾರ ಏನೂ ಇಲ್ಲ!" ಎಂದು ಲೋಕವೆಲ್ಲಾ ತಿಳಿಯುವಂತೆ ಹೇಳಿದನು. ಋಷಿಗಳೆಲ್ಲಾ ಗೌತಮನನ್ನು ಬಹಿಷ್ಕರಿಸಿದರು. ಆವನ ಆಶ್ರಮವಾಸಿಗಳೆಲ್ಲಾ ಹೊರಟು ಹೋಗಿಬಿಟ್ಟರು.

ಗೌತಮನಿಗೆ ಚಿಂತೆಗಿಟ್ಟಿತು. ಎಲ್ಲಿಯ ಗಂಗಾನದಿ! ಎಲ್ಲಿಯ ಪಶ್ಚಿಮ ಕಣಿವೆಗಳು! ಆದರೂ ಗೌತಮನು ಬಿಡಲಿಲ್ಲ. ಭಗೀರಥನನ್ನು ಆದರ್ಶವಾಗಿಟ್ಟುಕೊಂಡು ಗಂಗಾದೇವಿಯನ್ನು ಕುರಿತು ಹಿಮಾಲಯದಲ್ಲಿ ದೊಡ್ಡ ತಪಸ್ಸು ಮಾಡಿದನು.

ಹಿಂದೆ ಕಪಿಲ ಮಹಾಮುನಿಯ ಕೋಪಾಗ್ನಿಯಿಂದ ಬೂದಿಯಾಗಿ ಹೋದ ತನ್ನ ತಾತಂದಿರನ್ನು ಪುಣ್ಯಲೋಕಕ್ಕೆ ಕಳುಹಿಸಲಿಕ್ಕಾಗಿ, ಭಗೀರಥನು ಜಲಾಧಿದೇವಿಯಾದ ಗಂಗೆಯನ್ನು ಧ್ಯಾನಿಸಿ, ತಪಸ್ಸಿನಿಂದ ಮೆಚ್ಚಿಸಿ ದಿವಿಯಿಂದ ಭುವಿಗೆ ಗಂಗೆಯನ್ನು ಇಳಿಸಿಬಿಟ್ಟಿದ್ದನು. ಆಗ ಶಿವನು ಗಂಗೆಯ ಅಪಾರ ಶಕ್ತಿಯನ್ನು ತನ್ನ ಜಟಾಜೂಟದಲ್ಲಿ ಧರಿಸಿದನು. ಆವನ ಜಡೆಗಳೆಡೆಯಿಂದ ಹರಿದ ಗಂಗೆ ಗಂಗಾಭವಾನಿ ಎನಿಸಿ, ದೊಡ್ಡ ವೇಗದಿಂದ ನಾಲ್ಕು ದಿಕ್ಕುಗಳಲ್ಲಿ ಚಿಮ್ಮಿ ಚಿಮ್ಮಿ ಹರಿದಳು. ಭಗೀರಥನ ಹಿಂದೆ ಮೂಡು ಮುಖಳಾಗಿ ಹರಿದಳು. ಆವಳಿಗೆ ಭಾಗೀರಥಿ ಎಂಬ ಹೆಸರು ಬಂದಿತು.

ಹಿಮಾಲಯದ ಮೇಲೆ ಚಿಮ್ಮಿ ಬಿದ್ದ ಗಂಗೆ ಹಿಂದೂ ಕುಶ ಪರ್ವತದ ಮೇಲಿಂದಾಗಿ ಪಶ್ಚಿಮಕ್ಕೆ ಇಂದು ನದಿ ಎನಿಸಿ ಹರಿದಳು. ಇಂದು ನದಿಯನ್ನೇ ಸಿಂಧು ನದಿಯೆಂದು ಎಲ್ಲರೂ ಕರೆದರು. ಭರತ ಖಂಡದ ವಾಯುವ್ಯ ದಿಶೆಯಲ್ಲಿರುವ ಸಿಂಧು ನದಿಯಿಂದಾಗಿ ಹಿಂದೂ ದೇಶವೆಂಬ ಹೆಸರು ಬಂತು.

ಭಗೀರಥನ ಹಿಂದೆ ಮಹಾವೇಗದಿಂದ ಹೋಗುತ್ತಿದ್ದ ಗಂಗೆ ತನ್ನ ಆಶ್ರಮವನ್ನು ಮುಳುಗಿಸದಂತೆ ಮಾಡಲು ಜಹ್ನು ಮಹಾಮುನಿ ಗಂಗೆಯನ್ನು ಕುಡಿದುಬಿಟ್ಟನು. ಭಗೀರಥನು ಜಹ್ನು ಮುನಿಯನ್ನು ಕನಿಕರಿಸುವಂತೆ ಪ್ರಾರ್ಥಿಸಿದ ಮೇಲೆ ಜಹ್ನು ತನ್ನ ಕಿವಿಯಿಂದ ಗಂಗೆಯನ್ನು ಹೊರಗೆ ಬಿಟ್ಟನು. ಆದರಿಂದ ಗಂಗೆಗೆ ಜಾಹ್ನವಿ ಎಂಬ ಹೆಸರು ಕೂಡಾ ಉಂಟಾಯಿತು. ಆಮೇಲೆ ಗಂಗೆ ಪಾತಾಳದ ಕಪಿಲಾಶ್ರಮವನ್ನು ಹಾದುಕೊಂಡು ಭಗೀರಥನ ತಾತಂದಿರ ಬೂದಿ ರಾಶಿಯ ಮೇಲಿಂದಾಗಿ ಹರಿದು ಆವನ ಪ್ರಯತ್ನವು ಫಲಿಸುವಂತೆ ಮಾಡಿದಳು.

ಈಗ ಗೌತಮನು ಮಾಡುವ ತಪಸ್ಸನ್ನು ನೋಡಿ, ಭಗೀರಥನು ಕೂಡ ಅಷ್ಟು ದೊಡ್ಡ ತಪಸ್ಸು ಮಾಡಲಿಲ್ಲವೆಂದು ಗಂಗಾದೇವಿ ಮೆಚ್ಚಿ ಆವನ ಮೇಲೆ ಪ್ರಸನ್ನಳಾಗಿ ಆವನ ಹಿಂದೆಯೇ



ಹೊರಟಳು. ದಾರಿಯುದ್ದಕ್ಕೂ ಅವಳ ಕವಲುಗಳಾಗಿ ಎಷ್ಟೋ ತೊರೆಗಳೂ ನದಿಗಳೂ ಹುಟ್ಟಿದುವು.

ಗೌತಮನ ಆಶ್ರಮವನ್ನು ಸೇರಿದ ಮೇಲೆ ಗಂಗಾ ಪ್ರವಾಹವು ಗೌತಮನ ಹಿಂದೆಯೇ ಸಾಗುತ್ತ, ಗಣೇಶ ಗೋವಿನ ಮೇಲಿಂದಾಗಿ ಪ್ರವಹಿಸಿ ಗೌತಮೀ ನದ ಎನಿಸಿದಳು. ಮಾಯಾ ಗೋವು ಧಿಗ್ಗನೆದ್ದು ನಿಜರೂಪವಾಗಿ ಮಾರ್ಪಟ್ಟಿತು. ಗಂಗಮ್ಮನ ಉಕ್ಕಿನಿಂದಾಗಿ ಒಳ್ಳೆಯ ಪರಿಣಾಮ ಬಂತೆಂದು ವಿಘ್ನೇಶ್ವರನು ಸಂತೋಷಪಟ್ಟನು.

ಅವನು ಗಂಗೆಗೆ ನಮಸ್ಕಾರ ಮಾಡಿ, " ಅಮ್ಮಾ ! ತನಯನನ್ನು ಕ್ಷಮಿಸು. ನಿನ್ನ ದಯಾಮೃತಜಲ ಶಾಖೆಗಳಿಂದ ವಿಂಧ್ಯಾದ್ರಿಯ ಆಚೆಗಿರುವ ಭೂಭಾಗವೆಲ್ಲಾ ಸುಭಿಕ್ಷವಾಗಬೇಕೆಂತಲೇ ಹೀಗೆ ಮಾಡಿದೆನು. ದಕ್ಷಿಣ ಗಂಗೆಯಾಗಿ ಗೌತಮನದ್ವಾರಾ ಅವತರಿಸಿದ ನೀನು ಗೋವನ್ನು ಬದುಕಿಸಿದವಳಾದುದರಿಂದ ಗೋದಾವರಿ ಎಂಬ ಹೆಸರಿನಿಂದ ಪ್ರಸಿದ್ಧಳಾಗುವೆ " ಎಂದು ನಮಸ್ಕಾರ ಮಾಡಿ ಅದೃಶ್ಯನಾದನು.

ಗೋದಾವರಿ ಅನೇಕ ಉಪನದಿಗಳೊಂದಿಗೆ ಪೂರ್ವ ಮುಖವಾಗಿ ಪ್ರವಹಿಸಿ, ವಿಸ್ತಾರವಾದ ಮೈದಾನ ಪ್ರದೇಶವನ್ನು ಸಸ್ಯಶ್ಯಾಮಳವಾಗುವಂತೆ ಮಾಡಿತು. ಸಪ್ತರ್ಷಿಗಳೂ, ದೇವತೆಗಳೂ ಗೋದಾವರಿಯಲ್ಲಿ ಜಳಕವಾಡಿದರು. ಗೌತಮನನ್ನು ಶ್ಲಾಘಿಸಿ ಅಪರ ಭಗೀರಥನೆಂದರು. ಗೋದಾವರಿ ಸಪ್ತ ಗೋದಾವರಿಯಾಗಿ ಸೀಳಿಕೊಂಡು ಪೂರ್ವ ಸಮುದ್ರವನ್ನು ಸೇರಿತು.

ಹಾಗೆ ಗಂಗಾದೇವಿ ಗೋದಾವರಿಯಾಗಿ ಮಾರ್ಪಡುವಾಗ ಅವಳ ಕಗ್ಗಿನ ವೇಣೀ ಸಮೂಹವು ವಿಸ್ತಾರವಾಗಿ ಹರಡಿಕೊಂಡು ಪಡುಗಡೆಯ ಕಣಿವೆಗಳಲ್ಲಿ ಸಿಕ್ಕಿಕೊಂಡಿತು. ಆಗ ವಿಷ್ಣು ತನ್ನ ಕೈಯ ಬೆರಳುಗಳಿಂದ ಆ ಕೂದಲಿನ ಸಿಕ್ಕನ್ನು ಬಿಡಿಸಿದನು. ಕೃಷ್ಣವರ್ಣನಾದ ವಿಷ್ಣುವಿನ ಬೆರಳುಗಳ ಸಂದುಗಳಿಂದ ನೆನೆದ ಕೂದಲಿನ ರಾಶಿಯ ನೀರು ಜಾರುತ್ತಾ, ಕೃಷ್ಣವೇಣಿಯೆನಿಸಿದ ಕೃಷ್ಣಾನದಿಯೆಂಬ ಇನ್ನೊಂದು ದೊಡ್ಡದಾದ ಜೀವನದಿ ಹರಿಯತೊಡಗಿತು.

ಹಾಗೆಯೇ ಗಂಗೆ ಉಕ್ಕಿದಾಗ ಗಂಗಾಜಲವು ಆಕಾಶಕ್ಕೆ ಹಾರಿ ದಕ್ಷಿಣದ ಬೆಟ್ಟಗಳಲ್ಲಿ ತಪಸ್ಸು ಮಾಡುತ್ತಿದ್ದ ಕವೇರಮುನಿಯ ಕಮಂಡಲುವಿನಲ್ಲಿ ಬಿದ್ದು, ಕನ್ಯೆಯಾಗಿ ಹುಟ್ಟಿ ಬೆಳೆದಳು. ಅವಳು ಅಗಸ್ತ್ಯನ ಹಿಂದೆ ಅರಣ್ಯಗಳಲ್ಲಿ ವಿಹರಿಸುತ್ತಾ ಕಾವೇರಿ ನದಿಯಾಗಿ ಮಾರ್ಪಟ್ಟು ಸುಂದರವಾದ ಜಲಪಾತಗಳಾಗಿ ಧುಮುಕಿ ನಲಿದು ಗಂಭೀರಳಾಗಿ ದಕ್ಷಿಣ ಸೀಮೆಯಲ್ಲಿ ಹರಿದು ಸುಭಿಕ್ಷಗೊಳಿಸಿದಳು.

ಈ ವಿಧವಾಗಿ ಗೌತಮ ಮಹರ್ಷಿ ತಂದ ಗಂಗೆ ಮತ್ತೆ ಮೂರು ದೊಡ್ಡ ನದಿಗಳಾಗಿ ದಕ್ಷಿಣ ಭಾರತ ಭೂಮಿಯನ್ನು ಕೂಡಾ ಉದ್ಧರಿಸಿದಳು.

ಗಂಗಾ, ಸಿಂಧು, ಗೋದಾವರೀ, ಕೃಷ್ಣಾ, ಕಾವೇರಿಗಳೆಂಬ ಮಹಾನದಿಗಳ ಹೆಸರು ಹೇಳಿ ಕೊಳ್ಳುವುದು ಭಾರತೀಯರಿಗೆ ಪರಿಪಾಠವಾಗಿ ಹೋಯಿತು.

ಅಂತೂ ಗೌತಮನ ಪಾಪ ಪರಿಹಾರವಾಗಿ ಅವನ ಆಶ್ರಮವು ಕಳೆಗೊಂಡಿತು. ಗೋದಾವರಿಯ ಉದ್ದಕ್ಕೂ ಪುಣ್ಯಕ್ಷೇತ್ರಗಳು ಬೆಳಗಿದುವು. ಗಂಗೆ ಪಶ್ಚಿಮ ಕಣಿವೆಗಳ ಕಡೆಗೆ ಪ್ರವಹಿಸುವುದು ಅಸಂಭವವಾದುದರಿಂದಲೇ ಇಂದ್ರನು ಆ ವಿಧವಾಗಿ ಪರಿಹಾರ ಹೇಳಿದ್ದನು. ಅಸಂಭವಾದುದನ್ನು ಸಾಧಿಸಿ ಸಂಭವವನ್ನಾಗಿ ಮಾರ್ಪಡಿಸಿದ ಗೌತಮನ ದೊಡ್ಡ ತನವನ್ನು ಗುರುತಿಸಿ ಅವನ ಬಳಿಗೆ ಬಂದು ವಂದಿಸಿ ಕ್ಷಮೆ ಕೇಳಿಕೊಂಡನು ಇಂದ್ರ.

ಆದರೆ ಗೌತಮನಿಗೆ ಮಾತ್ರ ಸಂತೋಷವಿರಲಿಲ್ಲ. ಈ ಮೊದಲೇ ಇಂದ್ರನಿಂದ ಮೋಸ ಹೋಗಿ, ಹೆಂಡತಿಯಾದ ಅಹಲ್ಯೆಯನ್ನು ಬಂಡೆ ಕಲ್ಲಾಗಿ ಬಿದ್ದಿರುವಂತೆ ಶಪಿಸಿ, ಉತ್ತರ ದೇಶದಿಂದ ವಿಂಧ್ಯಾದ್ರಿಯನ್ನು ದಾಟಿ, ಪಶ್ಚಿಮ ಕಣಿವೆಯ ಸಾನುಭೂಮಿಯಲ್ಲಿ ಆಶ್ರಮ ಕಟ್ಟಿಕೊಂಡು ಪ್ರಶಾಂತ ವಾಗಿ ತಪಸ್ಸು ಮಾಡಿಕೊಂಡಿದ್ದವನು ಗೌತಮ. ಗೋದಾವರಿಯ ಅವತರಣದಿಂದ ಪಶ್ಚಿಮ ಕಣಿವೆಯ ನಿವಾಸಿಗಳಾದ ಮುನಿಗಳ ಆಶ್ರಮಗಳು ಮತ್ತಿಷ್ಟು ಶೋಭಿಸಿದುವು. ಆ ಪ್ರಾಂತದಲ್ಲಿದ್ದ ಅತ್ರಿ ಮಹಾಮುನಿ ತ್ರಿಮೂರ್ತಿಗಳ ಅಂಶದಿಂದ ಪುತ್ರವಂತನಾದನು. ಅವನ ಪತ್ನಿ ಅತಿಥಿಗಳಿಗೆ ಸದಾ ಅನ್ನದಾನ ಮಾಡುತ್ತಿದ್ದಳು. ಬೆಳೆಗಳು ಪುಷ್ಕಲವಾಗಿ ಬರತೊಡಗಿದುವು.

ಹೀಗೆ ಗೌತಮನ ಆಶ್ರಮದ ಸುತ್ತುಮುತ್ತಲೂ ವಿಶೇಷವಾಗಿ ಸಸ್ಯಸಮೃದ್ಧಿ ಇದ್ದರೂ ಅಹಲ್ಯೆ ಯಿಲ್ಲದ ಕೊರತೆ ಕಾಣುತ್ತಲೇ ಇದ್ದಿತು. ತಾನು ದುಡುಕಿ ಅಹಲ್ಯೆಯನ್ನು ಶಪಿಸಿದೆನೆಂದು ಗೌತಮನು ಮನಸ್ಸಿನೊಳಗೇ ಪಶ್ಚಾತ್ತಾಪಪಡುತ್ತಿದ್ದನು. ಆಗ ವಿಘ್ನೇಶ್ವರನು ಅವನ ಮುಂದೆ ಹೋಗಿ, "ಗೌತಮಾ, ಇನ್ನು ಬೇಗದಲ್ಲೇ ವಿಷ್ಣು ರಾಮನಾಗಿ ಅವತರಿಸಿ ಬಂದು ನಿನ್ನ ಪತ್ನಿಯ ಪಾಪವನ್ನೇ ಹೋಗಲಾಡಿಸುತ್ತಾನೆ. ಪಾಷಾಣೆ ಪುನೀತ ಳಾಗುತ್ತಾಳೆ. ಗೋದಾವರಿಯ ಅವತರಣಕ್ಕಾಗಿ ನಿನಗೆ ತುಂಬಾ ಶ್ರಮಕೊಟ್ಟೆನು. ಇದರ ಸ್ಮಾರಕವಾಗಿ ಗೋದಾವರಿ ನದಿಗೆ ಗೌತಮೀ ನಾಮವು ಚಿರಸ್ಥಾಯಿ ಯಾಗಿರುತ್ತದೆ" ಎಂದನು.

ಗೌತಮನು ಆ ಮಾತಿಗೆ ಸಂತೋಷಪಟ್ಟು, "ಎಲ್ಲವೂ ನಿನ್ನ ಸಂಕಲ್ಪ ಬಲದಿಂದಲೇ ನಡೆಯಿತು. ಗೋದಾವರಿಯ ನೀರೂ ವಿಘ್ನೇಶ್ವರನ ಕೃಪೆಯೂ ಯಾವಾಗಲೂ ರಕ್ಷಿಸಿಕೊಂಡಿರುತ್ತವೆ" ಎಂದನು.






ಒಂದಾನೊಂದು ದಿನ ಲಕ್ಷ್ಮೀದೇವಿ ಮಾನಸ ಸರೋವರದಲ್ಲಿ ಸ್ನಾನ ಮಾಡುವುದರಲ್ಲಿ ತಲ್ಲೀನಳಾಗಿದ್ದಳು. ಅವಳ ಸೌಂದರ್ಯಾತಿಶಯವನ್ನು ನೋಡಿ ಪಾರ್ವತಿಗೆ ಒಂದು ಬಗೆಯ ಮೋಹ ಉಂಟಾಯಿತು. ಆಗ ಪಾರ್ವತಿ ವಿಷ್ಣುವಿನ ರೂಪ ಧರಿಸಿಕೊಂಡು ಅಲ್ಲಿಗೆ ಬಂದಳು. ನವಮೋಹನನಾಗಿ ಕಾಣಿಸಿದ ನಾರಾಯಣನನ್ನು ಲಕ್ಷ್ಮಿಯೂ ನೋಡಿದಳು. ನಾರಾಯಣನೂ ಲಕ್ಷ್ಮಿಯೂ ಕೈ ಕೈ ಹಿಡಿದುಕೊಂಡು ಸ್ವಲ್ಪ ಹೊತ್ತು ಸರೋವರದ ಸುತ್ತಲೂ ವಿಹರಿಸಿದರು. ಅವರಿಬ್ಬರೂ ಒಬ್ಬರನೊಬ್ಬರು ನೋಡಿಕೊಳ್ಳುವುದರಲ್ಲೇ ತಲ್ಲೀನರಾಗಿದ್ದಾಗ, ಸರೋವರದಲ್ಲಿ ಒಂದು ಸುವರ್ಣಕಮಲವು ಎದ್ದು ಬಂದಿತು. ಅದರ ಮಧ್ಯದಲ್ಲಿ ಜಗಜಗನೆಹೊಳೆಯುವ ಒಂದು ಹಸುಗೂಸೂ ಇದ್ದಿತು, ಹೆಣ್ಣು ಶಿಶು.

ಆಗ ಲಕ್ಷ್ಮಿ, ನಾರಾಯಣನನ್ನು ನೋಡಿ ಗಾಢವಾಗಿ ಆಲಿಂಗಿಸಲು, ನಾರಾಯಣ ರೂಪದ ಪಾರ್ವತಿ ಗಲಗಲನೆ ನಗುತ್ತ, "ನಾನು ನಿನ್ನ ನಾರಾಯಣನಲ್ಲ ಕಣೇ!" ಎಂದು ನಿಜರೂಪದಿಂದ ನಿಂತಳು. "ಓಹ್! ನೀನೋ ಇಷ್ಟೂ ಮಾಡಿದವಳು! ಅಣ್ಣನಿಗೆ ತಕ್ಕ ತಂಗಿಯೇ ಸರಿ! ಆ ದಿನ ವಿಷ್ಣು ಮೋಹಿನೀರೂಪದಿಂದ ಶಿವನಿಗೆ ಮಾಯೆ ಕವಿಸಿದುದಕ್ಕೆ ಇದೀಗ ಸರಿಯಾಯಿತು!" ಎಂದಳು.

ಸ್ವರ್ಣಕಮಲದ ಮಧ್ಯದಲ್ಲಿರುವ ಶಿಶುವನ್ನು ನೋಡಿ ಇಬ್ಬರೂ ಮುಗ್ಧರಾದರು. ಅಪಾರ ಪ್ರೇಮ ಉಕ್ಕಲು ಇಬ್ಬರೂ ಸೇರಿ ಶಿಶುವನ್ನು ಕೈಗೆತ್ತಿಕೊಂಡರು.

ಆಗ ಅಲ್ಲಿಗೆ ಫಕ್ಕನೆ ವಿಘ್ನೇಶ್ವರನು ಬಂದು ನಿಂತು, "ಅಮ್ಮಗಳಿರಾ! ನಿಮ್ಮಿಬ್ಬರ ಅಂಶಗಳಿಂದ ಅವತರಿಸಿದ ಈ ಮಗು ಪಾರ್ವತಿಯ ಗುರುತಿಗಾಗಿ ಜಯಳೆಂದೂ, ಲಕ್ಷ್ಮೀದೇವಿಯ ಗುಗುತಿಗಾಗಿ ಶ್ರೀ ಎಂದೂ ಕೂಡಿ ಜಯಶ್ರೀ ಎನಿಸಿ ಬೆಳೆಯುವಳು. ಇವಳಿಗ ತಕ್ಕ ವರನು ಕೂಡಾ ಶಿವಕೇಶವರ ಅಂಶಗಳಿಂದಲೇ ಅವತರಿಸಿದ್ದಾನೆ" ಎಂದನು. ಆಮೇಲೆ ವಿಘ್ನೇಶ್ವರನು ವಾಯುವನ್ನು ಕರೆದು, ಶಿಶಿವಿನೊಂದಿ

೧೧. ವಿಘ್ನೇಶ್ವರನ ಲೀಲೆಗಳು



ಗಿರುವ ಸ್ವರ್ಣಕಮಲವನ್ನು ಕಾವೇರೀನದಿಯತೀರದಲ್ಲಿ ಬಿಟ್ಟುಬರುವಂತೆ ಹೇಳಿದನು.

ವಾಯುದೇವನು ಆ ಸ್ವರ್ಣಕಮಲವನ್ನು ಕಾವೇರಿನದಿಯಲ್ಲಿ ಸೇರಿಸಿ ಹೊರಟುಹೋದನು.

ಆಗ ದಕ್ಷಿಣಪ್ರಾಂತವನ್ನು ಪಾಲಿಸಿಕೊಂಡಿದ್ದ ಮಹಾರಾಜನು ಕಾವೇರೀ ನದಿಯಲ್ಲಿ ತೇಲಿ ಬರುವ ಸ್ವರ್ಣಕಮಲವನ್ನೂ, ಅದರ ನಡುವಿನಲ್ಲಿದ್ದ ಮುದ್ದಾದ ಮಗುವನ್ನೂ ನೋಡಿ ಎತ್ತಿಕೊಂಡನು. ಮಕ್ಕಳಿಲ್ಲದ ತನಗೆ ವರಪ್ರಸಾದವಾಗಿ ಈ ಮಗು ದೊರಕಿತೆಂದು ಸಂತೋಷದಿಂದ, ಭಾರಿವೈಭವದಿಂದ ನಾಮಕರಣ ಮಹೋತ್ಸವವನ್ನು ಪ್ರಾರಂಭಿಸಿದನು. ಮೊದಲು ವಿಘ್ನೇಶ್ವರ ಪೂಜೆಮಾಡಿದಕೂಡಲೇ, "ರಾಜಾ! ನಿನ್ನ ಮಗಳಿಗೆ ಜಯಶ್ರೀ ಎಂದು ಹೆಸರಿಡು!" ಎಂದು ಅಶರೀರವಾಣಿಯಾಯಿತು.

ಹೀಗೆ ಬೆಳೆಯುವ ಜಯಶ್ರೀ ರಾಜಕುಮಾರಿ ಮೂರುಲೋಕಗಳಲ್ಲಿಯೂ ಸೌಂದರ್ಯದಲ್ಲಿ ಸಾಟಿಯಿಲ್ಲದವಳೆನಿಸಿದಳು. ಅದರ ಮೇಲೆ ವೀರಳೂ ಧೀರಳೂ ಆದ ಜಯಶ್ರೀ ಕುಮಾರಿಗೆ ರಾಜಭವನ ದೊಳಗಿರುವುದಕ್ಕಿಂತಲೂ, ಪ್ರಕೃತಿ ಸೌಂದರ್ಯ ಗಳೊಂದಿಗೆ ತುಂಬಿರುವ ಅರಣ್ಯಗಳಲ್ಲಿ ವಿಹರಿಸುವುದೇ ಇಷ್ಟವಾಗಿತ್ತು. ಅವಳು ಬಿಲ್ಲು ಬಾಣಗಳನ್ನು ಧರಿಸಿ ಕೊಂಡು ಅಡವಿಗಳಲ್ಲಿ ವಿನೋದವಾಗಿ ವನ್ಯಮೃಗ ಗಳನ್ನು ವಶಪಡಿಸಿಕೊಂಡು ಲಲ್ಲೆಯಾಡುತ್ತ ವಿಹರಿಸಿ ಕೊಂಡಿದ್ದಳು.

ಹರಿಹರಾಂಶದಿಂದ ಅವತರಿಸಿದ ಭೈರವಸ್ವಾಮಿ ಕೈಲಾಸಕ್ಕೆ ಹೋಗಿ, ವಿಘ್ನೇಶ್ವರನನ್ನೂ, ಕುಮಾರ ಸ್ವಾಮಿಯನ್ನೂ ನೋಡಿಬರಬೇಕೆಂದು ಬಹಳ ಕಾಲದಿಂದ ಅಂದುಕೊಂಡಿದ್ದನು. ಒಂದು ದಿನ ಒಳ್ಳೆಯ ಸಮಯನೋಡಿ ಭೈರವಸ್ವಾಮಿ ಕೈಲಾಸಕ್ಕೆ ಹೋಗಿ, ವಿಘ್ನೇಶ್ವರನೊಂದಿಗೂ, ಕುಮಾರಸ್ವಾಮಿ ಯೊಂದಿಗೂ ಮನದಣಿಯೆ ಮಾತಾಡುತ್ತ ಅವ ರೊಂದಿಗೆ ತಿರುಗಾಡಿದನು. ಮೂವರೂ ಮಾನಸ ಸರೋವರದಲ್ಲಿ ಜಲವಿಹಾರ ಮಾಡತೊಡಗಿದರು. ಆಗ ವಿಘ್ನೇಶ್ವರನು "ಈ ಮಾನಸಸರೋವರದಲ್ಲಿಯೇ ಲಕ್ಷ್ಮೀಪಾರ್ವತಿಯರ ತೇಜಸ್ಸಿನಿಂದ ನಮ್ಮ ಅಣ್ಣ ಸ್ವಾಮಿಗೆ ತಕ್ಕ ಒಬ್ಬಳು ಶ್ರೀಮತಿ ಉದಯಿ ಸಿದ್ದಾಳೆ!" ಎಂದು ಹೇಳಿ ಸುಮ್ಮನಾದನು.

ಭೈರವಸ್ವಾಮಿಗೆ ಏನೋ ಕುತೂಹಲವೆನಿಸಿದರೂ, ಅಡಗಿಸಿಕೊಂಡು ಕೆಲವು ದಿನ ಕೈಲಾಸದಲ್ಲಿದ್ದು, ಹೊರಟುಹೋಗಲು ಸಿದ್ಧನಾದನು. ಆಗ ವಿಘ್ನೇಶ್ವರನು, "ಭೈರವಣ್ಣಾ! ನಮಗಿಂತ ದೊಡ್ಡವ ನಾದ ನೀನು ಮಹಾಸ್ವಾಮಿಯಾಗಿದ್ದು ಹೀಗೆ ಬ್ರಹ್ಮ ಚಾರಿ ಯಾಗಿರುವುದು ಎಷ್ಟು ಮಾತ್ರಕ್ಕೂ ಚೆನ್ನಾಗಿಲ್ಲ. ಬೇಗದಲ್ಲೇ ನಿನಗೆ ಕಲ್ಯಾಣವಾಗುತ್ತದೆ!" ಎಂದನು.

ವಿಘ್ನೇಶ್ವರನೂ ಕುಮಾರಸ್ವಾಮಿಯೂ ಭೈರವ ಸ್ವಾಮಿಯನ್ನು ಗೌರವದಿಂದ ಕಳುಹಿಸಿಕೊಟ್ಟರು. ಸ್ವಾಮಿ ತನ್ನ ನಿವಾಸದ ಕಡೆಗೆ ಬಂದು ಸೇರಿದನು.

ಒಂದುದಿನ ಭೈರವಸ್ವಾಮಿ ವಿನೋದವಾಗಿ ದೊಡ್ಡದೊಂದು ಹುಲಿಯ ಮೇಲೆ ಆರೋಹಿಸಿ ಅರಣ್ಯದೊಳಗೆ ಸವಾರಿಮಾಡಿಕೊಂಡು ತಿರುಗುವಾಗ, ಇದ್ದಕ್ಕಿದ್ದ ಹಾಗೆ ಅವನ ಹುಲಿಗೆ ಕದಲಲಾಗದಂತೆ ಸುತ್ತಲಿಂದಲೂ ರಿವ್ವರಿವ್ವನೆ ಬಾಣಗಳು ಬಂದು ನೆಲದಲ್ಲಿ ನಾಟಿದುವು. ಆ ಬಾಣಗಳು ಬರುವ ದಿಕ್ಕನ್ನು ಕೋಪದಿಂದ ನೋಡಿದನು ಭೈರವಸ್ವಾಮಿ. ಆ ದೃಶ್ಯವು ಕಣ್ಣಿಗೆ ಬಿದ್ದಕೂಡಲೇ ಅವನ ಕೋಪವು ಚೂರುಚೂರಾಗಿ ಹಾರಿಹೋಯಿತು. ಬಿಲ್ಲು ಬಾಣಗಳೊಂದಿಗೆ ಠೀವಿಯೂ ಒಯ್ಯಾರವೂ ಕಲೆತು, ಮುಗುಳುನಗುವಿನ ಸುಂದರೀಮಣಿಯನ್ನು ನೋಡಿ ಭೈರವಸ್ವಾಮಿ ದಂಗುಬಡಿದವನಾದನು. ತನ್ನ ಎದೆಯಲ್ಲಿ ಚುಚ್ಚಿಕೊಂಡ ಹೂಬಾಣಗಳ ಆವೇದನೆಯೊಂದಿಗೆ ಭೈರವಸ್ವಾಮಿ ಅಂತರ್ಧಾನನಾದನು.

ಈ ಸ್ವಾಮಿಯನ್ನು ಕುರಿತು ಜಯಶ್ರೀಗೆ ಈ ಮೊದಲೇ ವಿಘ್ನೇಶ್ವರನು ಕನಸಿನಲ್ಲಿ ಹೇಳಿದ್ದನು. ಅವಳು ತನ್ನ ಸ್ವಪ್ನ ಪುರುಷನನ್ನು ಹುಡುಕುತ್ತಾ ಅರಣ್ಯದಲ್ಲಿ ಸುತ್ತುತ್ತಿದ್ದಳು. ಅವಳ ಕಲ್ಯಾಣದ ಮುಂದಿನ ಕಾರ್ಯಗಳು ಒಂದರ ಮೇಲೊಂದಾಗಿ ನಡೆಯ ತೊಡಗಿತು. ನಾರದನ ಆದೇಶದಂತೆ ಚಕ್ರವರ್ತಿ, ಜಯಶ್ರೀಗೆ ಸ್ವಯಂವರವನ್ನು ಏರ್ಪಡಿಸಿದನು. ರಾಜಾಧಿರಾಜರೆಲ್ಲರೂ ಸುಂದರಾತಿಸುಂದರವಾದ ವೇಷಭೂಷಣ ಅಲಂಕಾರಗಳೊಂದಿಗೆ ಸ್ವಯಂವರ ಮಂಟಪವನ್ನು ಅಲಂಕರಿಸಿದರು. ಇಂದ್ರಾದಿ ದೇವತೆಗಳು ಕೂಡಾ ವೇಷ ಬದಲಾಯಿಸಿಕೊಂಡು ಬಂದಿದ್ದರು. ಭೈರವ ಸ್ವಾಮಿ ಒಬ್ಬ ಕಪ್ಪು ಶಬರ ಯುವಕನ ರೂಪದಲ್ಲಿ, ಬಿಲ್ಲು ಬಾಣಗಳನ್ನು ಧರಿಸಿಕೊಂಡು ದೊಡ್ಡದೊಂದು ಕಪ್ಪು ನಾಯಿಯನ್ನು ತನ್ನೊಂದಿಗೆ ಕರೆದುಕೊಂಡು ಸ್ವಯಂವರ ಮಂಟಪವನ್ನು ಪ್ರವೇಶಿಸಿದನು.

ಅದನ್ನು ನೋಡಿ ರಾಜಾಧಿರಾಜರುಗಳು ಆ ಶಬರ ಯುವಕನನ್ನೂ ನಾಯಿಯನ್ನೂ ಎಗತಾಳೆ ಮಾಡಿ ನೆಗಾಡಿದರು. ತಮ್ಮ ನಡುವೆ ಕುಳಿತುಕೊಳ್ಳಲು ಅವನಿಗೆ ಆಸನ ಕೊಡಲು ಯಾರೂ ಒಪ್ಪಲಿಲ್ಲ.





ಆತನ ಬಾಣ ಪ್ರಯೋಗ ಪರಂಪರೆಗಳ ವೇಗ ದಿಂದ ದೇವತೆಗಳೇ ಚೆಲ್ಲಾ ಚೆದರಾಗಿ ಹೋದಮೇಲೆ ಉಳಿದವರ ಸಂಗತಿ ಹೇಳಬೇಕೆ? ಯಾವ ಆಯುಧ ಗಳೂ ಅವನ ಶರೀರವನ್ನು ತಾಗಲಿಲ್ಲ. ಇಂದ್ರನ ವಜ್ರಾಯುಧವೂ ಸಪ್ಪಗಾಯಿತು. ಆಗ ಸ್ವಾಮಿ ತನ್ನ ನಿಜರೂಪದಿಂದ ಹರಿಹರ ಸ್ವಾಮಿಯಾಗಿ ಸಾಕ್ಷಾತ್ಕರಿಸಿದನು. ಅದನ್ನು ನೋಡಿ ದೇವತೆಗಳು ಕೂಡಾ "ಶರಣಂ ಸ್ವಾಮಿ!" ಎಂದು ಕೈ ಜೋಡಿಸಿ, ಅವನತಶಿರರಾದರು.

ಅನಂತರ ಎಲ್ಲಾ ಶಾಂತವಾಗಿ ಜಯಶ್ರೀ ಸ್ವಾಮಿ ಯರ ವಿವಾಹವು ದೇವತೆಗಳ ನಡುವೆ ಅತಿ ವೈಭವ ದಿಂದ ನಡೆಯಿತು. ಎಲ್ಲಾ ಆದ ಮೇಲೆ ಸ್ವಾಮಿ ಜಯಶ್ರೀಯೊಂದಿಗೆ ನಿಜ ನಿವಾಸಕ್ಕೆ ಹೊರಟು ಹೋದನು.

* * *

ಭೈರವ ಸ್ವಾಮಿ ಸಿಂಹ ದ್ವಾರಕ್ಕೆ ಅಡ್ಡವಾಗಿ, ಎಲ್ಲರನ್ನೂ ಕಾರಾಗೃಹದಲ್ಲಿ ಬಂಧಿಸಿ ಹಾಕಿದ ಹಾಗೆ ತನ್ನ ನಾಯಿಯ ಮೇಲೆ ಕುಳಿತನು. ಆ ಕೂಡಲೇ ಕರಿ ನಾಯಿ ಹೆಬ್ಬುಲಿಯಾಗಿ ಬದಲಾಯಿಸಿ ಭಯಂಕರ ವಾಗಿ ಒಂದು ಗಾಂಭ್ರಿಕೆ ಹಾಕಿತು, ಎಲ್ಲರ ಎದೆಗಳೂ ಜುಮ್ಮೆನ್ನುವ ಹಾಗೆ! ವರಮಾಲೆಯೊಂದಿಗೆ ಸಿದ್ಧ ಳಾಗಿದ್ದ ಜಯಶ್ರೀ ಆತನ ಗುರುತು ಹಿಡಿದು, ಬಿಟ್ಟ ಬಾಣದ ಹಾಗೆ ಅವನ ಬಳಿಗೆ ಹೋಗಿ ಸ್ವಾಮಿಯ ಕೊರಳಿಗೆ ಮಾಲೆ ಹಾಕಿದಳು. ಮರುಕ್ಷಣದಲ್ಲಿ ಸ್ವಾಮಿ ಜಯಶ್ರೀಯನ್ನು ಹುಲಿಯ ಮೇಲೆತ್ತಿ ತನ್ನ ಮುಂದೆ ಕೂಡಿಸಿಕೊಂಡು ಹುಲಿಯ ಬೆನ್ನು ತಟ್ಟಿ ಆಜ್ಞೆ ಮಾಡಿದನು. ಅದನ್ನು ನೋಡಿ, ದೇವತೆ ಗಳಿಗೂ ಅಲ್ಲಿ ಸೇರಿದ ರಾಜರಿಗೂ ಕೋಪ ಬಂದಿತು. ಎಲ್ಲರೂ ಕೂಡಿ ಆಯುಧಗಳನ್ನೆತ್ತಿ ಶಬರ ಯುವಕನ ಮೇಲೆ ಮುಗಿಬಿದ್ದರು. ಭೈರವ ಸ್ವಾಮಿ ಬಿಲ್ಲಂಬು ಗಳೊಂದಿಗೆ ತನ್ನ ಕೈ ಚಳಕಕ್ಕೆ ತೊಡಗಿದನು.

ಹಿಂದೆ ತ್ರೇತಾ ಯುಗದ ಕಾಲದಲ್ಲಿ ಆರ್ಯಾವರ್ತ ದೊಳಗೆ ಕೋಸಲ, ಕೇಕಯ, ವಸುಮಿತ್ರರೆಂಬ ಮೂವರು ಮಹಾರಾಜರು ಆಪ್ತ ಮಿತ್ರರಾಗಿದ್ದರು. ಕೋಸಲನಿಗೆ ಕೌಸಲ್ಯೆ, ಕೇಕಯನಿಗೆ ಕೈಕೇಯಿ, ವಸು ಮಿತ್ರನಿಗೆ ಸುಮಿತ್ರ ಎಂಬ ಹೆಸರಿನ ಕುಮಾರಿಯ ರಿದ್ದರು. ಅಯೋಧ್ಯೆಯನ್ನು ಪಾಲಿಸುವ ದಶರಥ ಕುಮಾರನಿಗೆ ತಮ್ಮ ಕುಮಾರಿಯರನ್ನು ಕೊಟ್ಟು ಮದುವೆ ಮಾಡಬೇಕೆಂದು ಮೂವರು ರಾಜ ರೊಳಗೂ ಏಕಾಭಿಪ್ರಾಯ ಉಂಟಾಯಿತು. ದಶರಥನೂ ತನ್ನ ಅಂಗೀಕಾರವನ್ನು ತಿಳಿಸಿದನು.

ಮೂವರು ರಾಜರೂ ಜೈಮಿನಿ ಮಹರ್ಷಿಯಿಂದ ವಿವಾಹಕ್ಕೆ ಮುಹೂರ್ತವಿಡಿಸಿದರು. ಜೈಮಿನಿ ಒಂದು ಮುಹೂರ್ತವನ್ನು ಆರಿಸಿ ಹೇಳಿ, "ನಾನು ಇಟ್ಟ ಈ ಮುಹೂರ್ತದ ಬಲ ಎಂತಹುದೆಂದರೆ, ವಿಘ್ನೇಶ್ವರನ ಸಾಕ್ಷಿಯಾಗಿ ವಿಘ್ನಗಳು ಬಂದರೂ ಸಹಾ ಪರಿಹರಿಸಿಕೊಂಡು ದಶರಥನೊಂದಿಗೆ ವಿವಾಹ



ವಾಗಿ ತೀರುತ್ತದೆ ! ನಾನು ಹೇಳಿದಂತೆ ವಿವಾಹ ನಡೆಯುವ ಮೊದಲು ರಾಕ್ಷಸ ಗಂಡವು ಅಡ್ಡ ಬರುತ್ತದೆ. ಮೂವರು ಕುಮಾರಿಯರನ್ನೂ ಜಾಗರೂಕತೆಯಿಂದ ನೋಡಿಕೊಳ್ಳಬೇಕಾದುದು ಮುಖ್ಯ" ಎಂದು ಹೇಳಿದನು.

ಅದನ್ನು ಕೇಳಿ ಮೂವರು ರಾಜರೂ ತಮ್ಮ ಕುಮಾರಿಯರನ್ನು ದೊಡ್ಡದೊಂದು ಪೆಟ್ಟಿಗೆಯೊಳಗೆ ಅಡಗಿಸಿಟ್ಟರು.

ಆಗ ತ್ರಿಕಾಲಜ್ಞಾನಿ ನಾರದನು ರಾವಣನ ಬಳಿಗೆ ಹೋಗಿ " ನೋಡಿದೆಯಾ ಲಂಕೇಶ್ವರಾ ! ದಶರಥನಿಗೆ ವಿವಾಹ ನಿಶ್ಚವಾಯಿತು. ಅವನ ಕುಮಾರನೇ ನಿನ್ನನ್ನು ಹತಮಾಡುವವನಾಗುತ್ತಾನೆ. ಯಾವುದಕ್ಕೂ ಎಚ್ಚರಿಕೆಯಾಗಿರು !" ಎಂದು ಎಚ್ಚರಿಕೆ ಕೊಟ್ಟು ಹೊರಟುಹೋದನು.

ರಾವಣನು ಆ ಮೂವರು ರಾಜಕುಮಾರಿಯರನ್ನೂ ಎತ್ತಿಕೊಂಡು ಬರುವಂತೆ ಹೇಳಿ ಮಹೋದರನೆಂಬ ಬಲು ದೊಡ್ಡ ರಾಕ್ಷಸನನ್ನು ಕಳುಹಿಸಿದನು. ಮಹೋದರನು ಅಲ್ಲಿಗೆ ಹೋಗಿ ಪೆಟ್ಟಿಗೆಯೊಳಗೆ ಆ ಕನ್ಯೆಯರಿರುವುದನ್ನು ತಿಳಿದು, ಆ ಪೆಟ್ಟಿಗೆಯನ್ನೇ ನುಂಗಿ ಆಕಾಶಮಾರ್ಗದಲ್ಲಿ ಹಿಂದಿರುಗಿದನು. ಅವನು ಸಮುದ್ರದ ಮೇಲಿಂದಾಗಿ ಲಂಕೆಗೆ ಸಾಗುತ್ತಿದ್ದಾಗ, ಅವನಿಗೆ ತಾಳಲಾಗದಷ್ಟು ಹೊಟ್ಟೇ ನೋವು ಶುರುವಾಯಿತು. ಕೂಡಲೇ ಹೊಟ್ಟೆಯನ್ನು ಹಿಚಿಕಿ, ನುಂಗಿದ ಪೆಟ್ಟಿಗೆಯನ್ನು ಹೊರಗೆ ಕಕ್ಕಿಬಿಟ್ಟನು.

ಆ ಪೆಟ್ಟಿಗೆ ಸಮುದ್ರದಲ್ಲಿ ಬಿದ್ದು ತೆರೆಗಳಲ್ಲಿ ಕುಣಿಯುತ್ತಾ ಹೋಗುತ್ತಿದ್ದಿತು. ದಶರಥನು ಸಮುದ್ರದ ಮೇಲೆ ಎಲ್ಲಿಗೋ ಹೋಗಿ ನೌಕೆಯಲ್ಲಿ ಹಿಂದಿರುಗುತ್ತಿದ್ದನು. ವಿವಾಹದ ಮುಹೂರ್ತಕ್ಕೆ ಸರಿಯಾಗಿ ತಾನು ಊರಿಗೆ ಸೇರುವೆನೋ ಇಲ್ಲವೋ ಎಂಬ ಆತುರದಲ್ಲಿ ಅವನಿದ್ದನು. ಅವನು ಸಮುದ್ರವನ್ನು ನೋಡುತ್ತ ನಾವಿಕರನ್ನು ಅವಸರಪಡಿಸುತ್ತಿದ್ದಾಗ, ನೌಕೆಯ ಕಡೆಗೇ ಹೊಡೆದುಕೊಂಡು ಬರುವ ದೊಡ್ಡ ಪೆಟ್ಟಿಗೆಯನ್ನು ನೋಡಿದನು. ಅಷ್ಟರಲ್ಲಿ ಆ ಪೆಟ್ಟಿಗೆ ನೌಕೆಗೆ ಅಪ್ಪಳಿಸಿ, ಅದರ ಮೇಲ್ಮುಚ್ಚಳವು ಕಳಚಿಬಿತ್ತು, ಒಳಗಿದ್ದ ಮೂವರು ಕುಮಾರಿಯರನ್ನು ನೋಡಿದ ಕೂಡಲೇ, ತಾನು ವಿವಾಹವಾಗಲಿರುವ ಕನ್ಯೆಯರು ಇವರೇ ಎಂದು ದಶರಥನಿಗೆ ಗೊತ್ತಾಯಿತು. ಜೈಮಿನಿ ಇಟ್ಟ ಮುಹೂರ್ತವೂ ಆಗಲೇ ಬಂದೂ ಬಿಟ್ಟಿತ್ತು. ಅಷ್ಟರೊಳಗೆ ನಾವಿಕರು ಆ ಮೂವರು ಕುಮಾರಿಯರನ್ನೂ ನೌಕೆಗೆ ಎತ್ತಿಕೊಂಡಿದ್ದರು. ಇದ್ದಕ್ಕಿದ್ದ ಹಾಗೆ ವಿಘ್ನೇಶ್ವರನು ಅಲ್ಲಿ ಪ್ರತ್ಯಕ್ಷನಾದನು. ದಶರಥನ ವಿವಾಹವು ಆ ಕುಮಾರಿಯರೊಂದಿಗೆ ವಿಘ್ನೇಶ್ವರನ ಪೌರೋಹಿತ್ಯದಲ್ಲೇ ನಡೆಯಿತು. ಆಮೇಲೆ ವಿಘ್ನೇಶ್ವರನು ಅಂತರ್ಧಾನನಾದನು. ದಶರಥನು ಮೂವರು ವಧುಗಳೊಂದಿಗೆ ಸಂತೋಷವಾಗಿ ಸ್ವದೇಶವನ್ನು ಸೇರಿದನು. ಮದುವೆಯಾಗಿ ಬಹಳಕಾಲದವರೆಗೆ ಮಕ್ಕಳಿಲ್ಲದೆ ಕಳೆದ ಮೇಲೆ,



ದಶರಥನಿಗೆ ನಾಲ್ಕುಮಂದಿ ಕುಮಾರರು ಹುಟ್ಟಿದರು. ಹಿರಿಯನಾದ ರಾಮನು ಕೈಕೇಯಿಯ ಕಾರಣದಿಂದ ಪತ್ನಿ ಸೀತೆ ಮತ್ತು ತಮ್ಮ ಲಕ್ಷ್ಮಣನೊಂದಿಗೆ ಅರಣ್ಯವಾಸಕ್ಕೆ ಹೋದನು. ರಾವಣನು ಸೀತೆಯನ್ನು ಲಂಕೆಗೆ ಅಪಹರಿಸಿಕೊಂಡು ಹೋದನು. ರಾಮನು ಹನುಮಂತ, ಸುಗ್ರೀವ ಮೊದಲಾದ ವಾನರರ ಸಹಕಾರದಿಂದ ಲಂಕೆಯನ್ನು ಮುತ್ತಿಗೆ ಹಾಕಿ ರಾವಣನನ್ನು ಸಂಹಾರಮಾಡಿದನು. ಆಮೇಲೆ ಸೀತೆಯೊಂದಿಗೆ ಪುಷ್ಪಕ ವಿಮಾನದಲ್ಲಿ ಹೊರಟು, ತೆಂಕು ಸಮುದ್ರತೀರದಲ್ಲಿ ನಿಂತು, ಸೇತುವೆ ಕಟ್ಟಲು ಅನುಮತಿ ಕೊಟ್ಟ ಆ ಸಮುದ್ರ ತೀರದಲ್ಲಿ ಶಿವಪೂಜೆ ಮಾಡಿ, ಅಯೋಧ್ಯೆಗೆ ಹೋಗಬೇಕೆಂದು ರಾಮನು ನಿಶ್ಚಯಿಸಿದನು.

ರಾಮನು ಹನುಮಂತನನ್ನು ಕರೆದು, ಪ್ರತಿಷ್ಠೆಗೆ ತಕ್ಕುದಾದ ಒಂದು ಶಿವಲಿಂಗವನ್ನು ತರುವಂತೆ ಹೇಳಿ ಅವನನ್ನು ಕೈಲಾಸಕ್ಕೆ ಕಳುಹಿಸಿದನು. ಹನುಮಂತನು ಮನೋವೇಗದಿಂದ ಕೈಲಾಸವನ್ನು ಸೇರಿ, ಅಲ್ಲಿರುವ ಲಿಂಗಗಳಲ್ಲಿ, ದೊಡ್ಡ ಲಿಂಗವನ್ನು ನೋಡಿ ಎರಡು ಕೈಗಳಿಂದಲೂ ಎತ್ತಲು ಪ್ರಯತ್ನಿಸಿದನು. ಆ ಲಿಂಗವು ಸ್ವಲ್ಪವೂ ಕದಲಲಿಲ್ಲ. ಅದಕ್ಕಿಂತ ಚಿಕ್ಕಲಿಂಗವನ್ನು ಕದಲಿಸಲು ನೋಡಿದನು. ಅದು ಕೂಡಾ ಕದಲಲಿಲ್ಲ. ಕಡೆಗೆ ಎಲ್ಲದಕ್ಕಿಂತ ಚಿಕ್ಕಲಿಂಗವನ್ನು ಕೂಡಾ ಕದಲಿಸಲು ಹನುಮಂತನಿಂದಾಗಲಿಲ್ಲ.

ಸುಮ್ಮನೆ ಕಾಲ ಹರಣ ವಾಗುವುದನ್ನು ನೋಡಿ. ಹನುಮಂತನು ತನ್ನ ಅಸಮರ್ಥತೆಗಾಗಿ ಚಿಂತಿಸಿಕೊಂಡಿರುವಾಗ, ಒಬ್ಬ ಹುಡುಗನು ಗುಡುಗುಡು ಓಡುತ್ತ ಅವನ ಬಳಿಗೆ ಬಂದನು. "ಯಾರೋ ನೀನು? ನೋಡಿದರೆ ನಮ್ಮ ಹನುಮಂತನ ಹಾಗಿದ್ದರೂ ನೀನು ಅವನಲ್ಲ!" ಎಂದನು ಆ ಹುಡುಗ.

"ನಾನು ಹನುಮಂತನೇ ಅಪ್ಪಾ! ಒಂದು ಶಿವಲಿಂಗವನ್ನು ತಾರೆಂದು ಹೇಳಿ ಶ್ರೀರಾಮನು ನನ್ನನ್ನು ಕಳುಹಿಸಿದನು. ಹೌದು, ನೀನಾರೋ ಹುಡುಗಾ?" ಎಂದು ಕೇಳಿದನು ಹನುಮಂತ.

"ಇಲ್ಲಿರುವ ಲಿಂಗಗಳನ್ನು ಯಾರೂ ಎತ್ತಿಕೊಂಡು ಹೋಗದಂತೆ ನನ್ನನ್ನು ಕಾವಲಿಗಿಟ್ಟಿದ್ದಾರೆ. ನೀನು ಹನುಮಂತನೆಂದು ಹೇಳುವುದರಿಂದ, ಒಂದು ವಿಷಯ ಕೇಳುತ್ತೇನೆ. ಹನುಮಂತನು ಶಿವನ ಅವತಾರವೆಂದೂ, ಅವನಿಗೆ ಐದು ಮುಖಗಳಿವೆಯೆಂದೂ ಕೇಳಿದ್ದೇನೆ. ನಿನ್ನ ಪಂಚಮುಖಗಳನ್ನು ತೋರಿಸು ನೋಡುವಾ" ಎಂದನು ಹುಡುಗ.

"ನೋಡಪ್ಪ!" ಎಂದು ಹನುಮಂತನು ಗರುಡ, ವರಾಹ, ಸಿಂಹ, ಅಶ್ವಗಳ ಮುಖಗಳೊಂದಿಗೆ ಮಹೋನ್ನತನಾಗಿ ಬೆಳೆದು ಪಂಚಮುಖಾಂಜನೇಯನಾಗಿ ನಿಂತು, ಹುಡುಗನನ್ನು ನೋಡಿ, "ವಿಘ್ನೇಶ್ವರಾ! ಇನ್ನು ನಿನ್ನ ಸರದಿ!" ಎಂದನು.

ಬಾಲನ ರೂಪದಲ್ಲಿದ್ದ ವಿಘ್ನೇಶ್ವರನು ಐದು ತಲೆಗಳೊಂದಿಗೆ ಹನುಮಂತನ ಸಮಾನ ಎತ್ತರಕ್ಕೆ

ಬೆಳೆದು ತನ್ನ ವಿಶ್ವರೂಪವನ್ನು ತೋರಿಸಿದನು. ಹನುಮಂತನು ಪಂಚಮುಖಿಗಳ ವಿಘ್ನೇಶ್ವರನಿಗೆ ನಮಸ್ಕಾರಮಾಡಿ, "ನೀನು ಬಾಲನ ರೂಪದಲ್ಲಿರುವಾಗಲೇ ನಿನ್ನ ಗುರುತು ಹಿಡಿದೆನು. ಶಿವಲಿಂಗಗಳು ಕದಲದಂತೆ ಮಾಡಿದವನು ನೀನು ತಾನೆ? ಈಗ ನೀನೇ ಒಂದು ಲಿಂಗವನ್ನು ಪ್ರಸಾದಿಸು" ಎಂದನು.

"ಹನುಮಾ! ನಿನ್ನ ಪಂಚಮುಖರೂಪವನ್ನು ನೋಡಬೇಕೆಂತಲೇ ಹೀಗೆಮಾಡಿದೆ. ನೀನು ಶಿವಾಂಶದಿಂದ ಹುಟ್ಟಿದವನು. ನಿನಗೆ ಅಡ್ಡಿ ಏನಿದೆ? ಆದರೂ ನೀನಾಗಿ ಕೇಳಿದುದರಿಂದ ವಿಶೇಷಾಂಶಗಳಿರುವ ಶಿವಲಿಂಗವನ್ನೇ ನಿನಗಾಗಿ ಆರಿಸಿಟ್ಟಿದ್ದೇನೆ. ತೆಗೆದುಕೊಂಡು ಹೋಗು" ಎಂದು ಹೇಳಿ ವಿನಾಯಕನು ಹನುಮಂತನ ಜೋಡಿಸಿದ ಅಂಗೈಯಲ್ಲಿ ದೊಡ್ಡದೊಂದು ಜ್ಯೋತಿರ್ಲಿಂಗವನ್ನು ಇರಿಸಿದನು.

ಹನುಮಂತನು ಆ ಜ್ಯೋತಿರ್ಲಿಂಗವನ್ನು ಅಂಜಲಿಯಲ್ಲಿ ಹಿಡಿದುಕೊಂಡು, ಸಹಜರೂಪದಿಂದ ಆಕಾಶದಲ್ಲಿ ಹಾರುತ್ತಾ ರಾಮನ ಬಳಿಗೆ ಬಂದನು. ಆಗಲೇ ಕಾಲಮೀರಿ ಹೋಗಿತ್ತು.

ಲಿಂಗಸ್ಥಾಪನೆಗೆ ನಿರ್ಣಯಿಸಿದ ಕಾಲವು ಮೀರಿ ಹೋಗದಂತೆ ಸೀತಾದೇವಿ ಮರಳಿನಿಂದಲೇ ಶಿವಲಿಂಗವನ್ನು ಮಾಡಿಬಿಟ್ಟಿದ್ದಳು. ರಾಮನು ಅದಕ್ಕೆ ಅಭಿಷೇಕಮಾಡಿ ಪೂಜೆಗೆ ಉಪಕ್ರಮಿಸುವಾಗ ಹನುಮಂತನು ಜ್ಯೋತಿರ್ಲಿಂಗದೊಂದಿಗೆ ಅಲ್ಲಿಗೆ ಬಂದನು. ಹನುಮಂತನು ಅಲ್ಲಿ ನಡೆಯುವುದನ್ನು ನೋಡಿ, ಅಲ್ಲಿರುವ ಸೈಕತಲಿಂಗವನ್ನು ಬಾಲದಿಂದ ಸುತ್ತಿ ಎತ್ತಿ ಹಾಕಲು ನೋಡಿದನು. ಆದರೆ ಆ ಮರಳಿನ ಲಿಂಗಕ್ಕೆ ಏನೂ ಆಗಲಿಲ್ಲ. ಹನುಮಂತನು ಎಷ್ಟು ಬಲವಾಗಿ ಅದನ್ನು ತೆಗೆಯಲು ನೋಡಿದರೂ ಬಾಲಕ್ಕೆ ನೋವಾಯಿತೇ ಹೊರತು ಲಿಂಗಕ್ಕೆ ಏನೂ ಆಗಲಿಲ್ಲ.

ಆಗ ರಾಮನು ಹನುಮಂತನನ್ನು ಶಾಂತಪಡಿಸಿ, "ಹನುಮಾ! ಬುದ್ಧಿವಂತರು ಕೂಡಾ ಒಂದೊಂದು ಸಾರಿ ತಪ್ಪುಮಾಡುವುದುಂಟು. ಎಲ್ಲಾ ಬಲ್ಲ ನೀನೇ ತಿಳಿಯದವನಂತೆ ವರ್ತಿಸುವೆಯಲ್ಲ? ಸೈಕತಲಿಂಗವಾದರೂ ಅದು ಶಿವನ ಗುರುತು ತಾನೇ? ಶಿವನೊಂದಿಗೆ ಆಟವಾಡಲು ಯಾರಿಂದಾದೀತು? ಈಗೇನಾಯಿತು? ನೀನು ತಂದ ಲಿಂಗವನ್ನೂ ಈ ಸೈಕತಲಿಂಗದ ಪಕ್ಕದಲ್ಲೇ ಪ್ರತಿಷ್ಠಿಸಿ ಪೂಜಿಸಿದರಾಯಿತು" ಎಂದನು.

ಹನುಮಂತನು ತಾನು ತಂದ ಲಿಂಗವನ್ನು ಪಕ್ಕದಲ್ಲಿಟ್ಟು ಸಾಷ್ಟಾಂಗ ನಮಸ್ಕಾರಮಾಡಿದನು. ರಾಮನು ಎರಡು ಲಿಂಗಗಳಿಗೂ ಪೂಜೆ ಮಾಡಿ, ಎಲ್ಲರೊಂದಿಗೆ ಪುಷ್ಪಕವನ್ನೇರಿ ಅಯೋಧ್ಯೆಗೆ ಹೊರಟನು.






**ಒಂ**ದುಸಾರಿ ವಿನಾಯಕ ಚೌತಿಯದಿನ, ಪೂರ್ಣಿಮೆಯ ವೇಳೆಯಲ್ಲಿ ವಿಘ್ನೇಶ್ವರನು ಪಶ್ಚಿಮಾಕಾಶವನ್ನು ನೋಡುತ್ತಿದ್ದನು. ತನ್ನ ದಂತದ ಹಾಗೆಯೇ ವಕ್ರವಾಗಿರುವ ರೇಖಾಚಂದ್ರನನ್ನು ನೋಡುತ್ತ, ತನ್ನ ಬೊಜ್ಜನ್ನು ತಡವಿಕೊಂಡು, ಇತ್ತಿಂದತ್ತ ಅತ್ತಿಂದಿತ್ತ ತಿರುಗುತ್ತ ಆ ದಿನದ ಹಬ್ಬದೂಟದ ತನ್ನ ಭುಕ್ತಾಯಾಸವನ್ನು ಪರಿಹರಿಸುತ್ತಿದ್ದನು. ಇಲಿಕೂಡಾ ಅವನ ಹಿಂದೆಯೇ ಓಡಾಡಿಕೊಂಡಿತ್ತು. ಅದಕ್ಕೂ ಭುಕ್ತಾಯಾಸವೇ.

ಚೌತಿಚಂದ್ರನನ್ನು ವಿಘ್ನೇಶ್ವರನ ಸಂಕೇತವೆನ್ನುತ್ತಾರೆ. ವಿಘ್ನೇಶ್ವರನ ನೊಸಲಿನಲ್ಲಿ ಬಿಳಿಯ ಗಂಧದಿಂದ ತಿದ್ದಲ್ಪಟ್ಟ ಬಾಲಚಂದ್ರ ತಿಲಕವು ಆಕಾಶದಲ್ಲಿರುವ ಚೌತಿಚಂದ್ರನ ಪ್ರತಿಬಿಂಬದಂತೆ ಪ್ರಕಾಶಿಸುತ್ತಿತ್ತು. ಫಾಲಚಂದ್ರನೆಂದೂ ಬಾಲಚಂದ್ರನೆಂದೂ ವಿಘ್ನೇಶ್ವರನಿಗೆ ಹೆಸರುಗಳಿವೆ.

ಹೀಗೆ ಎಡತಾಕುವ ವಿಘ್ನೇಶ್ವರನ ಕಾಲಿನ ಹೆಬ್ಬೆರಳಿಗೆ ಒಂದು ಕಲ್ಲು ತಗಲಿ ವಿನಾಯಕನು ಒಮ್ಮೆಗೇ ಬೋರಲು ಬಿದ್ದನು. ಬಿದ್ದ ಕ್ಷಣದಲ್ಲಿಯೇ ಅವನ ಬೊಜ್ಜು ಹೊಟ್ಟೆ ಒಡೆದುಬಿಟ್ಟಿತು. ತಿಂದ ತಿಂಡಿಗಳು ನೆಲದ ಮೇಲೆ ಹೊರಳಿ ಹರಡಿದುವು. ಆ ಕೂಡಲೇ ಅವನ ಇಲಿ ಓಡಿಬಂದು ಅವುಗಳನ್ನು ಆರಿಸಿ ಗಟಗಟನೆ ತಿನ್ನತೊಡಗಿತು.

ಆಕಾಶದಲ್ಲಿ ಕಿರುನಗೆಯಂತೆ ಪ್ರಕಾಶಿಸುವ ಚಂದ್ರನು ಈ ವಿನೋದವನ್ನು ನೋಡಿ ಕಿಟಕಿಟನೆ ನಕ್ಕನು. ದೇವತೆಗಳೆಲ್ಲಾ ಗಾಬರಿಬಿದ್ದು ಓಡಿಬಂದು ಸಮೀಪದಲ್ಲಿದ್ದ ದೊಡ್ಡದೊಂದು ಸರ್ಪದಿಂದ ವಿನಾಯಕನ ಒಡೆದ ಹೊಟ್ಟೆಯನ್ನು ಸೇರಿಸಿ ಬಿಗಿದು ಹೊಲಿದರು.

ಇನ್ನೂ ನಗುತ್ತಿದ್ದ ಚಂದ್ರನನ್ನು ನೋಡಿ ಪಾರ್ವತಿಗೆ ಬಹಳ ಕೋಪಬಂದಿತು. "ವಿನಾಯಕನ ಚೌತಿಯದಿನ ಚಂದ್ರನನ್ನು ನೋಡಿದವರಿಗೆ ವೃಥಾ ಅಪನಿಂದೆ ಬಂದು ಬೀಳಲಿ!" ಎಂದು ಶಪಿಸಿದಳು. ಅಂದಿನಿಂದ ಜನರು ಚೌತಿಯದಿನ ಮಕ್ಕಳನ್ನು ಕೂಡಾ ಚಂದ್ರನು ಕಾಣಿಸದಂತೆ ಎಚ್ಚರಿಕೆಯಿಂದ ನೋಡಿಕೊಳ್ಳ ತೊಡಗಿದರು.

ಗ.ಶಿ. ಕೃಷ್ಣ ವಿನಾಯಕೀಯ



ದ್ವಾಪರಯುಗವು ಬಂದಿತು. ಕೃಷ್ಣನು ದೇವಕೀ ವಸುದೇವರ ಮಗನಾಗಿ ಸೆರೆಮನೆಯೊಳಗೆ ಹುಟ್ಟಿ, ಗೋಕುಲಕ್ಕೆ ಒಯ್ಯಲ್ಪಟ್ಟು, ಯಶೋದೆಯ ಮುದ್ದು ಮಗನಾಗಿ ಬೆಳೆಯುತ್ತ, ಪೂತನಿ, ಶಕಟಾಸುರ, ತೃಣಾವರ್ತ ಮೊದಲಾದ ರಾಕ್ಷಸರನ್ನು ಬಾಲ ಲೀಲೆಗಳಿಂದಲೇ ಕೊಂದನು. ಚೆನ್ನಾಗಿ ಮಾತೂ ಕಲಿತನು- ಎಣೆಯಿಲ್ಲದ ಲೀಲೆ ಕೃಷ್ಣನದು.

ವರ್ಷಾವರ್ಷದಂತೆ ವಿನಾಯಕಚೌತಿ ಬಂದಿತು. ಯಶೋದೆ ಹಾಲು ಹಿಂಡುತ್ತಿದ್ದಳು. ಕೃಷ್ಣನು ಯಶೋದೆಯ ಬೆನ್ನಿನಮೇಲೆ ಒರಗಿ ಬಾಗಿ, ಪಾತ್ರದ ಹಾಲಿನಲ್ಲಿ ಪ್ರತಿಬಿಂಬಿಸಿದ ರೇಖಾಚಂದ್ರನನ್ನು ನೋಡಿ. "ಚಂದಮಾಮ! ಚಂದಕ್ಕಿಮಾಮಾ! ಚಂದೊಳ್ಳೇಮಾಮಾ! ಚಂದಮಾಮ ಹಾಲುಮಾಮಾ ಆಗಿ ಕುಡೀತಾ ಇದ್ದಾನೇ!" ಎನ್ನುತ್ತ ಹಾರಿ ಹಾರಿ ಚಪ್ಪಾಳೆ ತಟ್ಟಿದನು. ಯಶೋದೆ ಗಾಬರಿ ಬಿದ್ದಳು. "ಅಯ್ಯೋ! ಎಂಥಾ ಕೆಲಸಮಾಡಿದಿಯೋ ಕೃಷ್ಣಾ! ಇವತ್ತು ಚಂದ್ರನ್ನ ನೋಡಿಬಿಟ್ಟೆಯಾ? ನಿಂಗೆ ವ್ಯಥಾಪನಿಂದೆ ಬರುತ್ತಲ್ಲಪ್ಪಾ!" ಎಂದು ನೊಂದುಕೊಂಡಳು.

"ವ್ಯಥಾಪನಿಂದೆ ಅಂದರೆ ಏನಮ್ಮಾ ಅದು?" ಎಂದು ಕೇಳಿದನು ಕೃಷ್ಣ.

"ಸುಮ್ಮ ಸುಮ್ಮನೆ ನಿನ್ನನ್ನು ಕಳ್ಳಾ ಅನ್ನುತ್ತಾರಪ್ಪಾ" ಎಂದಳು ಯಶೋದೆ.

"ಅದಕ್ಕಾಗಿ ಚಿಂತಿಸಬೇಡಮ್ಮಾ. ನಾನು ಹಾಲು, ಮೊಸರು, ಬೆಣ್ಣೆ ಕದ್ದುಕೊಳ್ಳೇನೆ. ಆಗ ಅದು ವ್ಯಥಾಪವಾದ ಆಗದಪ್ಪೆ?" ಎಂದನು ಕೃಷ್ಣ. ಗೋಪಮ್ಮ ಹುಸಿಗೋಪದಿಂದ ಅವನ ಗಲ್ಲ ಚಿವುಟಿ, "ಏ ಸಿಡಿಲು ಮರೀ! ನಿನ್ನ ಬಾಯೊಳಗೆ ಬ್ರಹ್ಮಾಂಡ ಬೀಳ!" ಎಂದಳು.

"ಬ್ರಹ್ಮಾಂಡ ನೋಡಿದ್ದೀಯೂ ಅಮ್ಮಾ?" ಎಂದು ಹೊಸಪ್ರಶ್ನೆ ಹಾಕಿದನು ಕೃಷ್ಣ.

"ಸಾಕು ಬಾಯಿಮುಚ್ಚು! ಹೀಗೆ ಅಧಿಕಪ್ರಸಂಗಿಯಾದರೆ ದೊಡ್ಡವನಾದ ಮೇಲೆ ನಿನ್ನ ತಲೇಮೇಲೆ ಬೇಡದ್ದೆಲ್ಲಾ ಬಂದು ಬೀಳುತ್ತೆ!" ಎಂದು ಬಾಲ ಕೃಷ್ಣನ ತಲೇಮೇಲೆ ಒಂದು ಮೊಟ್ಟೆಕಾಯಿ ಕುಟ್ಟಿದಳು ಯಶೋದೆ.

"ಸುಮ್ಮನೆ ಯಾಕೆ ಬೀಳುತ್ತೇ? ಆಗ ಮತ್ತೆ ಹೀಗೆಯೇ ಚಂದಮಾಮನ್ನ ನೋಡಬೇಕು, ಅಲ್ಲವೇ ಅಮ್ಮ?" ಎಂದು ಕೇಳಿದನು ಕೃಷ್ಣ.

"ದೊಡ್ಡವನಾದ ಮೇಲೆ ನೋಡಿದರೆ ಮತ್ತೂ ದೊಡ್ಡ ತಪ್ಪು!" ಎಂದು ಯಶೋದೆ ಮನಸ್ಸಿನಲ್ಲಿ, "ವಿಘ್ನೇಶಾ! ಶುಭಾಶುಭ ತಿಳಿಯದ ಹಸುಕಂದ, ನೆರಳು ಮಾತ್ರವೇ ನೋಡಿದ. ಕ್ಷಮಿಸಿಬಿಡು ಸ್ವಾಮಿ!" ಎಂದು ಪ್ರಾರ್ಥಿಸಿಕೊಂಡಳು.

ಮಾರನೇದಿನ ಹುಡುಗರೆಲ್ಲ ಆಡುತ್ತಿದ್ದಾಗ ಬಲರಾಮನು ಗುಡುಗುಡು ಓಡಿಬಂದು, ಯಶೋದೆಯೊಂದಿಗೆ, "ಅಮ್ಮಾ, ತಮ್ಮ ಮಣ್ಣು ತಿನ್ನುತ್ತಾ ಇದ್ದಾನೆ. ಎಷ್ಟು ಹೇಳಿದರೂ ಕೇಳೋದಿಲ್ಲ! ನೀನೇ

ಹೇಳಬೇಕು ಬುದ್ಧಿ. ಸುಳ್ಳಲ್ಲ. ಬೇಕಾದರೆ ಈಗಲೇ ಬಂದು ನೋಡು!" ಎಂದನು. ಯಶೋದೆ ಬಿಟ್ಟದ್ದು ಬಿಟ್ಟು ಹೊರಗೆ ಓಡಿದಳು.

ಕೃಷ್ಣನು ಮಣ್ಣು ಮುದ್ದೆಗಳನ್ನು ಮಾಡಿ ಸಾಲು ಸಾಲಾಗಿ ಇಡುತ್ತಿದ್ದನು. ಯಶೋದೆ ಅವನ ಕಿವಿ ಹಿಡಿದು "ಎಲ್ಲಿ ಬಾಯಿ ತೆರೆ!" ಎಂದಳು ಸಿಟ್ಟಿನಿಂದ.

"ಇಲ್ಲಮ್ಮಾ! ನನ್ನನ್ನು ನಿನ್ನಿಂದ ಪೆಟ್ಟು ತಿನ್ನಿಸಲು ಯಾರೋ ಚಾಡಿ ಹೇಳಿದ್ದಾರೆ. ವೃಥಾಪನಿಂದೆ ಬರುತ್ತದೆ ಅಂತ ನಿನ್ನೆ ತಾನೇ ನೀನು ಹೇಳಿದಿ? ಮಣ್ಣಿನಿಂದ ನಾನು ಉಂಡೆಗಳನ್ನೂ ಲಡ್ಡುಗಳನ್ನೂ ಮಾಡ್ತಾ ಇದ್ದೆ ಅಷ್ಟೇ. ಮಣ್ಣು ಮುದ್ದೆಯಿಂದ ಮಾಡಿದ ವಿನಾಯಕನಿಗೆ ಮಣ್ಣಿನ ತಿಂಡಿಗಳಾದರೇನೇ ನಿಜವಾಗಿಯೂ ತಿನ್ನುತ್ತಾನೆ. ಅಲ್ಲವೇ ಅಮ್ಮ?" ಎಂದನು ಕೃಷ್ಣ.

ಯಶೋದೆ "ತಪ್ಪು ತಪ್ಪು" ಎಂದು ಗಲ್ಲ ಬಡಿದುಕೊಂಡು "ಹಾಗೆಲ್ಲಾ ಹೇಳಬಾರದೋ ಕಂದಾ! ದೊಡ್ಡ ತಪ್ಪು. ಮಣ್ಣಿನಲ್ಲಿ ಮಾಡಿದರೂ ಕಲ್ಲಿನಲ್ಲಿ ಕೆತ್ತಿದರೂ ದೇವರು ದೇವರೇ. ಸ್ವಾಮೀ ವಿನಾಯಕಾ! ಈ ಹುಡುಗನ ಮಾತನ್ನು ಹಿಡಿಕೊಳ್ಳಬೇಡಪ್ಪಾ!" ಎಂದು ಧ್ಯಾನಿಸಿಕೊಂಡಳು.

"ಹಾಗಾದರೆ ಮುಂದಿನ ವಿನಾಯಕ ಚೌತಿಗೆ ಬೆಣ್ಣೇದು ಉಂಡ್ಲಕ, ತುಪ್ಪದಲಡ್ಡು ತುಂಬಾ ಮಾಡಿಬಿಡಮ್ಮಾ. ಎಷ್ಟು ತಿನ್ನುತ್ತಾನೋ ನೋಡಬೇಕು. ತಿನ್ನದೇ ಬಿಟ್ಟರೆ ನಾನೇ ತಿನ್ನಿಸುತ್ತೇನೆ. ಹುಂ" ಎಂದನು ಕೃಷ್ಣ.

"ಹರಟೆ ಸಾಕು! ಮೊದಲು ನಿನ್ನ ಬಾಯಿ ತೋರಿಸು." ಎಂದು ಯಶೋದೆ ಬಗ್ಗಿ ನೋಡಲು, ಕೃಷ್ಣನು "ಆ" ಎಂದು ಬಾಯಿ ಪೂರಾ ತೆರೆದನು.

ಯಶೋದೆ ಹಾಗೆ ನೋಡುತ್ತಾ ಮೂಕವಿಸ್ಮಿತಳಾದಳು. ಅವಳ ಮೈ ಬೆವರುತ್ತಿರಲು ಚಕ್ಕನೆ ಕುಳಿತಳು. ಕೃಷ್ಣನ ಬಾಯಿಯೊಳಗೆ ಬ್ರಹ್ಮಾಂಡ



ಗಳು, ನಕ್ಷತ್ರ ಮಂಡಲಗಳು, ಸೂರ್ಯ ಚಂದ್ರರು, ಸಮುದ್ರಗಳು, ಪರ್ವತಗಳು ಸಮಸ್ತವೂ ಕಂಡು ಬಂದುವು. ಹಸುವಿನ ಹಾಲು ಹಿಂಡುವ ಯಶೋದೆಯು ಬೆನ್ನಿನ ಮೇಲೆ ಬಾಗಿ, ಅವಳ ಕೊರಳನ್ನು ಪುಟ್ಟಕೈಗಳಿಂದ ಬಳಸಿರುವ ಕೃಷ್ಣನು, ಹಾಲಿನ ಪಾತ್ರದಲ್ಲಿ ಚಂದ್ರನನ್ನು ನೋಡುವ ದೃಶ್ಯವನ್ನೂ ಯಶೋದೆ ನೋಡಿದಳು. ಸ್ವಪ್ನವೇನೋ ಎಂದುಕೊಂಡು ತನ್ನನ್ನು ಚಿವುಟಿಕೊಂಡಳು. ಕಣ್ಣು ತಿಕ್ಕಿಕೊಂಡಳು. ತಾನು ನಿದ್ದೆಯಲ್ಲಿ ಸ್ವಪ್ನ ಕಾಣುವುದಲ್ಲ. ಯಾವ ದೇವನೋ, ವಿನಾಯಕನೋ ತನ್ನನ್ನು ಮಾಯದಲ್ಲಿ ಅದ್ದಿ ಅದ್ದಿ ಎತ್ತುತ್ತಿದ್ದಾನೆ! ಸುತ್ತುಮುತ್ತಲೂ ಕಣ್ಣು ಬಿಡಿಸಿ ಬಿಡಿಸಿ ನೋಡಿದಳು. ಯಶೋದೆಯ ಹುಚ್ಚು ನೋಟನೋಡಿ ಸುತ್ತಲೂ ಸೇರಿದ ಮಕ್ಕಳು ಕೇಕೇಹಾಕಿ ನಗುತ್ತಿದ್ದರು. ಕಂಬದ ಮರೆಯಲ್ಲಿ ನಿಂತುಕೊಂಡು ಹಣಿಕಿ ನೋಡುತ್ತ ಬಲರಾಮನೂ ನಗುತ್ತಿದ್ದಾನೆ!



ಕೃಷ್ಣನು ಯಶೋದೆಯ ಮುಖದಕಡೆಗೆ ಬಗ್ಗಿ, "ನೋಡಮ್ಮಾ ಬಾಯಿನೋಡು! ಮಣ್ಣು ಕಂಡಿತೇನು? ಚೆನ್ನಾಗಿ ನೋಡಿ ಮತ್ತೆ ಹೇಳಮ್ಮಾ!" ಎನ್ನುತ್ತ, ತೆರೆದ ಬಾಯಿಯನ್ನು ಅವಳ ಹತ್ತಿರವೇ ತಂದನು. ಈಗ ಯಶೋದೆಗೆ ದೇವಾದಿ ದೇವತೆಗಳೆಲ್ಲಾ ಕಾಣಿಸಿದರು. ಕೃಷ್ಣನು ಕೊಳಲೂದುತ್ತಿರಲು, ವಿಶ್ವೇಶ್ವರನು ತಾಂಡವ ನೃತ್ಯಮಾಡುತ್ತಿದ್ದಾನೆ! ಕೃಷ್ಣನು ದೊಡ್ಡದೊಂದು ಕರಿಯ ಸರ್ಪದ ತಲೆಯ ಮೇಲೆ ತುಳಿದಾಡುತ್ತಿರುವುದನ್ನೂ, ಆ ಸರ್ಪವು ಕೃಷ್ಣನನ್ನು ಸುತ್ತಿ ಹಾಕುವುದನ್ನೂ ನೋಡಿ ಯಶೋದೆ ಕಿಟ್ಟನೆ ಕಿರಿಚಿದಳು. ಹಾಗೆಯೇ ಮೂರ್ಛೆಹೋಗಿ ಬಿದ್ದಳು! ಆಕೆ ಮತ್ತೆ ಕಣ್ಣು ತೆರೆದಾಗ ಅವಳು ಮಂದಿರದೊಳಗೆ ಮಂಚದಲ್ಲಿ ಮಲಗಿದ್ದಳು. ಅವಳ ಸುತ್ತಲೂ ಗೊಲ್ಲಭಾಮೆಯರು ನೆರೆದಿದ್ದರು. "ನೀವೆಲ್ಲಾ ಏಕೆ ಬಂದಿರಿ? ನನಗೇನಾಗಿದೆ?" ಎಂದು ಆಶ್ಚರ್ಯದಿಂದ ಕೇಳಿದಳು ಯಶೋದೆ. ಅವಳಿಗೆ ನಡೆದುದಾವುದೂ ನೆನಪಿಗೆಬರಲಿಲ್ಲ. ಎಲ್ಲವನ್ನೂ ಮರೆತಿದ್ದಳು. ತಲೆ ತಿರುಗಿಸಿ ಸುತ್ತಲೂ ನೋಡಿದಳು.

"ನಿನಗೇನಾಯಿತೆಂದು ನಮಗೇನು ಗೊತ್ತಮ್ಮಾ? ನಮ್ಮ ಮನೆಗಳಲ್ಲಿ ತುಂಬಾ ಕಳ್ಳತನಗಳು ನಡೆದು ಬಿಟ್ಟವೆ. ಆ ಕಳ್ಳಯಾರೆಂತಲೂ ಗೊತ್ತಾಯಿತು. ಆ ನಿನ್ನ ಮುದ್ದುಮಗನೇ. ಹಾಲು, ಅದರ ಕೆನೆ, ಬೆಣ್ಣೆ, ಮೊಸರು ಎಲ್ಲಾ ಇಷ್ಟಬಂದಹಾಗೆ ಕುಂಟೆ ಪೋಲಿಗಳಿಗೂ, ಕೋತಿಗಳಿಗೂ ಹಂಚಿ ಹಂಚಿ, ಕೊಡುವುದನ್ನು ನಾವು ಕಣ್ಣಾರೆ ಕಂಡೆವು. ಅದನ್ನು ಮೊರೆಯಿಡಲಿಕ್ಕೇ ಬಂದಿದ್ದೇವೆ. ನಿನ್ನ ಹತ್ತಿರ ಹೇಳಿ ಏನಾದೀತು? ಮುಂದಿನ ವರ್ಗನಿಗೆ ಚಿವುಟಲಿಕ್ಕೂ ನಿನ್ನಿಂದಾಗದು." ಎಂದರು ಗೋಪಿ ಕಾಂತೆಯರು.

"ಏನಂದಿರಿ? ಅವೆಲ್ಲಾ ನಿಮ್ಮ ಮನೇದೇ ಅಂತ ಹೇಗೆ ಹೇಳುವಿರಿ? ನಮ್ಮ ಮನೆಯಲ್ಲಿ ಅವೇನೂ ಇಲ್ಲವೆಂದುಕೊಂಡಿರಾ? ಗೋಕುಲದ ಎಲ್ಲಾ ಮನೆಗಳಲ್ಲಿರುವ ಹಾಲುಬೆಣ್ಣೆಗಳನ್ನು ಕೂಡಿಸಿದರೂ ನಮ್ಮ ಮನೆಯಲ್ಲಿರುವುದರ ಅರ್ಧದಷ್ಟೂ ಇರಲಾರದು. ನಡೆಯಿರಿ, ನಡೆಯಿರಿ!" ಎಂದು ಬಯ್ದು ಅವರನ್ನೆಲ್ಲ ಕಳುಹಿಸಿ ಬಿಟ್ಟಳು ಯಶೋದೆ.

ಕೃಷ್ಣನು ಮೆಲ್ಲನೆ ಅಲ್ಲಿಗೆ ಬಂದು "ಏನು ನಡೆಯಿತು ಅಮ್ಮಾ?" ಎಂದು ಕೇಳಿದನು.

"ಏನು ನಡೆಯುತ್ತದೆಂದು ಹೇಳಿದೆ ನೀನೋ ಅದೇ ನಡೆಯಿತು. ನಿನ್ನ ಮೇಲೆ ವೃಥಾಪವಾದ ಬಂದು ಬಿದ್ದೇ ಬಿಟ್ಟಿತು!" ಎಂದಳು ಯಶೋದೆ.

"ಅಂಥಾ ಅಪನಿಂದೆಯನ್ನೆಲ್ಲಾ ನಾನು ತಪ್ಪಿಸಿಕೊಂಡೆನಮ್ಮ. ಅದೇ ಅವರೆಲ್ಲಾ ಈಗ ನಿನ್ನ ಹತ್ತಿರ ಬಂದು ಹೇಳಿದರಲ್ಲಾ? ಅದೆಲ್ಲಾ ನಿಜವೇ! ಚಿಂತಿಸಬೇಡ!" ಎಂದನು ಕೃಷ್ಣ.

ಯಶೋದೆಗೆ ಬಹು ಕೆಟ್ಟಕೋಪ ಬಂದಿತು. ಹಗ್ಗದಿಂದ ಕೃಷ್ಣನ ಕಾಲುಕಟ್ಟಿ ಹಗ್ಗದ ಇನ್ನೊಂದು



ತಂದಿಯನ್ನು ದೊಡ್ಡದೊಂದು ಒರಳಿಗೆ ಕಟ್ಟಿದಳು. ಕೃಷ್ಣನು ಆ ಒರಳನ್ನು ಎಳೆಯುತ್ತಾ ಜಂಟಿಮರಗಳ ಸಂದಿನಲ್ಲಿ ತೂರಿಕೊಂಡು ಹೋಗಿ ಒರಳನ್ನೂ ಅವುಗಳೆಡೆಯಿಂದಾಗಿ ಎಳೆದನು. ಆ ಎರಡು ಮಹಾವೃಕ್ಷಗಳೂ ಬೇರಿನೊಂದಿಗೆ ಮುಗುಚಿ ಬಿದ್ದುವು. ಮಾಯವಾಗಿ ಇಬ್ಬರು ಗಂಧರ್ವರು ಪ್ರತ್ಯಕ್ಷರಾದರು. ಹಾಗೆ ಜಂಟಿಮರಗಳಾದ ನಳಕೂಬರರೆಂಬ ಗಂಧರ್ವರ ಶಾಪವಿಮೋಚನೆಯಾಗಿ, ಕೃಷ್ಣನನ್ನು ಸ್ತುತಿಸಿ ಆಕಾಶಕ್ಕೆ ಹಾರಿ ಅದೃಶ್ಯರಾದರು.

ಮತ್ತೊಂದು ವರ್ಷಕಳೆದು ಮತ್ತೆ ವಿನಾಯಕ ಚೌತಿ ಬಂದಿತು. ಸುಂದರವಾದ ದೊಡ್ಡ ಬಣ್ಣದ ವಿನಾಯಕ ವಿಗ್ರಹವನ್ನು ನಂದಗೋಪನು ಮಾಡಿಸಿದನು. ಯಶೋದೆ ಕೆನೆಯನ್ನೂ ಬೆಣ್ಣೆಯನ್ನೂ ಸೇರಿಸಿ ಹಿಟ್ಟು, ಕಲಸಿ, ಬಗೆಬಗೆಯ ಉಂಡೆ, ಅಪ್ಪ, ಸುಳಿಗಡುಬು, ಮೋದಕ, ಉಸಳಿ, ಕರಜೀಕಾಯಿ ಮುಂತಾದ ಭಕ್ಷ್ಯಗಳನ್ನು ತುಂಬಾ ಮಾಡಿದಳು.

ಆ ನೈವೇದ್ಯ ಪದಾರ್ಥಗಳನ್ನೆಲ್ಲ ಪೂಜಾಮಂದಿರದಲ್ಲಿಟ್ಟು, ಸುಮ್ಮನೆ ಬಾಗಿಲು ಸರಿಸಿ ಯಶೋದೆ ಆಚೆಗೆ ಹೋದಳು.

ಕೃಷ್ಣನು ಮೆಲ್ಲನೆ ಸದ್ದುಮಾಡದೆ ಪೂಜಾಮಂದಿರದೊಳಗೆ ಪ್ರವೇಶಿಸಿ, ಬಾಗಿಲನ್ನು ಮುಚ್ಚಿ, ಅಲ್ಲಿ ಇರಿಸಿದ್ದ ಭಕ್ಷ್ಯ ಭೋಜ್ಯಗಳನ್ನೆಲ್ಲಾ ವಿನಾಯಕನ ವಿಗ್ರಹದ ಬಾಯಿಗೆ ನೀಡುತ್ತ, "ತಿನ್ನಯ್ಯಾ ತಿನ್ನು!" ಎಂದು ಅವನ ದೊಡ್ಡ ಹೊಟ್ಟೆಯನ್ನು ತಡವಿದನು.

ವಿಗ್ರಹವು ಚಲಿಸಿ ವಿಘ್ನೇಶ್ವರನು ಸೊಂಡಿಲಾಡಿಸುತ್ತ, ಕೃಷ್ಣನು ನೀಡುವುದನ್ನು ಸೊಂಡಿಲಿನಲ್ಲಿ ಎತ್ತಿಕೊಂಡು ಬಾಯಿಗೊಯ್ದು ನುಂಗುತ್ತ, "ಕೃಷ್ಣಾ, ನಾನು ಕೊಡುವುದನ್ನು ನೀನೂ ತಿನ್ನಬೇಕು. ವಿಘ್ನೇಶ್ವರಾಯಣದಲ್ಲಿ ಇದು ಸುಂದರಕಾಂಡ!" ಎಂದು ಬೆಣ್ಣೆಯೊಂದಿಗೆ ಮಾಡಿದ ಕೆಲವು ಭಕ್ಷ್ಯಗಳನ್ನು ಕೃಷ್ಣನ ಬಾಯಿಗೂ ತುರುಕಿದನು. ತಿಂಡಿಗಳ ಹರಿವಾಣಗಳೆಲ್ಲ ಖಾಲಿಯಾಗತೊಡಗಿದುವು. ಯಶೋದೆ ಪೂಜಾ ಮಂದಿರಕ್ಕೆ ಬಂದು ಬಾಗಿಲು ತೆರೆಯಲಾಗದಿರಲು, ಕಿಟಕಿಯಿಂದ ಒಳಗೆ ನಡೆಯುವ ಸುಂದರಕಾಂಡವನ್ನು ನೋಡಿ ಸ್ತಂಭೀಭೂತಳಾದಳು. ಗಾಬರಿಯಿಂದ ಅವಳ ಮೈ ಬೆವತಿತು. ಕಣ್ಣುಜ್ಜಿಕೊಳ್ಳುತ್ತ, "ಮತ್ತೆ ನನಗೆ ಭ್ರಮೆಬಡಿಯಿತು! ನನ್ನ ಕಣ್ಣುಗಳಿಗೆ ಏನೋ ಮಾಯೆ ಕವಿದಿದೆ." ಎಂದು ಗೊಣಗಿಕೊಂಡಳು. ಕೃಷ್ಣನು ಎದ್ದುಬಂದು ಬಾಗಿಲು ತೆರೆದುದನ್ನು ನೋಡಿ, ಸರಸರನೆ ಒಳಗೆ ಹೊಕ್ಕಳು ಯಶೋದೆ.

ನಿಜವೇ. ಅವಳು ನೋಡಿದುದೆಲ್ಲಾ ಮಾಯೆಯೇ! ವಿನಾಯಕ ವಿಗ್ರಹವು ವಿಗ್ರಹವಾಗಿಯೇ ಇದೆ. ಆದರೆ ನೈವೇದ್ಯ ಭಕ್ಷ್ಯಗಳೆಲ್ಲ ಖಾಲಿಯಾಗಿವೆ! "ಎಂಥಾ ತಿಂಡೀ ಬಾಕನಪ್ಪಾ ಕೃಷ್ಣಾ! ಪೂಜೆಗೆ, ಮೊದಲೇ ಎಲ್ಲಾ ಖಾಲಿಮಾಡಿದೆಯಲ್ಲೋ! ಸುಮ್ಮನೆ



ಬೆಳೆಯುತ್ತಿಯೇ ಹೊರತು ಬುದ್ಧಿ ಸ್ವಲ್ಪವೂ ಇಲ್ಲ!" ಎನ್ನುತ್ತ ಅವನ ಬೆನ್ನಿಗೆರಡು ಬಡಬಡನೆ ಬಾರಿಸಿದಳು.

ಅಷ್ಟರೊಳಗೆ ಕೃಷ್ಣನು ಅಲ್ಲಿಂದ ನುಸುಳಿ ಯಾರ ಕೈಗೂ ಸಿಕ್ಕದಂತೆ ಓಡುತ್ತಾ ಹೋಗಿ ಕಾಳಿಂದೀ ಮಡುವನ್ನು ತಲುಪಿದನು. ಅದನ್ನು ನೋಡಿ, ಯಶೋದೆಯೂ ಇತರ ಗೋಪಿಕೆಯರೂ ಹೆದರಿ "ಅತ್ತಹೋಗದಿರೋ!" ಎಂದು ಕೂಗುತ್ತಾ ಓಡಿದರು.

ಕಾಳಿಂದೀ ಮಡುವನ್ನು ಸೇರಿದ ಕಾಳೀಯನೆಂಬ ಮಹಾಸರ್ಪವಾದ ವಿಘ್ನನಿಂದ ಗೋಕುಲ ನಿವಾಸಿಗಳು ತುಂಬಾ ಭಯಕಂಪಿತರಾಗಿದ್ದರು. ಕಾಳೀಯನ ವಿಷಜ್ವಾಲೆಗಳು ಆ ಪ್ರಾಂತವನ್ನೆಲ್ಲಾ ಹಾಳುಬೀಳಿಸಿದ್ದುವು. ಕೃಷ್ಣನು ಮಡುವಿನ ಬದಿಯಲ್ಲಿದ್ದೊಂದು ಮರದ ಮೇಲೇರಿ, ಮಡುವಿನ ನಡುಭಾಗದವರೆಗೆ ವ್ಯಾಪಿಸಿದ್ದ ಕೊಂಬೆಯ ಮೇಲಿನಿಂದ ಮಡುವಿಗೇ ಹಾರಿ ಕಾಳೀಯ ನಾಗನ ನಡುನೆತ್ತಿಯ ಮೇಲೆ ಸಿಡಿಲಿನಹಾಗೆ ಬಿದ್ದನು. ಕೃಷ್ಣನ ಕಾಲಂದುಗೆಯ ಗೆಜ್ಜೆಗಳು ಘಲ್ಲುಘಲ್ಲೆನ್ನುತ್ತಿರಲು, ಕೃಷ್ಣನು ಕಾಳೀಯನ ತಲೆಗಳ ಮೇಲೆ ತಾಂಡವವಾಡ ತೊಡಗಿದನು. ಕಾಳೀಯ ಮರ್ದನವು ಚೆನ್ನಾಗಿ ನಡೆಯಿತು. ಕಾಳೀಯನ ಶಾಪ ತೊಲಗಿತು. ಅವನು ತನ್ನ ಕುಮಾರಿಯರನ್ನು ತೆಗೆದುಕೊಂಡು ಹೋಗಿ ಪಾತಾಳದಲ್ಲಿರುವ ವಾಸುಕಿಯ ವಶಕ್ಕೆ ಕೊಟ್ಟು, ಕಾಳೀಯ ರೂಪವನ್ನು ಉಪಸಂಹರಿಸಿಕೊಂಡು, ಮೊದಲಿನಂತೆ ವಿಘ್ನನಾಗಿ ವಿಘ್ನೇಶ್ವರನಿಗೆ ಅಧೀನನಾದನು.

ಕ್ಷೇಮವಾಗಿ ತೀರಕ್ಕೆ ಬಂದ ಕೃಷ್ಣನನ್ನು ಎತ್ತಿಕೊಂಡು ಯಶೋದೆ ಮನೆಗೆ ಬಂದಳು. ಆಗ ಪೂಜಾ ಮಂದಿರದ ನೈವೇದ್ಯದ ತಟ್ಟೆಗಳೆಲ್ಲ ತಾನು ಹೇಗೆ ಇಟ್ಟಿನೋ ಹಾಗೆಯೇ ಎಲ್ಲಾ ಬಗೆಯ ಭಕ್ಷ್ಯಗಳಿಂದಲೂ ತುಂಬಿರುವುದನ್ನು ನೋಡಿ ಯಶೋದೆ ಪುನಃ ಬೆರಗಾದಳು. ಬಾಲಕೃಷ್ಣನ ಬೆನ್ನಿನಲ್ಲಿ ಮಾತ್ರ ಅವಳ ಬೆರಳಚ್ಚುಗಳು ಕಾಣಿಸುತ್ತಿದ್ದುವು. ಯಶೋದೆ ಅವುಗಳನ್ನು ನೋಡಿ, "ಅಹೋ! ನನ್ನ ಕೈಗಳು ಬಿದ್ದು ಹೋಗಬಾರದೆ? ನನಗೇ ಏನೋ ಮಾಯದ ರೋಗ ಹಿಡಿದಿದೆ. ನಿಷ್ಕಾರಣವಾಗಿ ಮಗನನ್ನು ಹೊಡೆದೆನಲ್ಲ! ಎಂಥಾ ಪಾಪಿ ನಾನು! ಇದೆಲ್ಲಾ ನೀನು ಚೌತಿಚಂದ್ರನನ್ನು ನೋಡಿದ ದುಷ್ಪರಿಣಾಮ ಕಂದಾ! ಪಾರ್ವತಿಯ ಶಾಪ!" ಎಂದು ಗಳಗಳನೆ ಅತ್ತಳು.

"ಅಳಬೇಡಮ್ಮಾ! ತುಂಬಾ ಹೊತ್ತಾಯಿತು! ಪೂಜೆ ಮುಗಿಸಿಬಿಡಮ್ಮಾ!" ಎಂದನು ಕೃಷ್ಣ. ನಂದನೂ ಯಶೋದೆಯೂ ಕೃಷ್ಣನ ಕೈಯಿಂದಲೇ ವಿನಾಯಕ ಪೂಜೆ ಮಾಡಿಸಿದರು. ನೈವೇದ್ಯಗಳನ್ನು ಪ್ರಸಾದವಾಗಿ ಊರವರಿಗೆಲ್ಲಾ ಹಂಚಿದರು. ಆ ಭಕ್ಷ್ಯಗಳಲ್ಲಿ ಅಮೃತವು ಸೇರಿದಹಾಗೆ ಅನ್ನಿಸಿತು ಎಲ್ಲರಿಗೂ. ಆ ದಿನ ಗೋಕುಲದೊಳಗೆಲ್ಲಾ ಆನಂದದ ಅಲೆಗಳೇ ಅಲೆಗಳು!

ಕೃಷ್ಣನು ಬೆಳೆದು ದೊಡ್ಡವನಾದನು. ಇಂದ್ರನ ಕೋಪದಿಂದ ಬಂದಪ್ರಳಯ ಭಯಂಕರವಾದ ಮಳೆಯನ್ನು, ಗೋವರ್ಧನಗಿರಿಯನ್ನೆತ್ತಿ ಎಲ್ಲರನ್ನೂ ಕಾಪಾಡಿ, ಕೃಷ್ಣನು ಇಂದ್ರನ ಗರ್ವವನ್ನು ಭಂಗಿಸಿದನು. ಕ್ಷಮೆ ಕೇಳಿ ಪಾರಾಗಬೇಕಾಯಿತು ಇಂದ್ರನಿಗೆ.

ಗೋವರ್ಧನ ಪ್ರಾಂತದಲ್ಲಿ ಒಂದುದಿನ ಕೃಷ್ಣನು ದನಗಳನ್ನು ಕಾದುಕೊಂಡಿದ್ದಾಗ, ಕಂಕುಳಲ್ಲಿ ದೊಡ್ಡದೊಂದು ಮದ್ದಳೆಯನ್ನು ಇಟ್ಟುಕೊಂಡು ಬಂದ ಒಬ್ಬ ದೊಡ್ಡ ಮನುಷ್ಯನು. ಕೃಷ್ಣನನ್ನು ನೋಡಿ, "ಲೋ ಹುಡುಗಾ, ಇಲ್ಲಿ ಕೃಷ್ಣನೆಂಬ ಹುಡುಗನಿದ್ದಾನಂತೆ. ತುಂಬ ಚೆನ್ನಾಗಿ ಮುರಳೀ ಊದುವನೆಂದು ಹೇಳುತ್ತಾರೆ. ಅವನ ಮುರಳೀಗಾನವು ಎಂತಹುದೆಂದು ನೋಡ ಬೇಕೆಂತಲೇ ಬಂದಿದ್ದೇನೆ. ಅವನು ಎಲ್ಲಿರುವನೆಂದು ನಿನಗೆ ಗೊತ್ತೇನೋ?" ಎಂದು ಕೇಳಿದನು.

"ಮಹಾಸ್ವಾಮೀ, ನೀವು ಕೇಳುವ ಆ ಕೃಷ್ಣ ಪರಮಾಣು ಅಂದರೆ ನಾನೇ. ತಾವು ಯಾರೋ ಬಹುದೊಡ್ಡ ಮೃದಂಗ ವಿದ್ವಾಂಸರ ಹಾಗೆ ಇದ್ದೀರಿ. ತಾವು ಯಾರೆಂದು ಸ್ವಲ್ಪ ಹೇಳಬಿಡಿ ಸ್ವಾಮಿ" ಎಂದು ಕೃಷ್ಣನು ಬಾಗಿ ಕೈ ಮುಗಿದು ಕೇಳಿಕೊಂಡನು.

"ನನ್ನನ್ನು ಮೃದಂಗಕೇಸರಿ ಎನ್ನುತ್ತಾರೆ. ದಕ್ಷಿಣ ದೇಶದವನು ನಾನು. ಮಧುರಾನಗರಕ್ಕೆ ಹೋಗುತ್ತಿದ್ದೇನೆ. ಕಂಸರಾಜನು ದೊಡ್ಡ ಧನುರ್ಯಾಗವನ್ನು ಮಾಡುತ್ತಾನಂತೆ. ಅಲ್ಲಿ ನನ್ನ ಮದ್ದಳೆಯ ವಿದ್ವತ್ತನ್ನು ಪ್ರದರ್ಶಿಸ ಬೇಕೆಂತಲೇ ಹೊರಟಿದ್ದೇನೆ" ಎಂದನು ಮೃದಂಗಕೇಸರಿ.

ಆತನ ಕಾಲಿನಲ್ಲಿ ರತ್ನಖಚಿತವಾದ ಕಡಗವು, ಕೈಗಳಲ್ಲಿ ಕೆಂಪು ವಜ್ರಗಳುಳ್ಳ ಸಿಂಹ ಮುದ್ರೆಯ ವಂಕಿಗಳೂ ಇದ್ದುವು. ಕೊರಳಲ್ಲಿ ಬಂಗಾರದ ನಿಂಬೇ ಕಾಯಿಮಾಲೆ, ಕಿವಿಗಳಲ್ಲಿ ದೊಡ್ಡ ಗುಂಡು ಕುಂಡಲಗಳು ಧಗಧಗಿಸುತ್ತಿದ್ದುವು. ಮದ್ದಳೆ ತುಂಬಾ ನವರತ್ನಗಳನ್ನೂ, ಸ್ವರ್ಣಪದಕಗಳನ್ನೂ ಹೊದಿಸಲ್ಪಟ್ಟಿದ್ದುವು. ಅವನ ವಿದ್ವತ್ತಿನ ಕುರುಹುಗಳು ಅಮೋಘ !

ಕೃಷ್ಣನು ಅವುಗಳನ್ನು ನೋಡಿ ಆನಂದಪಡುತ್ತ, "ಸ್ವಾಮೀ, ನಾನು ದನಕಾಯುವ ಸಾಮಾನ್ಯ ಗೋವಳ. ನನ್ನ ಕೊಳಲು ಸಾದಾ ಬೊಂಗು ಬಿದಿರಿನದು. ನಿಮ್ಮಂಥ ದಕ್ಷಿಣ ದೇಶದ ವಿದ್ವಾಂಸರು ತಾಳಗಳಿಗೆ ಸುಪ್ರಸಿದ್ಧರು. ನಿಮ್ಮಂಥವರ ಮುಂದೆ ನಾನೆಲ್ಲಿ? ನಾನೇನೋ ಯಾವುದೋ ಒಂದು ರಾಗವನ್ನು ಊದಿ ದನಗಳನ್ನು ಕಾಯುವುದು ಬಿಟ್ಟರೆ, ಮತ್ತೇನೂ ಅರಿಯದ ಬರೀ ಗಾಳಿಹಾಡುಗಾರ, ಅಷ್ಟೇ!" ಎಂದನು.



ವಸುದೇವರನ್ನು, ಕಾರಾಗೃಹದಿಂದ ಬಿಡಿಸಿಕೊಂಡು ಬಂದು ಸಿಂಹಾಸನದಲ್ಲಿ ಕೂರಿಸಿದನು.

ಮುಂದೆ ಕೃಷ್ಣಬಲರಾಮರು ಬೆಳೆದು ದೊಡ್ಡವರಾದರು. ಅನೇಕ ದುಷ್ಟರನ್ನೂ, ರಾಕ್ಷಸರನ್ನೂ ಕೊಂದು ಕೃಷ್ಣನು ಅನೇಕರ ವೈರವನ್ನೂ, ಸ್ನೇಹವನ್ನೂ ಗಳಿಸುತ್ತಾ ಪ್ರಸಿದ್ಧನಾದನು. ಅನೇಕ ರಾಕ್ಷಸರು ಕೃಷ್ಣನ ಕೈಯಲ್ಲಿ ಸತ್ತರು. ಸಮುದ್ರದೊಳಗೆ ತೂರಿಕೊಂಡಿರುವಂತೆ ದ್ವಾರಕಾ ಎಂಬ ನಗರವು ಕೃಷ್ಣನಿಂದ ನಿರ್ಮಿಸಲ್ಪಟ್ಟಿತು. ಅಣ್ಣನಾದ ಬಲರಾಮನನ್ನು ಯಾದವರಿಗೆ ಒಡೆಯನಾಗಿರಬೇಕೆಂದು ರಾಜ್ಯಾಭಿಷೇಕ ಮಾಡಿಸಿದನು ಕೃಷ್ಣ.

ಈ ನಡುವೆ ಕೃಷ್ಣನಿಗೆ ರುಕ್ಮಿಣಿಯೊಂದಿಗೆ ವಿವಾಹವೂ ಆಯಿತು. ಹೀಗೆ ಕೃಷ್ಣನಿಗೆ ಸಮಸ್ತ ಸಂಪತ್ತುಗಳು ಬಂದಿದ್ದರೂ, ಅವನು ತನ್ನ ಮೂಲ ವೃತ್ತಿಯನ್ನು ಬಿಡಲಿಲ್ಲ. ಎಂದಿನಂತೆ ಹಸುಗಳನ್ನು ಕಾಯುತ್ತ, ಹಾಲು ಹಿಂಡುತ್ತ ಗೋಪಾಲಕೃಷ್ಣನಾಗಿಯೇ ದ್ವಾರಕೆಯಲ್ಲಿದ್ದನು. ರಾ ಜ ಕಾ ರ್ಯ ಭಾರಗಳೆಲ್ಲ ಬಲರಾಮನವೇ. ಲೀಲಾವಿನೋದಗಳೇ ಕೃಷ್ಣನ ಮುಖ್ಯ ಕಾರ್ಯವೆನ್ನಬೇಕು.



ದ್ವಾರಕಾನಗರದ ಪಕ್ಕದಲ್ಲಿ ಸತ್ರಾಜಿತ್ತು ಎಂಬ ಪ್ರಮುಖನೊಬ್ಬನು ರಾಜನ ಹಾಗೆ ಒಂದು ಸಂಸ್ಥಾನವನ್ನು ಏರ್ಪಡಿಸಿಕೊಂಡು ಭೋಗಭಾಗ್ಯಗಳಿಂದ ಮೆರೆಯುತ್ತಿದ್ದನು. ತಾನು ಸೂರ್ಯವಂಶದಕ್ಷತ್ರಿಯನೆಂದು ಸಗರ್ವದಿಂದ ಹೇಳಿಕೊಳ್ಳುತ್ತ, ಸ್ವತಃ ಸೂರ್ಯೋಪಾಸಕನಾಗಿ ಸೂರ್ಯನನ್ನು ಧ್ಯಾನಿಸಿ ದೊಡ್ಡ ತಪಸ್ಸನ್ನೇ ಮಾಡಿದನು. ಸೂರ್ಯನು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಶಮಂತಕಮಣಿ ಎಂಬ ದೊಡ್ಡದೊಂದು ವಜ್ರವನ್ನು ಅವನಿಗೆ ಪ್ರಸಾದಿಸಿದನು.

ಆ ಶಮಂತಕಮಣಿಯಿಂದ ಹೊರಡುವ ಕಾಂತಿ ಕಿರಣಗಳು ಬಂಗಾರದ ಹರಳುಗಳಾಗಿ ಪ್ರತಿದಿನವೂ ಅವನಿಗೆ ಅಪಾರವಾಗಿ ಬಂಗಾರವನ್ನು ಕೊಡುತ್ತಿದ್ದಿತು. ಅದರಿಂದ ಇನ್ನಷ್ಟು ಹೆಚ್ಚಳಗೊಂಡ ಸತ್ರಾಜಿತ್ತು ಪ್ರಮುಖರನೇಕರಿಗೆ ಆಹ್ವಾನಗಳನ್ನು ಕಳುಹಿಸಿ, ಅವರ ಮುಂದೆ ಶಮಂತಕಮಣಿಯನ್ನು ತೋರಿಸಿ, ಅದರ ಪ್ರಭಾವವನ್ನು ವರ್ಣಿಸುತ್ತ ಸಂತೋಷದಿಂದ ಉಬ್ಬಿಕೊಳ್ಳುತ್ತಿದ್ದನು. ಕೃಷ್ಣನಿಗೂ ಆಹ್ವಾನ ಕಳುಹಿದಿರಲಿಲ್ಲ. ಆದರೆ ಅವನ ಹೆಮ್ಮೆಯ ವಿಷಯಕ್ಕೆ ಬೆಲೆ ಕೊಡದ ಕೃಷ್ಣನು ಅವನ ಆಹ್ವಾನದಂತೆ ಬರಲಿಲ್ಲ. ಮರ್ಯಾದೆಗಾಗಿ ಸಮಯವಿದ್ದಾಗ ಬರುವೆನೆಂದು ಸಮಾಚಾರ ಮಾತ್ರ ಕಳುಹಿಸಿದನು. ಗರ್ವಿಷ್ಠನಾದ ಸತ್ರಾಜಿತ್ತನಿಗೆ ಯಾದವ ಕುಲದ ಕೃಷ್ಣನ ಮೇಲೆ ಒಳ್ಳೆಯ ಅಭಿಪ್ರಾಯವೇನಿರಲಿಲ್ಲ. "ಅವನು ಬರದಿದ್ದರೇನಂತೆ? ಆ ಕಳ್ಳ ಕೃಷ್ಣ ಬಾರದಿದ್ದರೇನೇ ಕ್ಷೇಮ. ಏನೋ ಯಾದವಪ್ರಮುಖನೆಂಬ ಮರ್ಯಾದೆಗೆ ಆಹ್ವಾನ ಕಳುಹಿಸಿದೆ, ಹೋಗಲಿ" ಎಂದುಕೊಂಡನು.



ಈ ಸತ್ರಾಜಿತ್ತುವಿಗೆ ಸತ್ಯಭಾಮಾದೇವಿ ಎಂಬ ಅಪೂರ್ವಸುಂದರಿಯಾದ ಮಗಳಿದ್ದಳು. ಶಮಂತಕ ಮಣಿಯೊಂದಿಗೆ ಸತ್ಯಭಾಮೆಯ ಸೌಂದರ್ಯವೂ ಖ್ಯಾತಿಗೊಂಡಿತ್ತು. ಜರಾಸಂಧನಂತಹ ರಾಜಾಧಿರಾಜರು ಕೂಡಾ ಸತ್ಯಭಾಮೆಯ ಮನವೊಲಿಸಿ ಮದುವೆಯಾಗಬೇಕೆಂದು ಕಾದುಕೊಂಡಿದ್ದರು.

ಸತ್ಯಭಾಮೆ ವಿಘ್ನೇಶ್ವರನ ಮಹಾ ಭಕ್ತೆಯಾದುದರಿಂದ, ಪ್ರತಿ ವಿನಾಯಕಚೌತಿಯ ದಿನವೂ, ವಿನಾಯಕನನ್ನು ಭಕ್ತಿಶ್ರದ್ಧೆಗಳಿಂದ ಪೂಜಿಸಿ, ಕೃಷ್ಣನನ್ನು ತನ್ನ ಪತಿಯಾಗಿ ಮಾಡಬೇಕೆಂದು ಪ್ರಾರ್ಥಿಸುತ್ತಿದ್ದಳು. ಕೃಷ್ಣನು ಆ ದಾರಿಯಾಗಿ ಬಂದಾಗಲೆಲ್ಲಾ ಅರಮನೆಯ ಮಾಳಿಗೆಯ ಮೇಲೆ ನಿಂತುಕೊಂಡು, ಅವನನ್ನು ನೋಡುತ್ತ, ಕಡೆಗೆ ನಿಡುಸುಯ್ಯುತ್ತ ವಿಘ್ನೇಶ್ವರನ ಮುಂದೆ ಅತ್ತುಬಿದ್ದು, ತನ್ನ ಆಸೆ ಫಲಿಸುವಂತೆ ಮಾಡೆಂದು ಬೇಡಿಕೊಳ್ಳುತ್ತಿದ್ದಳು. ತನ್ನ ಕುಮಾರಿಯ ಮನಸ್ಸು ಗೊತ್ತಿದ್ದರೂ ಸತ್ರಾಜಿತ್ತು ತಿಳಿಯದವನಂತೆಯೇ ಇದ್ದನು. ಒಂದು ದಿನ ಸತ್ಯಭಾಮೆ ವಿಘ್ನೇಶ್ವರನ ಮುಂದೆ ಕಣ್ಣು ಮುಚ್ಚಿ ಧ್ಯಾನಿಸಿಕೊಂಡಿರುವ ಬಗೆ ನೋಡಿ ಸತ್ರಾಜಿತ್ತು,

"ಏಕೆ ಮಗಳೇ ಇಂತಹ ಧ್ಯಾನ ? ಪ್ರತ್ಯಕ್ಷ ದೈವವಾದ ಸೂರ್ಯಭಗವಾನನ ಅನುಗ್ರಹವು ನಮ್ಮ ಮೇಲಿರುವಾಗ, ಲಂಬೋದರನ ಮುಂದೆ ಬಾಗುವ ಅಗತ್ಯ ಏನು ಬಂತು ನಿನಗೆ ?" ಎಂದನು.

ಸತ್ಯಭಾಮೆ ಚಟಕ್ಕನೆದ್ದು, "ಹಾಗೆ ಮಾತ್ರ ಹೇಳಬೇಡಿ ಅಪ್ಪಾ. ಮನೋವಾಂಛೆಗಳನ್ನು ಸುಲಭವಾಗಿ ಈಡೇರಿಸಬಲ್ಲ ದೇವರು ವಿಘ್ನೇಶ್ವರನೊಬ್ಬನೇ ಎಂದು ನಂಬಿದ್ದೇನೆ.!" ಎಂದಳು.

"ಏನದು ನಿನ್ನ ಮನೋವಾಂಛೆ ? ರುಕ್ಮಿಣಿಯೊಂದಿಗೆ ಪಾಲು ಹಂಚಿಕೊಳ್ಳುವುದು ತಾನೇ ?" ಎಂದನು ವ್ಯಂಗ್ಯಭಾವದಲ್ಲಿ ಸತ್ರಾಜಿತ್ತು. "ಪಾಲು ಹಂಚಿಕೊಳ್ಳುವವಳೇ ನಾನು ? ಕೃಷ್ಣನನ್ನು ನನ್ನ ಅಧೀನದಲ್ಲೇ ಇಟ್ಟುಕೊಳ್ಳುತ್ತೇನೆ " ಎಂದಳು ಸತ್ಯಭಾಮೆ.

ಸತ್ಯಭಾಮೆ ಹಠಗಾರಳೆಂದು ಸತ್ರಾಜಿತ್ತುವಿಗೆ ಗೊತ್ತಿದ್ದಿತು. ಆದರೂ ತನ್ನ ಮಗಳು ಕೇವಲ ಮುಗ್ಧಳೆಂದೂ, ಬೆಳೆದ ಮೇಲೆ ಬುದ್ಧಿ ತಂದುಕೊಳ್ಳುವಳೆಂದೂ ತನಗೆ ತಾನೇ ಸಮಾಧಾನ ಹೇಳಿಕೊಂಡನು ಸತ್ರಾಜಿತ್ತು.

ಇದು ನಡೆದ ಮಾರನೇ ದಿನವೇ ಕೃಷ್ಣನು ಆಕಸ್ಮಾತ್ತಾಗಿ ಸತ್ರಾಜಿತ್ತುವಿನ ಬಳಿಗೆಬಂದು, "ನಿಮ್ಮ ಆಹ್ವಾನದಂತೆ ಬರಲಾಗಲಿಲ್ಲ. ಈ ದಿನ ಸಮಯ ಸಿಕ್ಕಿತು " ಎಂದು ಮಾತಾಡುತ್ತ ಕುಳಿತನು. ಅವನು ಬಂದಿರುವ ಸಂಗತಿ ತಿಳಿದು ಸತ್ಯಭಾಮೆ ಸಂಭ್ರಮಗೊಂಡು, ಸ್ವಲ್ಪ ಶೃಂಗಾರ ಸರಿಮಾಡಿಕೊಂಡು ಏನೋ ನೆಪ ಹಿಡಿದು ಅವರ ಮುಂದೆ ಬಂದಾಗ, ಆಗಲೇ ಕೃಷ್ಣನು ಹೊರಟುಹೋಗಿದ್ದಾಗಿತ್ತು. ನಿರಾಶೆಯಾಯಿತು ಸತ್ಯಭಾಮೆಗೆ.



ಕೃಷ್ಣನನ್ನು ಕಳಿಸಿ ತಂದೆಯನ್ನು ನೋಡಿದಳು. ಸತ್ರಾಜಿತ್ತು ಶಮಂತಕಮಣಿಯನ್ನು ಮುಷ್ಟಿಯೊಳಗೆ ಭದ್ರವಾಗಿ ಹಿಡಿದುಕೊಂಡು ಕೃಷ್ಣನು ಹೋದ ದಿಕ್ಕನ್ನೇ ದಿಗಿಲಿನಿಂದ ನೋಡುತ್ತಾ ನಿಂತಿದ್ದನು.

ಸತ್ಯಭಾಮೆ ತಂದೆಯನ್ನು ನೋಡಿ, "ಏನದು ಅಪ್ಪಾ ? ಹಾಗೆ ನೋಡುತ್ತಾ ನಿಂತಿದ್ದೀರಲ್ಲಾ ? ಬಂದ ಆ ಮಹಾನುಭಾವನು ನನ್ನನ್ನು ತನಗೆ ಕೊಡುವಂತೆ ಕೇಳಲಿಲ್ಲವಷ್ಟೆ ?" ಎಂದಳು.

"ಹಾಗೊಂದು ವೇಳೆ ಕೇಳಿದ್ದರೂ ನಾನು ಲಕ್ಷ್ಯ ಮಾಡುತ್ತಿರಲಿಲ್ಲ. ಅವನು ಏನು ಕೇಳಿದನು ಗೊತ್ತೇ? ಈ ಶಮಂತಕಮಣಿಯನ್ನು ಕೊಡುವಂತೆ ಕೇಳಿದ." ಎನ್ನಲು, ಸತ್ಯಭಾಮೆ "ನೀವು ಇದನ್ನು ಕೊಡದೆ ಇದರ ಮಹಿಮೆಗಳನ್ನು ಅವನಿಗೆ ಹೇಳಿದಿರಿ, ಹೌದಾ ?" ಎಂದಳು.

"ಹೌದು, ಹೇಳಿದೆ. ಅದಕ್ಕೆ ಈ ಮಣಿ ತನ್ನಂಥವನ ಹತ್ತಿರ ಇದ್ದರೆ ಪ್ರಜೆಗಳಿಗೆಲ್ಲಾ ಶ್ರೇಯಸ್ಸಾಗುವ ಹಾಗೆ ಏನೇನೋ ಮಾಡುತ್ತಾನಂತೆ ಅವನು!" ಎಂದನು ಸತ್ರಾಜಿತ್ತು.

ಸತ್ಯಭಾಮೆ ನಸುಗೋಪದಿಂದ, "ಅಂತೂ ನನಗಿಂತ ನಿಮಗೆ ಈ ಮಣಿಯೇ ಹೆಚ್ಚಿನದಾಯಿತು!" ಎಂದು ಸರಸರನೆ ಅಲ್ಲಿಂದ ಹೊರಟುಹೋಗ ತೊಡಗಿದಳು. ಸತ್ರಾಜಿತ್ತು ಅವಳನ್ನು ತಡೆದು, ಸಮಾಧಾನಿಸುತ್ತ, "ಹಾಗೆ ಅಂದುಕೊಳ್ಳಬೇಡಮ್ಮಾ. ಆ ಕೃಷ್ಣನ ದುರಾಶೆಗೆ ಅಸಹ್ಯಬಂತು. ಅಷ್ಟೇ. ನಿನಗೂ ಈ ಮಣಿಗೂ ಎಲ್ಲಿಯ ಸಾಮ್ಯ ?" ಎಂದು ಮುದ್ದಾಡಿದನು.

"ಕೃಷ್ಣನು ಈ ಮಣಿ ಕೊಡುವ ಬಂಗಾರವನ್ನು ತಾನೇ ಅನುಭವಿಸುತ್ತೇನೆಂದು ಹೇಳಲಿಲ್ಲವಷ್ಟೆ ? ಹಾಗಿರುವಾಗ ಅವನದು ದುರಾಶೆ ಹೇಗಾಗುತ್ತದೆ ? ಕೃಷ್ಣನಂಥವನು ಕೇಳಿದರೆ ಸಂತೋಷದಿಂದ ಕೊಟ್ಟುಬಿಡುವುದೇ ಒಳ್ಳೇದಲ್ಲವೇನು ?" ಎಂದಳು ಸತ್ಯಭಾಮೆ. ಈ ಮಾತು ಕೇಳಿ ಇವಳೇ ಈ ಮಣಿಯನ್ನು ಕದ್ದು ಕೃಷ್ಣನಿಗೆ ಕೊಡುವಳೇನೋ ಎಂದು ಸತ್ರಾಜಿತ್ತುವಿಗೆ ಭಯವಾಯಿತು. ಅವನು ಕಂಪಿಸುತ್ತ, "ಎಷ್ಟು ಮಾತ್ರಕ್ಕೂ, ನಾನು ಜೀವದಿಂದಿರುವಾಗ ಈ ಮಣಿಯನ್ನು ಯಾರಿಗೂ ಕೊಡಲಾರೆ. ಇದು ನನ್ನ ಪ್ರಾಣ! ನನ್ನ ಸರ್ವಸ್ವವೂ ಇದೇ! ತಿಳಿದುಕೋ!" ಎಂದು ಗಟ್ಟಿಯಾಗಿ ಕೂಗಿ ಹೇಳಿದನು.

ಸತ್ಯಭಾಮೆ ಅಸಹ್ಯಭಾವದಿಂದ, "ಹೌದು, ಹೌದು. ಈ ಮಣಿಯೇ ನಿಮಗೆ ದೊಡ್ಡದು. ನನಗಿಂತಲೂ ಬಹುದೊಡ್ಡದು ! ಹುಂ, ಆ ಶಮಂತಕ ಮಣಿ ದೊಡ್ಡದೋ ನಾನು ದೊಡ್ಡದೋ ಎಂಬುದನ್ನು ಆ ಕೃಷ್ಣನೇ ನಿರೂಪಿಸಬೇಕು" ಎಂದು ತಂದೆಯನ್ನು ದುರದುರು ನೋಡಿ, ಸರಸರನೆ ಹೊರಟುಹೋದಳು.

ಕೆಲವು ದಿನಗಳ ಮೇಲೆ ವಿನಾಯಕಚತುರ್ಥಿ ಬಂದಿತು. ಸತ್ಯಭಾಮೆ ಯಥಾವಿಧಿಯಾಗಿ ವಿನಾಯಕ



ನನ್ನು ಅಟ್ಟಿಗೂ, ಆ ದಿನ ಸಾಯಂಕಾಲದಲ್ಲಿ ಪಲ್ಲಕ್ಕಿಯಲ್ಲಿ ಕುಳಿತುಕೊಂಡು, ಬೋಯಿಗಳಿಗೆ ದ್ವಾರಕಾ ನಗರಕ್ಕೆ ಹೋಗಲು ಹೇಳಿದಳು.

ಸಂಜೆಯಾದಂತೆ ಆಕಾಶದಲ್ಲಿ ದಟ್ಟವಾಗಿ ಮೋಡ ಕವಿಯ ತೊಡಗಿತು. ಕತ್ತಲೆಯಾಗುವ ಹೊತ್ತಿನಲ್ಲಿ ಕೃಷ್ಣನು ಹಸುವಿನ ಹಾಲು ಹಿಂಡಲು ತೊಡಗಿದನು. ಒಮ್ಮೆಗೇ ಆಕಾಶದಲ್ಲಿ ಮೋಡವು ಬಿಟ್ಟು ಹೋಗಿ ಚತುರ್ಥೀ ಚಂದ್ರಬಿಂಬವು ಹಾಲಿನ ಪಾತ್ರದಲ್ಲಿ ತಳಕ್ಕನೆ ಹೊಳೆಯಿತು ! ಕೃಷ್ಣನು ನೋಡಿದ ಮರುಕ್ಷಣದಲ್ಲೇ ಮೋಡ ಕವಿದು ಚಂದ್ರಬಿಂಬ ಮಾಯವಾಯಿತು !

ವಿನಾಯಕ ಚತುರ್ಥಿಯ ದಿನ ಚಂದ್ರನು ಕಣ್ಣಿಗೆ ಬಿದ್ದುದನ್ನು ನೋಡಿ ಕೃಷ್ಣನ ಮೈಜುಮು ಗುಟ್ಟಿತು. ತನ್ನೊಳಗೇ ನೊಂದುಕೊಳ್ಳುತ್ತ, ಕೃಷ್ಣನು ಪೂಜಾ ಮಂದಿರಕ್ಕೆ ಹೋಗಿ, ಅಕ್ಷತೆಗಳನ್ನು ತಲೆಯಮೇಲೆ ಚೆಲ್ಲಿಕೊಂಡು, ವಿಘ್ನೇಶ್ವರನ ಮುಂದೆನಿಂತು ಕಣ್ಣು ಮುಚ್ಚಿ "ದೇವಾ ಪ್ರತಿಬಿಂಬವೇ ಆದರೂ ಚಂದ್ರನನ್ನು ನೋಡಿ ಬಿಟ್ಟೆ ! ಎಲ್ಲಾ ನಿನ್ನ ದಯೆ !" ಎಂದು ಧ್ಯಾನಿಸಿದನು.

ಆಗ ವಿಘ್ನೇಶ್ವರ ವಿಗ್ರಹದೊಳಗಿಂದ "ಕೃಷ್ಣಾ, ಹೆದರಬೇಡ. ನೋಡಬೇಕೆಂದೇನೂ ನೀನು ನೋಡಲಿಲ್ಲ. ವೃಥಾ ನಿಂದೆ ಬಂದರೂ ಮೋಡ ಬಿಟ್ಟು ಹೋದ ಹಾಗೆಯೇ ಹೋಗಿಬಿಡುತ್ತದೆ. ಇದೂ ಕೂಡ ಒಂದು ಲಾಭಕ್ಕಾಗಿಯೇ ಅಂದುಕೊಂಡು ನೆಮ್ಮದಿಯಾಗಿರು" ಎಂಬ ಮಾತುಗಳು ಕೃಷ್ಣನ ಕಿವಿಗೆ ಬಿದ್ದುವು.

ಕೃಷ್ಣನು ಕಣ್ಣು ಬಿಡಿಸಿ "ನಿನ್ನ ಲೀಲೆ ವಿಘ್ನೇಶ್ವರಾ" ಎಂದು ಅಡ್ಡಬಿದ್ದನು.

ಅದೇ ಸಮಯದಲ್ಲಿ ರುಕ್ಮಿಣಿ ಆ ಪೂಜಾ ಮಂದಿರದೊಳಗೆ ಪ್ರವೇಶಿಸಿ, ವಿಘ್ನೇಶ್ವರನ ಮುಂದೆ ಧ್ಯಾನಿಸಿಕೊಂಡಿದ್ದ ಕೃಷ್ಣನನ್ನು ನೋಡಿ ಆಶ್ಚರ್ಯಪಡುತ್ತ, "ಇದೇನಿದು ? ನನ್ನ ಪ್ರಿಯತಮರು ವಿಘ್ನೇಶ್ವರ ಮಹಾಶಯರೊಂದಿಗೆ ಮಾತುಕತೆ ಆಡುವ ಹಾಗಿದೆಯಲ್ಲಾ ? ಏನೋ ವಿಶೇಷ ಇರಬೇಕು !" ಎಂದಳು.

"ಮತ್ತೇನಿಲ್ಲ ರುಕ್ಮಿಣೀ, ಇದೇ ದಿನ, ಹಿಂದಿನ ಒಂದಾನೊಂದು ವಿನಾಯಕ ಚತುರ್ಥಿಯ ದಿನ, ನನ್ನನ್ನು ಪೋಷಿಸಿದ ತಾಯಿ ಯಶೋದಮ್ಮನೊಂದಿಗೆ ನಾನು ಹೇಳಿದ ಒಂದು ಮಾತು ನೆನಪಿಗೆ ಬಂತು. ಅಷ್ಟೇ !" ಎಂದನು ಕೃಷ್ಣ.

"ಆ ನಿನ್ನ ಮುದ್ದು ಮಾತು ಏನೂ ಅಂತ ನಾನು ಸ್ವಲ್ಪ ಕೇಳಬಾರದೇ ಪ್ರಿಯಾ ?" ಎಂದಳು ಆಸೆಯಿಂದ ರುಕ್ಮಿಣಿ.

"ಕೇಳು ಬೇಕಾದರೆ. ಯಶೋದಮ್ಮ ಹಸುವನ್ನು ಹಿಂಡಿ ಹಾಕುತ್ತಿದ್ದ ಹಾಲಿನ ಪಾತ್ರದಲ್ಲಿ ನಾನು ಚೌತಿಯ ಚಂದ್ರಬಿಂಬವನ್ನು ನೋಡಿ ಕೇಕೆ ಹಾಕಿದೆ. 'ಅಯ್ಯೋ ! ಎಷ್ಟು ನಿಂದೆಗಳು ನಿನ್ನ ಮೇಲೆ ಬೀಳುತ್ತವೋ ಕಂದಾ' ಅಂತ ಯಶೋದಮ್ಮ ತುಂಬಾ

ನೊಂದುಕೊಂಡಳು. ' ದೊಡ್ಡವನಾದ ಮೇಲೆ ಕೂಡಾ ಅಪನಿಂದೆ ಬಂದೀತು ' ಅಂದಳು. ಅದಕ್ಕೆ ನಾನು ಹಾಗೆ ಮತ್ತೊಮ್ಮೆ ಚೌತೀ ಚಂದ್ರನನ್ನು ನೋಡಬೇಕಲ್ಲವೇ ಅಂತ ಕೇಳಿದೆ" ಎಂದು ಕೃಷ್ಣನು ನಿಲ್ಲಿಸಿದನು.

"ಹಾಗಾದರೆ ಆಗ ಬಂದ ಅಪನಿಂದೆ ಏನಾಯಿತು?" ಎಂದು ಕೇಳಿದಳು ರುಕ್ಮಿಣಿ.

"ಬಂತಲ್ಲಾ ನಿಂದೆ. ನಾನು ಮಣ್ಣು ತಿನ್ನುತ್ತೇನೆ ಅಂತ ಅಣ್ಣಯ್ಯ ಸುಳ್ಳು ಸುಳ್ಳೇ ದೂರು ಹೇಳಿಯೇ ಬಿಟ್ಟ" ಎಂದನು ಕೃಷ್ಣ.

"ಅಲ್ಲಿಗೇ ಹೋಯಿತು ಅನ್ನು. ಮತ್ತೆ ಈಗ ಏನಾಯಿತು ? ಚಂದ್ರನನ್ನು ನೋಡಲಿಲ್ಲವಷ್ಟೇ ? ಒಳ್ಳೇ ಕಾಲ, ನೋಡಬೇಕೆಂದರೂ ಕಾಣಿಸದು. ಆಕಾಶ ತುಂಬಾ ಮೋಡ ಕವಿದಿದೆ" ಎಂದು ಮತ್ತೇನೋ ಹೇಳಬೇಕೆಂದು ಅತ್ತಿತ್ತ ನೋಡಿದಳು.

"ಏಕೆ ಸುಮ್ಮನಾದೆ ರುಕ್ಮಿಣೀ ? ಏನೋ ಹೇಳಲು ಬಂದೆ. ಏನು ವಿಶೇಷ ?" ಎಂದು ಆತುರದಿಂದ ಕೇಳಿದನು ಕೃಷ್ಣ.

"ಬಲು ದೊಡ್ಡ ವಿಶೇಷ ಗೊತ್ತಾ ? ಆ ಸತ್ರಾಜಿತು ಮಹಾರಾಜರ ಮನೆಯೊಳಗಿನ ಮಣಿ ನಮ್ಮ ಮನೆಗೆ ಬಂದುಬಿಟ್ಟಿತು !" ಎಂದಳು ರುಕ್ಮಿಣಿ.

"ಶಮಂತಕ ಮಣಿ ನಮ್ಮ ಮನೆಗೆ ಬರುವುದೆಂದರೇನು ? ನಾನೆಂದೂ ನಂಬಲಾರೆ ! ಅದನ್ನು ಹೇಗೆ ಬರಲು ಬಿಟ್ಟಾನು ಸ್ವಾರ್ಥಿಯಾದ ಆ ಸತ್ರಾಜಿತು ?" ಎಂದು ಆಶ್ಚರ್ಯದಿಂದ ಕೇಳಿದನು ಕೃಷ್ಣ.

"ಆ ಮಣಿಯಲ್ಲ; ಸತ್ರಾಜಿತು ಅವರ ಕನ್ಯಾಮಣಿ, ಸುಂದರೀಮಣಿ, ಸತ್ಯಭಾಮಾಮಣಿ ಬಂದಿದ್ದಳು. ಬಹಳ ಹೊತ್ತಿನವರೆಗೆ ನಾವಿಬ್ಬರೂ ಮಾತಾಡಿಕೊಂಡಿದ್ದೆವು. ಮಾತಾಡುವಾಗೆಲ್ಲಾ ಆಚೆ ಈಚೆ ನೋಡಿ ನೋಡಿ ಹುಡುಕಿದಳು ಪಾಪ ! ಈಗಲೇ ಕಳುಹಿಸಿಕೊಟ್ಟು ಹೀಗೆ ಬಂದೆ. ನೀನು ಇಲ್ಲಿ ಹುದುಗಿದ್ದೀ ಕಳ್ಳನ ಹಾಗೆ !" ಎಂದಳು ರುಕ್ಮಿಣಿ.

ಕೃಷ್ಣನು ತಲೆಯಾಡಿಸುತ್ತ "ಚತುರ್ಥಿಯಲ್ಲವೇ ? ನಮ್ಮ ಮನೆಯ ವಿಘ್ನೇಶ್ವರನನ್ನು ನೋಡಲು ಬಂದಿರಬೇಕು. ನೀನು ಪೂಜಿಸಿದ ವಿಘ್ನೇಶ್ವರನನ್ನು ನೋಡಿದಳಷ್ಟೇ ?" ಎಂದನು ಕೃಷ್ಣ.

"ನೋಡಿದಳು ಪಾಪ ! ವಿಘ್ನೇಶ್ವರನನ್ನು ನೋಡಬೇಕೆಂದು ಬಂದಳೋ ನಿನ್ನ ಕಣ್ಣಿಗೆ ಬೀಳಬೇಕೆಂದು ಬಂದಳೋ ? ಅವಳ ಕಣ್ಣುಗಳು ನಿನ್ನನ್ನು ಹುಡುಕುವ ಹಾಗೆ ವಿಘ್ನೇಶ್ವರನನ್ನು ನೋಡಲೇ ಇಲ್ಲ !" ಎಂದು ರುಕ್ಮಿಣಿ ನಕ್ಕಳು.

"ಇದೆಂಥ ವಿಚಿತ್ರ ! ಸರಿಯಾಗಿ ಮಾತಾಡಲು ಬಾರದೆಂದುಕೊಂಡ ರುಕ್ಮಿಣೀದೇವಿ ಈ ದಿನ ಇಷ್ಟೊಂದು ಚಾತುರ್ಯವಾಗಿ ಮಾತಾಡುವಳಲ್ಲ !" ಎಂದು ಕೃಷ್ಣನು ರುಕ್ಮಿಣಿಯ ಮುಖ ನೋಡಿದನು.





ಕೃಷ್ಣನು ಆಶ್ಚರ್ಯಪಡುವುದನ್ನು ನೋಡಿ ರುಕ್ಮಿಣಿ ಚೆಂದುಟಿಗಳಲ್ಲಿ ಸ್ವಲ್ಪ ಮಾತ್ರ ಅರಳುವ ಹೂವಿನ ಹಾಗೆ ಮುಗುಳು ನಗುವನ್ನರಳಿಸಿ, "ಅಯ್ಯೋ ಪಾಪ ! ಏನೂ ತಿಳಿಯದೆಂದೇ ಆಗಲಿ. ನಾನೇ ಹೇಳುತ್ತೇನೆ. ನಾಥಾ ! ನನ್ನ ಮಾತನ್ನು ಸತ್ಯವೆಂದೇ ನಂಬು. ಈ ದಿನ ನನ್ನ ಹೃದಯದಲ್ಲಿ ಆನಂದವು ಉಕ್ಕುತ್ತಿದೆ. ಆ ಕನ್ಯಾಮಣಿ ಸತ್ಯಭಾಮೆ ನಿನ್ನ ಮೇಲೆ ಎಷ್ಟು ಆಸೆ ಇಟ್ಟಿರುವಳು ಗೊತ್ತೇ ? ಒಮ್ಮೆಗೇ ನಿನ್ನನ್ನು ಹಿಡಿದು ತನ್ನ ಮುಷ್ಟಿಯೊಳಗೆ ಇಟ್ಟುಕೊಳ್ಳಬೇಕೆಂದಿರುವಷ್ಟು ಮಮತೆ ಅವಳ ಕಣ್ಣಿನಲ್ಲಿರುವುದನ್ನು ನಾನು ನೋಡಿದೆ ಅಯ್ಯೋಪಾಪ ಅನಿಸುತ್ತದೆ." ಎಂದಳು.

"ಹಾಗಾದರೆ ನೀನು ? ನಿನ್ನನ್ನು ನೋಡಿ ಎಲ್ಲರೂ ಅಯ್ಯೋ ಪಾಪ ಅನ್ನಬೇಕಾದೀತಲ್ಲಾ!" ಎಂದು ಕೃಷ್ಣನು ಅವಳ ಮುಖವನ್ನು ಇನ್ನಿಷ್ಟು ಆಶ್ಚರ್ಯದಿಂದ ಕಣ್ಣುಗಳನ್ನು ಅರಳಿಸಿ ನೋಡಿದನು.

"ನಾನು ನಿನ್ನೊಂದಿಗಿನ ಅಣುಗಳೊಂದಿಗೆ ಅಣುವಾಗಿ ಇದ್ದೇನಲ್ಲಾ ! ಆಮೇಲೆ ನೀನು ಯಾರು ಮುಷ್ಟಿಯೊಳಗಿದ್ದರೂ ನಾನು ನಿನ್ನೊಳಗೆ ಇದ್ದೇ ಇರುತ್ತೇನೆ. ನಿನ್ನಿಂದ ಇತರರಿಗೆ ಸಂತೋಷವಾದರೆ ನನಗೂ ಅದು ಸಂತೋಷವೇ. ನನ್ನ ಸಂತೋಷ ನೋಡಿ ಎಲ್ಲರೂ ಸಂತೋಷಿಸುತ್ತಾರೆ." ಎಂದಳು ರುಕ್ಮಿಣಿ.

"ರುಕ್ಮಿಣೀ ! ಎಷ್ಟು ದೊಡ್ಡ ಭಾವನೆ ನಿನ್ನದು ! ಎಷ್ಟು ದೊಡ್ಡ ಮನಸ್ಸು ! ನೀನು ಅಂಥವಳಾದುದರಿಂದಲೇ ನನ್ನನ್ನು ಆಕರ್ಷಿಸಿ ನಿನ್ನನ್ನು ಎತ್ತಿಕೊಂಡು ಬರುವ ಹಾಗೆ ಮಾಡಿರುವಿ" ಎಂದನು ಕೃಷ್ಣ.

"ನಾನು ನನಗೆ ನಿಜವೆಂದು ತೋರುವುದನ್ನೇ ಹೇಳುತ್ತೇನೆ. ನನಗಿಂತಲೂ ಸತ್ಯಭಾಮೆಯದೇ ದೊಡ್ಡ ಮಮತೆ. ಅದು ತುಂಬ ಬಲವಾಗಿ, ಅನಂತವಾದ ಪ್ರಕೃತಿ ಶಕ್ತಿಯೊಂದಿಗೆ ಕೂಡಿದ್ದು, ನನ್ನಲ್ಲಿ ಭಕ್ತಿ ಪ್ರಧಾನ ಭಾವನೆಯೊಂದೇ" ಎಂದು ರುಕ್ಮಿಣಿ ಹೇಳಲು, ಕೃಷ್ಣನು ಮುಗುಳು ನಗುತ್ತ ಅವಳ ಬಾಯಿಯನ್ನು ಮುಚ್ಚಿ, "ಸಾಕು ಬಿಡು, ವೇದಾಂತ ಮಾತಾಡಬೇಡ" ಎಂದನು.

೧೪. ಸತ್ಯಭಾಮಾ ಪರಿಣಯ



ಮುಂದೆ ಕೆಲವು ದಿನಗಳು ಕಳೆಯಲು, ವಿನಾಯಕನ ಚತುರ್ಥಿಯ ದಿನ ಕೃಷ್ಣನು ಚಂದ್ರನ ಪ್ರತಿಬಿಂಬ ವನ್ನು ನೋಡಿದುದರ ಫಲ ಗೋಚರವಾಯಿತು. "ಶಮಂತಕಮಣಿಯನ್ನು ಕೃಷ್ಣನು ಅಪಹರಿಸಿ ಬಿಟ್ಟನು!" ಎಂಬ ವಾರ್ತೆ ಕಾಳ್ಗಿಚ್ಚಿನಂತೆ ನಾಲ್ಕು ಸುತ್ತಲೂ ಹರಡಿತು. ಸತ್ರಾಜಿತ್ತುವೇ ಹಾಗೆ ಹೇಳಿ ವಾರ್ತೆ ಹರಡುವಂತೆ ಮಾಡಿದ್ದನು. ಮಣಿಯನ್ನು ಕಳೆದುಕೊಂಡ ಸತ್ರಾಜಿತ್ತು ಆ ದುಃಖದಿಂದ ಹುಚ್ಚ ನಾಗಿ ಬೀದಿ ಬೀದಿ ತಿರುಗುತ್ತ, "ಕಳ್ಳ ಕೃಷ್ಣ, ಕಡೆಗೂ ನನ್ನ ಮಣಿ ಅಪಹರಿಸಿದ! ನನ್ನ ಸರ್ವಸ್ವವೂ ಹೋಯಿತು! ಏನು ಮಾಡಲಿ?" ಎಂದು ಕೈಕೈ ಹಿಸುಕುತ್ತ, ಕೂಗುತ್ತ, ತಿರುಗುತ್ತಿದ್ದನು.

ತನ್ನ ಮೇಲೆ ಬಿದ್ದ ವೃಥಾಪವಾದವನ್ನು ಹೋಗ ಲಾಡಿಸಿಕೊಳ್ಳಬೇಕಾದುದು ಕೃಷ್ಣನಿಗೆ ಅಗತ್ಯ ವಾಯಿತು. ಅದಕ್ಕಾಗಿ ಚಿಂತಿಸಿ ಪ್ರಯೋಜನವಿಲ್ಲ ವೆಂದು ಕೃಷ್ಣನು ದೃಢ ಚಿತ್ತನಾಗಿ "ವಿಘ್ನೇಶ್ವರಾ! ನಿನ್ನಮ್ಮನ ಶಾಪವನ್ನು ನಡೆಯಿಸುವಿಯಾ? ಇನ್ನಾದರೂ ದಯದೋರಪ್ಪಾ! ಅಪವಾದದಿಂದ ಪಾರುಮಾಡು!" ಎಂದು ಧ್ಯಾನಮಾಡಿ ಶಮಂತಕ ಮಣಿಯ ಅನ್ವೇಷಣೆಗೆ ಹೊರಟನು.

ಅದು ಅರಣ್ಯದಲ್ಲಿ ಕಳೆದು ಹೋಗಿರುವುದೆಂದು ತಿಳಿದು ಕೃಷ್ಣನು ಅರಣ್ಯಕ್ಕೆ ಹೋದನು. ನಡೆದ ಸಂಗತಿ ಏನೆಂದರೆ, ಸತ್ರಾಜಿತ್ತು ತನ್ನ ಮಗಳು ಸತ್ಯಭಾಮೆಯನ್ನು ತನ್ನ ಸೋದರಳಿಯನಾದ ಶತಧನ್ವನೆಂಬ ರಾಜನಿಗೆ ಕೊಟ್ಟು ವಿವಾಹ ಮಾಡ ಬೇಕೆಂಬ ನಿರ್ಣಯಕ್ಕೆ ಬಂದಿದ್ದನು. ಆ ಸಂಗತಿ ಯನ್ನು ಶತಧನ್ವನೊಂದಿಗೆ ಮಾತಾಡಲು ತನ್ನ ತಮ್ಮನಾದ ಪ್ರಸೇನಜಿತ್ತುವನ್ನು ಕಳುಹಿಸಿದ್ದನು. ಪ್ರಸೇನಜಿತ್ತು ಶಮಂತಕ ಮಣಿಯನ್ನು ಧರಿಸಿಕೊಂಡು ಅರಣ್ಯ ಮಾರ್ಗದಲ್ಲಿ ಹೋಗುತ್ತಿದ್ದಾಗ, ಒಂದು ಸಿಂಹವು ಆ ಮಣಿಯಿಂದ ಆಕರ್ಷಿತವಾಗಿ ಪ್ರಸೇನ ಜಿತ್ತುವನ್ನು ಕೊಂದುಹಾಕಿತ್ತು. ಆಗ ಜಾಂಬವಂತನು ಅದನ್ನು ನೋಡಿ ಸಿಂಹವನ್ನು ಕೊಂದು, ಆ ಮಣಿ ಯನ್ನು ತೆಗೆದುಕೊಂಡು ಹೋಗಿ ತನ್ನ ಕುಮಾರಿ ಜಾಂಬವತಿಯ ಕೈಗೆ ಕೊಟ್ಟನು.

ಮಣಿಯನ್ನು ಆಸೆಯಿಂದ ಕೇಳಿ ಎದೆಯ ಮೇಲೆ ಅಲಂಕರಿಸಿಕೊಂಡು ಹೋದ ತನ್ನ ತಮ್ಮನು ಹಿಂದಿರುಗಿ ಬಾರದಿರುವುದನ್ನು ನೋಡಿ, ಕೃಷ್ಣನ ಮೇಲೆಯೇ ಸತ್ರಾಜಿತ್ತುವಿಗೆ ಸಂಶಯವಾಯಿತು.

ಕೃಷ್ಣನು ಆ ಮಣಿಯನ್ನು ಕೇಳಿದ್ದನಷ್ಟೇ? ಅಂತಲೇ ಕೃಷ್ಣನು ತನ್ನ ತಮ್ಮನನ್ನು ಕೊಂದು ಶಮಂತಕ ಮಣಿಯನ್ನು ಅಪಹರಿಸಿಕೊಂಡು ಹೋದನೆಂದು ಸತ್ರಾಜಿತ್ತು ಹೇಳಿಕೊಂಡಿದ್ದನು. ಸತ್ಯಭಾಮೆಯನ್ನು ಮದುವೆಯಾಗಬೇಕೆಂದು ಜೊಲ್ಲು ಸುರಿಸಿಕೊಂಡಿದ್ದ ಶತಧನ್ವನು ಸತ್ರಾಜಿತ್ತುವನ್ನು ಸಮಾಧಾನಪಡಿಸುತ್ತ, ಜರಾಸಂಧನೇ ಮೊದಲಾದ ಕೃಷ್ಣನ ಶತ್ರುಗಳ ಹತ್ತಿರ ದೂರಿಕೊಂಡನು. ಅವರು ಸತ್ರಾಜಿತ್ತುವಿನ ಪಕ್ಷವಾಗಿ



ಕೃಷ್ಣನ ಮೇಲೆ ಹಗೆ ತೀರಿಸಲು ಸಹಾಯ ಮಾಡು ತ್ತೇವೆಂದು ಸುದ್ದಿ ಕಳುಹಿಸಿದರು.

ಇಲ್ಲಿ ಕೃಷ್ಣನು ಶಮಂತಕಮಣಿಯನ್ನು ಅನ್ವೇಷಿ ಸುತ್ತಾ, ಅರಣ್ಯದಲ್ಲಿ ಸತ್ತು ಬಿದ್ದ ಪ್ರಸೇನನನ್ನೂ, ಸಿಂಹವನ್ನೂ, ಜಾಂಬವಂತನು ಹೋದ ಪಾದ ಚಿಹ್ನಗಳನ್ನೂ ನೋಡಿ ಜಾಂಬವಂತನ ಗುಹೆಗೆ ಹೋದನು.

ಗುಹೆಯೊಳಗೆ ನವಯೌವನದಿಂದ ಸುಂದರಿಯಾದ ಜಾಂಬವತಿ ಶಮಂತಕ ಮಣಿಯನ್ನು ಚೆಂಡಿನ ಹಾಗೆ ಹಾರಿಸುತ್ತ ಆಟವಾಡುತ್ತಿದ್ದಳು. ಜಾಂಬವತಿ ಚಿಕ್ಕ ಮಗುವಾಗಿರುವಾಗಲೇ ಅರಣ್ಯದಲ್ಲಿ ಸಿಕ್ಕಿದ ಅನಾಥ ಶಿಶುವಾಗಿದ್ದ ರಾಜಪುತ್ರಿ. ಜಾಂಬವಂತನು ಅವಳನ್ನು ಎತ್ತಿಕೊಂಡು ಬಂದು ಅತ್ಯಂತ ವಾತ್ಸಲ್ಯದಿಂದ ಪೋಷಿಸಿ ಬೆಳೆಯಿಸಿದ್ದನು.

ಶಮಂತಕ ಮಣಿಯನ್ನು ತೆಗೆದುಕೊಳ್ಳಲು ಕೃಷ್ಣನು ಅವಳ ಕೈಯನ್ನು ಹಿಡಿದನು. ಜಾಂಬವತಿ ಕೃಷ್ಣ ನನ್ನು ನೋಡಿ ಕೈ ಬಿಡಿಸಿಕೊಳ್ಳಲು ಪ್ರಯತ್ನಿಸದೆ, ತಲೆ ತಗ್ಗಿಸಿ ನಾಚಿಕೊಂಡು ಕಡೆಗಣ್ಣಿನಿಂದ ಕೃಷ್ಣನನ್ನೇ ನೋಡಿಕೊಂಡಿರಲು, ಜಾಂಬವಂತನು ಗುಹೆಯೊಳಗೆ ಬಂದು ಕೃಷ್ಣನ ಮೇಲೆ ಲಂಘಿಸಿದನು. ಕೃಷ್ಣ ಜಾಂಬವಂತರೊಳಗೆ ಹನ್ನೆರಡು ದಿನಗಳವರೆಗೆ ದೊಡ್ಡ ಯುದ್ಧವೇ ನಡೆಯಿತು.

ಕಡೆಗೆ ಕೃಷ್ಣನು ಮುಷ್ಟಿಯಿಂದ ಜಾಂಬವಂತನ ಎದೆಯ ಮೇಲೆ ಒಮ್ಮೆ ಬಲವಾದ ಗುದ್ದು ಹೊಡೆದನು. ಆ ಹೊಡೆತದಿಂದ ಹಿಂದಿನ ಸಂಗಾತಿ ರಾಮನೇ ಈಗ ಕೃಷ್ಣನಾಗಿ ಅವತರಿಸಿದ್ದಾನೆಂದು ಜಾಂಬವಂತನಿಗೆ ತಿಳಿಯಿತು.

ಕೂಡಲೇ ಜಾಂಬವಂತನು ಕೃಷ್ಣನಿಗೆ ನಮಿಸಿ "ನನ್ನ ರಾಮಕೃಷ್ಣಾ ! ನನ್ನ ಅಜ್ಞಾನ ಕ್ಷಮಿಸು. ಜಾಂಬ ವತಿಯ ಕೈ ಹಿಡಿದಾಗಲೇ ನಾನು ತಿಳಿಯಬೇಕಿತ್ತು. ಇನ್ನು ಇವಳು ನಿನ್ನವಳೇ !" ಎಂದು ಹೇಳಿ, ಶಮಂತಕ ಮಣಿಯನ್ನೂ, ಜಾಂಬವತಿಯನ್ನೂ ಒಟ್ಟಿಗೇ ಕೃಷ್ಣನ ಕೈಗೆ ಸಮರ್ಪಿಸಿದನು.

ಕೃಷ್ಣನು ಜಾಂಬವತಿಯನ್ನೂ, ಜಾಂಬವಂತನನ್ನೂ ಕರೆದುಕೊಂಡು ದ್ವಾರಕೆಗೆ ಬಂದು, ಶಮಂತಕ ಮಣಿ ಯನ್ನು ಸತ್ರಾಜಿತ್ತುವಿಗೆ ಕೊಟ್ಟು ನಡೆದ ಸಂಗತಿ ಯನ್ನೆಲ್ಲಾ ಹೇಳಿದನು.

ಸತ್ರಾಜಿತ್ತು ಪಶ್ಚಾತ್ತಾಪದಿಂದ "ಕೃಷ್ಣಾ, ಧನ ವನ್ನು ಕಳೆದುಕೊಂಡ ಪಾಪಾತ್ಮನಾಗಿ ನಾನು ಆಲೋಚನೆಯನ್ನೇ ಮಾಡದೆ ಮಹಾ ಅಪರಾಧ ಮಾಡಿಬಿಟ್ಟೆನು. ನನ್ನನ್ನು ನೀನು ಇಷ್ಟಬಂದ ಹಾಗೆ ದಂಡಿಸಿಬಿಡು" ಎಂದನು.

"ಇನ್ನೇಕೆ ಬೇರೆ ದಂಡನೆ? ನಿಮ್ಮ ಪಶ್ಚಾತ್ತಾಪವೇ ದಂಡನೆಯೂ ಆಯಿತು. ನನ್ನ ಅಪವಾದ ಹೋಯಿತು! ಸಂತೋಷವಾಯಿತು" ಎಂದನು ಕೃಷ್ಣ.

ಆಗ ಸತ್ರಾಜಿತ್ತು ತನ್ನ ಅಪಚಾರಕ್ಕೆ ಪರಿಹಾರ ರೂಪವಾಗಿ ತನ್ನ ಜೀವವೆಂದು ಭಾವಿಸಿದ ಶಮಂತಕ



ಮಣಿಯನ್ನೂ, ಸತ್ಯಭಾಮೆಯನ್ನೂ ಕೃಷ್ಣನ ಮುಂದಿರಿಸಿ ಸ್ವೀಕರಿಸಬೇಕೆಂದು ಕೇಳಿಕೊಂಡನು.

ಕೃಷ್ಣನು ಸತ್ಯಭಾಮೆಯ ಕೈಯನ್ನು ಹಿಡಿದು ಸ್ವೀಕರಿಸಿಕೊಂಡು ಶಮಂತಕ ಮಣಿಯನ್ನು ಸತ್ರಾಜಿತ್ತುವೇ ಇಟ್ಟುಕೊಳ್ಳಬೇಕೆಂದು ಹೇಳಿ ತಿರುಗಿ ಕೊಟ್ಟನು. ಅದನ್ನು ನೋಡಿ ಸತ್ಯಭಾಮೆ, ಕೃಷ್ಣನು ತನ್ನವನಾದನೆಂಬ ಆನಂದದೊಂದಿಗೆ ತಂದೆಯನ್ನು ನೋಡಿ, "ನೋಡಿದಿರಾ ಅಪ್ಪಾ, ನಾನು ಹೆಚ್ಚಿನವಳೋ, ಮಣಿ ಹೆಚ್ಚಿನದೋ ಎಂಬುದು ಈಗ ಗೊತ್ತಾಯಿತಪ್ಪ ? ಇವೆಲ್ಲದಕ್ಕೂ ಮೂಲ ಕಾರಣನಾದ ವಿಘ್ನೇಶ್ವರನನ್ನು ಕೂಡಾ ಕಡಿಮೆ ಪಡಿಸಿ ಹಿಂದೊಮ್ಮೆ ಏನೋ ಹೇಳಿದಿರಿ. ವಿಘ್ನೇಶ್ವರನನ್ನು ನಂಬಿದವಳಾದ ನನ್ನ ಮನೋಭೀಷ್ಟ ಸಿದ್ಧಿಸಿತು ನೋಡಿದಿರಾ ?" ಎಂದು ಕಣ್ಣುಮುಚ್ಚಿ ವಿಘ್ನೇಶ್ವರನನ್ನು ಧ್ಯಾನಿಸಿ ಕೈಮುಗಿದಳು. ಕೃಷ್ಣನೂ ಸತ್ರಾಜಿತ್ತುವೂ ವಿಘ್ನೇಶ್ವರನನ್ನು ಧ್ಯಾನಿಸಿ ಕೈಮುಗಿದರು.

ಅಷ್ಟು ಮಾತ್ರವಲ್ಲದೆ ಸತ್ರಾಜಿತ್ತು ತನ್ನದು ತಪ್ಪಾಯಿತೆಂದು ಕ್ಷಮೆ ಕೇಳುತ್ತ ಗಲ್ಲ ಬಡಿದು ಮಂಡಿಯೂರಿ ಮಣಿದನು.

"ಸತ್ಯಭಾಮೆಯ ಮಾತು ನಿಜ. ಎಲ್ಲವೂ ವಿಘ್ನೇಶ್ವರನ ಲೀಲೆಯೇ! ಶಮಂತಕ ಮಣಿಗಿಂತಲೂ ಮೌಲ್ಯ ಉಳ್ಳವಳು ಸತ್ಯಭಾಮಾಮಣಿ ! ಗಣೇಶಾ ! ಹೀಗೆಯೇ ದಯವಿಡು !" ಎಂದು ಕೃಷ್ಣನೂ ಕೈ ಜೋಡಿಸಿದನು.

ಆಗ ಆಕಾಶದಲ್ಲಿ ವಿಘ್ನೇಶ್ವರನು ಸೊಂಡಿಲಾಡಿಸುತ್ತ ಪ್ರತ್ಯಕ್ಷನಾಗಿ, "ಭಗವಂತನು ಸತ್ಯಕ್ಕೆ ವಶನಾಗಿರುವವನು. ಸತ್ಯವೆಂದರೆ ಅವನಿಗೆ ಅತ್ಯಂತ ಪ್ರಿಯ. ಸತ್ಯವೇ ಅವನ ಸೊತ್ತು. ಅದರ ಪ್ರತಿರೂಪವೇ ಸತ್ಯಭಾಮ. ಸತ್ಯಭಾಮಾ ಪರಿಣಯದಿಂದ ಕೃಷ್ಣನಿಗೆ ಸತ್ಯಾಪತಿ ಎಂಬ ಹೆಸರು ಬಂತು" ಎಂದು ಹೇಳಿ ಸತ್ಯಾ ಕೃಷ್ಣರ ಮೇಲೆ ಪುಷ್ಪಾಂಜಲಿಗರೆದನು.

"ಶಮಂತಕ ಮಣಿ ಕಥೆ ಕೇಳಿದವರಿಗೆ ಅಪನಿಂದೆಗಳು ಬಾರವು" ಎಂದು ಹೇಳಿ ವಿಘ್ನೇಶ್ವರನು ಅಂತರ್ಧಾನನಾದನು.

ಸತ್ರಾಜಿತ್ತು ಕೃಷ್ಣನ ಕಾಲು ತೊಳೆದು ಕನ್ಯಾದಾನ ಮಾಡುವ ತನ್ನ ಅದೃಷ್ಟಕ್ಕೆ ಉಬ್ಬಿಕೊಳ್ಳುತ್ತ ಸತ್ಯಭಾಮಾ ಕೃಷ್ಣರ ವಿವಾಹವನ್ನು ಮಹಾ ವೈಭವದಿಂದ ಜರುಗಿಸಿದನು. ಅದಾದ ಮೇಲೆ ಕೃಷ್ಣನು ಜಾಂಬವತಿಯನ್ನು ಕೂಡಾ ವಿವಾಹ ಮಾಡಿಕೊಂಡನು. ಜಾಂಬವಂತನು ಕೃಷ್ಣನೊಂದಿಗೆ, "ಕೃಷ್ಣಾ, ನೀನು ರಾಮಾವತಾರದಲ್ಲಿದ್ದಾಗ ನಿನ್ನೊಂದಿಗೆ ಯುದ್ಧ ಮಾಡಬೇಕೆಂದಿರುವ ನನ್ನ ಅಭಿಲಾಷೆಯನ್ನು ಹೇಳಿದ್ದೆನು. ನಿನ್ನಂತಹ ಅಳಿಯನನ್ನು ಸಂಪಾದಿಸಿದ ಜನಕಮಹಾರಾಜನ ಅದೃಷ್ಟಕ್ಕೆ ಅಸೂಯೆಯಾಗಿದೆ ಎಂತಲೂ ತಿಳಿಸಿದ್ದೆ. ನನ್ನ ಆ ಎರಡು ಕೋರಿಕೆಗಳನ್ನೂ ಈಗ ತೀರಿಸಿದೆಯಲ್ಲಾ ! ನಾನೀಗ ಧನ್ಯನಾದೆ! ಜೀವನ್ಮುಕ್ತನಾದೆನು" ಎಂದು ಹೇಳಿ ತಪಸ್ಸು ಮಾಡಲಿಕ್ಕಾಗಿ ಅರಣ್ಯಕ್ಕೆ ಹೊರಟುಹೋದನು.

ಮುಂದೆ ಬೇಗದಲ್ಲಿ ಸತ್ರಾಜಿತ್ತು ಅಕಾಲಮರಣಕ್ಕೆ ತುತ್ತಾಗುವಂತಾಯಿತು. ಸತ್ಯಭಾಮೆ ಕೈ ತಪ್ಪಿದಳೆಂಬ ಸಿಟ್ಟಿನಿಂದ ಶತಧನ್ವನು ಸತ್ರಾಜಿತ್ತುವನ್ನು ಕೊಲೆ ಮಾಡಿ, ಶಮಂತಕಮಣಿಯನ್ನು ಅಪಹರಿಸಿಕೊಂಡು, ಕೃತವರ್ಮ ಮತ್ತು ಅಕ್ರೂರರ ಜತೆಯಲ್ಲಿ ಓಡಿ ಹೋದನು. ಕೃಷ್ಣನು ಸತ್ಯಭಾಮೆಯ ದುಃಖವನ್ನು ಸಮಾಧಾನಪಡಿಸಿ, ಶತಧನ್ವನನ್ನು ಹುಡುಕಿ ಹಿಡಿದು ಯುದ್ಧದಲ್ಲಿ ಕೊಂದನು. ಅಕ್ರೂರ, ಕೃತವರ್ಮರು ಮಣಿಯೊಂದಿಗೆ ಓಡಿಹೋದರು. ಕೃಷ್ಣನು ಅವರನ್ನೂ ಹುಡುಕಿ ಹಿಡಿದು ಮಣಿಯನ್ನು ವಶಪಡಿಸಿಕೊಂಡು ತಂದು ತಂದೆಯ ಜ್ಞಾಪಕಾರ್ಥವಾಗಿ ಇಟ್ಟುಕೊಳ್ಳುವಂತೆ ಸತ್ಯಭಾಮೆಗೆ ಕೊಟ್ಟನು.

ಅನಂತರ ಕೃಷ್ಣನು ಮಿತ್ರವಿಂದಾ, ಕಾಳಿಂದಿ, ಭದ್ರ, ನಾಗ್ನಜಿತಿ, ಲಕ್ಷಣ ಎಂಬ ಕನ್ಯೆಯರನ್ನು ಕೂಡಾ ಮದುವೆ ಮಾಡಿಕೊಂಡನು. ಎಂಟುಮಂದಿ ಹೆಂಡತಿಯರೊಂದಿಗೆ ಕೃಷ್ಣನು, ಭೋಗಭಾಗ್ಯಗಳೊಂದಿಗೆ ಸೊಗಸಾಗಿರಲು, ಪ್ರತಿವರ್ಷ ವಿನಾಯಕ ಚತುರ್ಥಿಯದಿನ ಸತ್ಯಭಾಮೆ ಎಲ್ಲರೊಂದಿಗೂ ಕೂಡಿ ವಿಘ್ನೇಶ್ವರನನ್ನು ಪೂಜಿಸುತ್ತಿದ್ದಳು.

ಶಮಂತಕಮಣಿಯ ಪ್ರಭಾವದಿಂದ ಸತ್ಯಭಾಮೆಯ ಅಂತಃಪುರದಲ್ಲಿ ಅಪಾರವಾಗಿ ಬಂಗಾರವು ತುಂಬಿಕೊಳ್ಳುತ್ತಿದ್ದಿತು. ಆದರಿಂದ ಸತ್ಯಭಾಮೆ ರತ್ನರಾಶಿಗಳನ್ನೂ ಅಮೂಲ್ಯ ಆಭರಣಗಳನ್ನೂ, ಬಂಗಾರದ ಜರಿಗಳ ಬಟ್ಟೆಗಳನ್ನೂ, ಇನ್ನೆಷ್ಟೋ ಅಲಂಕಾರಗಳನ್ನೂ ಮಾಡಿಸಿ ಅರಮನೆಯನ್ನು ಸೌಂದರ್ಯದಿಂದ ಜಗಜಗಿಸಿದಳು. ಅಷ್ಟಮಹಿಷಿಗಳಲ್ಲಿ ತಾನೇ ಐಶರ್ಯವಂತಳೆಂಬ ಸಂಪದ್ಗರ್ವವೂ, ತಾನೇ ಹೆಚ್ಚಿನವಳಾಗಿ ಕೃಷ್ಣನಿಗೆ ಎಲ್ಲರಿಗಿಂತ ತಾನೇ ಹೆಚ್ಚಿನವಳೆಂಬ ಅಹಂಭಾವವೂ ಅವಳಲ್ಲಿ ಕ್ರಮವಾಗಿ ತಲೆಯೆತ್ತುತ್ತಾ ಬೆಳೆಯಲು ತೊಡಗಿತು.



ಕೃಷ್ಣನ ಅಷ್ಟಮಹಿಷಿಯರಲ್ಲಿ ಜಾಂಬವತಿ ಮಹಾ ವೈಣಿಕ ವಿದ್ವಾಂಸಳಾಗಿದ್ದಳು. ನಾರದನು ತನ್ನ ಮಹತೀ ವೀಣೆಯನ್ನು ಮೀಟುತ್ತ, ಗಗನಮಾರ್ಗದಲ್ಲಿ ಹೋಗುತ್ತಿದ್ದಾಗ, ಯಾರೋ ಅವನನ್ನೇ ನೋಡಿ ಪರಿಹಾಸಮಾಡುವ ಹಾಗೆ ಗಹಗಹಿಸಿ ನಗುವುದು ಕೇಳಿಸಿತು.

"ಯಾರಿದು ನಗುವುದು? ಏತಕ್ಕಾಗಿ ಈ ನಗು?" ಎಂದು ನಾರದನು ನಾಲ್ಕು ದಿಕ್ಕುಗಳನ್ನೂ ನೋಡಿದನು.

"ನಾರದಾ! ನಿನ್ನ ಮಹತೀ ವೀಣೆಯಲ್ಲಿ ನೀನಿನ್ನೂ ತುಂಬಾ ಕಲಿಯಲಿಕ್ಕಿದೆ. ನಿನ್ನ ವೀಣಾ ಗಾನಕ್ಕೆ ನೀನು ಆನಂದಿಸಿಕೊಳ್ಳುವುದನ್ನು ನೋಡಿ ನನಗೆ ನಗೆ ಬಂತು!" ಎಂದು ಆ ಅಶರೀರವಾಣಿ ಉತ್ತರಕೊಟ್ಟಿತು.

"ಏನಂದಿ? ನನಗೆ ಕಲಿಸಿಕೊಡುವವರೂ ಇದ್ದಾರೇನು?" ಎಂದು ನಾರದನು ತನಗೆ ತಾನೇ



ಪ್ರಶ್ನಿಸಿಕೊಳ್ಳಲು, ವಿಘ್ನೇಶ್ವರನು ಅವನ ಮುಂದೆ ಸಾಕ್ಷಾತ್ಕಾರಗೊಂಡು, "ಯಾಕಿಲ್ಲ? ಕೃಷ್ಣನ ಪತ್ನಿ ಜಾಂಬವತಿಯ ಹತ್ತಿರ ಹೋಗಿ ವೀಣಾವಾದ್ಯದ ಸೂಕ್ಷ್ಮ ತಂತುಗಳನ್ನೆಲ್ಲಾ ಚೆನ್ನಾಗಿ ಕಲಿತುಕೋ" ಎಂದನು.

ನಾರದನು ಕೃಷ್ಣನ ಅನುಗ್ರಹ ಪಡೆದು ಜಾಂಬವತಿಯಿಂದ ವೀಣಾನಾದದಲ್ಲಿರುವ ಸೂಕ್ಷ್ಮವಾದ ನಾದಾಲಾಪನೆಯ ವಿಧಾನಗಳನ್ನು ಕಲಿತು ಪ್ರವೀಣನಾದನು.

ಒಂದು ದಿನ ಕೃಷ್ಣನು ರುಕ್ಮಿಣಿಯ ಅಂತಃಪುರದಲ್ಲಿರುವಾಗ ದೇವಲೋಕದಿಂದ ಬಂದ ನಾರದನು ವಿಶೇಷ ಪರಿಮಳ ಬೀರುವ ಪಾರಿಜಾತ ಪುಷ್ಪವನ್ನು ತಂದು ಕೃಷ್ಣನಿಗೆ ಕೊಟ್ಟನು. ಕೃಷ್ಣನು ಅದನ್ನು ರುಕ್ಮಿಣಿಗೆ ಕೊಟ್ಟನು. ಈ ಸಂಗತಿಯನ್ನು ಕೇಳಿ ಸತ್ಯಭಾಮೆಗೆ ಸಿಟ್ಟು ಬಂದಿತು. ಅವಳು ಕೃಷ್ಣನೊಂದಿಗೆ ತನ್ನ ಸಿಟ್ಟನ್ನು ಪ್ರದರ್ಶಿಸಲು, ಕೃಷ್ಣನು ಅವಳನ್ನು ಸಮಾಧಾನಪಡಿಸಿ, ಅವಳೊಂದಿಗೆ ಗರುಡಾರೂಢನಾಗಿ ಸ್ವರ್ಗಕ್ಕೆ ಹೋಗಿ, ಅಲ್ಲಿಯ ನಂದನವನದಲ್ಲಿದ್ದ ಪಾರಿಜಾತ ವೃಕ್ಷವನ್ನೇ ತಂದು ಸತ್ಯಭಾಮೆಯ ಮನೆಯ ಹಿಂಭಾಗದಲ್ಲಿ ನೆಟ್ಟನು. ಆದರೂ ಕೃಷ್ಣನಿಗೆ ತನ್ನ ಮೇಲೆ ಪ್ರೇಮ ತಗ್ಗಿರುವುದೆಂದೇ ಸತ್ಯಭಾಮೆಗೆ ದಿಗಿಲು ಹಿಡಿದು ಕೊಂಡಿತ್ತು. ಪಾರಿಜಾತ ವೃಕ್ಷವೇ ಮನೆಗೆ ಬಂದರೂ ಅದು ತನ್ನ ಕೋಪದಿಂದ ಬಂದಿತೇ ಹೊರತು, ಕೃಷ್ಣನು ತಾನಾಗಿ ಕೊಟ್ಟುದಲ್ಲ. ಹೇಗಾದರೂ ಮಾಡಿ ಕೃಷ್ಣನನ್ನು ತನ್ನ ಮಂದಿರದಲ್ಲೇ ಇರಿಸಿಕೊಳ್ಳುವ ಹಾಗೆ ಮಾಡಿಕೊಂಡರೇನೇ ಅವಳ ಮನಸ್ಸಿಗೆ ಶಾಂತಿ.

ಅಂತಲೇ ಒಂದು ದಿನ ನಾರದನು ಅದಳ ಮನೆಗೆ ಬಂದಾಗ, ತನ್ನ ಹೃದ್ಗತವನ್ನು ಅವನೊಡನೆ ಹೇಳಿದಳು. ಪಣ್ಯಕ ವ್ರತವನ್ನು ಆಚರಿಸಿದರೆ ಕೃಷ್ಣನು ಅವಳ ಅಧೀನದಲ್ಲೇ ಇರುವನೆಂದು ನಾರದನು ಹೇಳಿದನು. ಸತ್ಯಭಾಮೆ ಆ ವ್ರತಕ್ಕೆ ಪ್ರಾರಂಭಿಸಿ, ಅದರಲ್ಲಿ ಬರುವ ನಿಯಮದ ಪ್ರಕಾರ ಕೃಷ್ಣನನ್ನು ನಾರದನಿಗೆ ದಾನವಾಗಿ ಕೊಟ್ಟಳು. ಅನಂತರ ತನಗೆ ಕೃಷ್ಣನಷ್ಟು ಭಾರದ ಬಂಗಾರವನ್ನು ಕೊಟ್ಟರೆ ಕೃಷ್ಣನನ್ನು ಬಿಟ್ಟು ಕೊಡುವುದಾಗಿ ನಾರದನು ಹೇಳಿದ್ದನು.

ಸತ್ಯಭಾಮೆ ತನ್ನ ಮನೆಯಲ್ಲಿರುವ ಬಂಗಾರವನ್ನೆಲ್ಲಾ ಕೃಷ್ಣತುಲಾಭಾರಕ್ಕೆ ಹಾಕಿದಳು, ಶಮಂತಕ ಮಣಿಯನ್ನೂ ಹಾಕಿದ್ದಾಯಿತು. ಆದರೂ ಕೃಷ್ಣನ ತಕ್ಕಡಿತಟ್ಟೆ ಮೇಲೇಳಲಿಲ್ಲ. ಆಗ ಸತ್ಯಭಾಮೆ ಗರ್ವವನ್ನು ಬಿಟ್ಟು, ರುಕ್ಮಿಣಿಯೊಂದಿಗೆ ತನ್ನ ಸಮಸ್ಯೆಯನ್ನು ಹೇಳಿ ಇದಕ್ಕೆ ಏನು ಮಾಡುವುದೆಂದು ಕೇಳಿದಳು.

"ತಂಗೀ, ಕೃಷ್ಣನೊಂದಿಗೆ ಸರಿದೂಗುವ ಸಂಪತ್ತೆಂದರೆ ಭಕ್ತಿಯೊಂದೇ! ಭಕ್ತಿಪೂರ್ವಕವಾಗಿ ಒಂದು ತುಲಸೀದಳವನ್ನು ಹಾಕಿದರೂ ಸಾಕು"

ಎಂದು ಹೇಳಿ ಸತ್ಯಭಾಮೆಯ ಕೈಗೆ ಒಂದು ದಳ ತುಲಸಿಯನ್ನು ತಂದು ಕೊಟ್ಟಳು.

ಸತ್ಯಭಾಮೆ ಆ ತುಲಸೀದಳವನ್ನು ಭಕ್ತಿಯಿಂದ ಧ್ಯಾನಿಸುತ್ತ ತಕ್ಕಡಿ ತಟ್ಟೆಯಲ್ಲಿ ಹಾಕಿದಳು. ಕೂಡಲೇ ಕೃಷ್ಣನು ಕುಳಿತ ತಟ್ಟೆ ಮೇಲಕ್ಕೆದ್ದು ಸಮಾನ ತೂಕ ತೋರಿಸಿತು. ಆಗ ನಾರದನು ತುಲಸೀದಳವನ್ನು ಮಾತ್ರ ತೆಗೆದುಕೊಂಡು, ಕೃಷ್ಣನನ್ನು ಸತ್ಯಭಾಮೆಯ ಪರಮಾಡಿ ಹೊರಟು ಹೋದನು.

ಕೃಷ್ಣತುಲಾಭಾರದಿಂದ ಸತ್ಯಭಾಮೆಗೆ ಜ್ಞಾನೋದಯವಾಯಿತು. ಐಶ್ವರ್ಯದ ಮೇಲೆ ವ್ಯಾಮೋಹವು ಹೋಯಿತು. ಕೃಷ್ಣನೇ ತನ್ನ ಪರಮೈಶ್ವರ್ಯವೆಂಬ ಮಹಾಭಕ್ತಿ ಭಾವ ಉಂಟಾಯಿತು.

ಶಮಂತಕ ಮಣಿಯಿಂದ ಲಭ್ಯವಾಗಿದ್ದ ಬಂಗಾರವನ್ನೆಲ್ಲಾ ಕೃಷ್ಣನು ಹೇಳಿದಂತೆ ಸತ್ಯಭಾಮೆ ಯಾತ್ರಿಕರಿಗೂ, ಪ್ರಯಾಣಿಕರಿಗೂ ಭೋಜನ ವಸತಿ ಸೌಕರ್ಯಗಳು ಕೂಡಿದ ಧರ್ಮಶಾಲೆಗಳನ್ನು ದೇಶದೊಳಗೆಲ್ಲಾ, ತಂದೆಯ ಸ್ಮೃತಿಚಿಹ್ನೆಗಳಾಗಿರುವಂತೆ ಏರ್ಪಡಿಸಿದಳು. ಆ ಧರ್ಮಶಾಲೆಗಳು ಸತ್ರಾಜಿತ್ತುವಿನ ಹೆಸರು ಸ್ಫುರಿಸುವಂತೆ "ಸತ್ರ"ಗಳೆಂದೂ ಕರೆಯಲ್ಪಟ್ಟುವು.

ಅನಂತರ ಮುಂದೆ ಕೃಷ್ಣ ಬಲರಾಮರ ತಂಗಿಯಾದ ಸುಭದ್ರೆಗೆ ಅರ್ಜುನನೊಂದಿಗೆ ವಿವಾಹ ನಡೆದಾಗ, ಸತ್ಯಭಾಮೆ ಶಮಂತಕಮಣಿಯನ್ನು ಸುಭದ್ರೆಗೆ ಉಡುಗೊರೆಯಾಗಿ ಕೊಟ್ಟಳು. ಹೀಗೆ ಆ ಮಣಿ ಪಾಂಡವರಿಗೆ ದೊರೆಯಿತು.

ಆ ಮಣಿಯಿಂದ ಶೇಖರಿಸಲ್ಪಟ್ಟ ಬಂಗಾರವು ಧರ್ಮರಾಜನ ರಾಜಸೂಯಯಾಗಕ್ಕೆ ಚೆನ್ನಾಗಿ ಉಪಯೋಗಪಟ್ಟಿತು. ತರುವಾಯ ಧರ್ಮರಾಜನು ಜೂಜಾಡಿ, ತಾನು ಮಾತ್ರವಲ್ಲದೆ ತಮ್ಮಂದಿರನ್ನೂ, ದ್ರೌಪದಿಯನ್ನೂ ಪಣವೊಡ್ಡಿ ಸೋತು ಹೋದನು. ದುರ್ಯೋಧನನು ದ್ರೌಪದಿಯನ್ನು ಅವಮಾನಪಡಿಸಿದನು. ಕಡೆಗೆ ಪಾಂಡವರು ವನವಾಸಕ್ಕೆ ಹೋದರು. ಈ ಎಲ್ಲಾ ದುಷ್ಪರಿಣಾಮಗಳಿಗೂ ಶಮಂತಕಮಣಿಯೇ ಕಾರಣವೆಂದು ಪಾಂಡವರ ಪುರೋಹಿತನಾದ ಧೌಮ್ಯನಿಗೆ ತೋರಿತು. ಅಂತಲೇ ಅದನ್ನು ವಿಸರ್ಜಿಸಬೇಕೆಂದು ಧೌಮ್ಯನು ಹೇಳಲು, ಅರ್ಜುನನು ಅದನ್ನು ತನ್ನ ಬಿಲ್ಲಿಗೆ ಸಂಧಿಸಿ ಬಲವಾಗಿ ಭೂಮಿಯ ಕಡೆಗೆ ಹೊಡೆದನು. ಶಮಂತಕಮಣಿ ಭೂಗರ್ಭದೊಳಗೆ ನಿಕ್ಷಿಪ್ತವಾಗಿ ಹೋಯಿತು.

ಪಾಂಡವರು ವನವಾಸದನಂತರ, ಅಜ್ಞಾತವಾಸಕ್ಕೆ ಹೊರಡುವಾಗ ನಾರದನು ಬಂದು, ಆದಿಪೂಜಕನಾದ ವಿಘ್ನೇಶ್ವರನನ್ನು ವ್ರತ ಹಿಡಿದು ಪೂಜಿಸಿ, ಅಜ್ಞಾತವಾಸ ಕೈಗೊಳ್ಳುವಂತೆ ಹೇಳಿದನು.






# ವಿಘ್ನೇಶ್ವರ

ನಾರದನು ಹೇಳಿದ ಹಾಗೆಯೇ ಪಾಂಡವರು ವಿಘ್ನೇಶ್ವರನನ್ನು ಆರಾಧಿಸಲು ತೊಡಗಿ, ಧೌಮ್ಯನ ಪೌರೋಹಿತ್ಯದಲ್ಲಿ ಗಣೇಶ ವ್ರತವನ್ನು ಕೈಕೊಂಡು, ಮುಗಿಸಿದರು. ಆಮೇಲೆ ತಮ್ಮ ವೇಷಗಳನ್ನು ಬದಲಾಯಿಸಿಕೊಂಡು. ಬೇರೆಬೇರೆಯಾಗಿ ಹೋಗಿ ವಿರಾಟ ರಾಜನ ಆಶ್ರಯದಲ್ಲಿ ಸೇರಿಕೊಂಡು. ತಮ್ಮ ಅಜ್ಞಾತವಾಸವನ್ನು ಜಯಪ್ರದವಾಗಿ ಮುಗಿಸಿದರು.

ಆಮೇಲೆ ಕೃಷ್ಣನ ಸಹಾಯದಲ್ಲಿ ಪಾಂಡವರು ಕೌರವರೊಂದಿಗೆ ಕೊನೆಯ ಮಹಾಯುದ್ಧವನ್ನು ಮಾಡಿ ವಿಜಯಿಗಳಾದರು. ಆದರ ಫಲವಾಗಿ ಹಸ್ತಿನಾಪುರದಲ್ಲಿ ಧರ್ಮರಾಜನು ಪಟ್ಟಾಭಿಷಿಕ್ತನಾಗಿ ರಾಜ್ಯಪಾಲನೆಯನ್ನು ಕೈಕೊಂಡನು. ಅಷ್ಟಾದ ಮೇಲೆ ಧರ್ಮರಾಜನು ಅಶ್ವಮೇಧಯಾಗ ಮಾಡಲು ಆಲೋಚನೆ ಮಾಡಿದನು.

ಯಾಗಾಶ್ವವನ್ನು ದೇಶಗಳ ಮೇಲೆ ಕಳುಹಿಸುವಾಗ, ಅರ್ಜುನನು ಸೈನ್ಯಸಮೇತನಾಗಿ ಯಾಗಾಶ್ವದ ಹಿಂದೆ ಹೊರಟನು. ಪಾಂಡವರ ಪುರೋಹಿತನಾದ ಧೌಮ್ಯನೂ ಅರ್ಜುನನೊಂದಿಗಿದ್ದನು.

ಯಾಗಾಶ್ವವು ಅನೇಕ ರಾಜ್ಯಗಳ ಮೇಲಿಂದಾಗಿ ಸಾಗುತ್ತಿದ್ದಿತು. ಅನೇಕ ರಾಜರು ಧರ್ಮರಾಜನ ಪಾಲನೆಯನ್ನು ಒಪ್ಪಿಕೊಂಡು ವಿನಯವಿಧೇಯತೆಗಳಿಂದ ವರ್ತಿಸಿದರು; ಕಾಣಿಕೆಗಳನ್ನು ಸಮರ್ಪಿಸಿದರು. ಹೀಗೆ ಹೋಗುತ್ತಾ ಇದ್ದ ಯಾಗಾಶ್ವವು ಒಂದು ಪ್ರಾಂತದಲ್ಲಿ, ಮುಂದೆ ಹಜ್ಜೆಯಿಡದೆ ಸುಮ್ಮನೆ ನಿಂತುಬಿಟ್ಟಿತು. ಏನು ಮಾಡಿದರೂ ಮುಂದೆ ಕಾಲ್ತೆಗೆಯಲು ಯಾಗಾಶ್ವವು ಒಪ್ಪಲಿಲ್ಲ.

ಅರ್ಜುನನು ಆಶ್ಚರ್ಯಪಟ್ಟು, ಕುದುರೆ ಹಾಗೆ ನಿಲ್ಲಲು ಕಾರಣವೇನೆಂದು ಧೌಮ್ಯನನ್ನು ಕೇಳಿದನು. ಧೌಮ್ಯನು, ಹೇಳುತ್ತೇನೆ, ಬಾರೆಂದು ಅರ್ಜುನನನ್ನು ಸೈನ್ಯದೊಂದಿಗೆ ಸ್ವಲ್ಪ ದೂರ ಕರೆದುಕೊಂಡು ಹೋದನು. ಅಲ್ಲಿ ದೊಡ್ಡದೊಂದು ಮಹಾನಗರವು ಕಂಡಿತು. ಆ ಮಹಾನಗರದಲ್ಲಿ ಬ್ರಹ್ಮಾಂಡದಂತಹ ವಿಘ್ನೇಶ್ವರನ ವಿಗ್ರಹವೊಂದು ಕಾಣುತ್ತಿತ್ತು.

೧೫. ವಾತಾಪಿಗಣಪತಿ



ದೊಡ್ಡದೊಂದು ಬಂಡೆ ಕಲ್ಲಿನಲ್ಲಿಯೇ ಕೊರೆದು ಮಾಡಲ್ಪಟ್ಟ ಶಿಲ್ಪವಾಗಿತ್ತು ಅದು. ಅತ್ಯಂತ ಅದ್ಭುತವಾದ ಕಲಾಕೌಶಲಗಳಿಂದ ಅದು ಶೋಭಿಸಿ ಕೊಂಡಿದ್ದಿತು,

ಧೌಮ್ಯನು ಅದನ್ನು ಅರ್ಜುನನಿಗೆ ತೋರಿಸಿ, "ಅರ್ಜುನಾ, ಮೊದಲು ಈ ವಿಘ್ನೇಶ್ವರಮೂರ್ತಿಯನ್ನು ಅರ್ಚಿಸಿ ಪ್ರಣಾಮಮಾಡು. ವಾತಾಪಿ ಗಣಪತಿ ಎಂದು ಹೆಸರುಪಡೆದ ಈ ವಿಘ್ನೇಶ್ವರನನ್ನು ಕುರಿತು, ಇದಕ್ಕೆ ಸಂಬಂಧಿಸಿದ ವಾತಾಪೀನಗರದ ವಿಶೇಷ ಸಮಾಚಾರವನ್ನು ಕುರಿತು ಸವಿಸ್ತಾರವಾಗಿ ಹೇಳುತ್ತೇನೆ." ಎಂದನು.

ಅರ್ಜುನನು ಆ ವಾತಾಪಿಗಣಪತಿಯನ್ನು ಭಕ್ತಿಯಿಂದ ಪೂಜಿಸಿ ಅನುಗ್ರಹಬೇಡಿಕೊಂಡು ಪ್ರಣಾಮ ಮಾಡಿದನು. ಧೌಮ್ಯನು ಅವನನ್ನು ಕರೆದುಕೊಂಡು ವಾತಾಪಿನಗರದ ಕಡೆಗೆ ಹೋದನು. ಕಳೆಗೆಟ್ಟು ಹೋಗಿದ್ದ ಆ ನಗರವು ಯಾವುದೋ ಒಂದು ಕಾಲದಲ್ಲಿ ಮಹಾವೈಭವದಿಂದ ಬೆಳಗಿಕೊಂಡಿದ್ದ ಛಾಯೆಗಳು ಕಾಣುತ್ತಿದ್ದುವು. ಈಗ ಆ ನಗರವು ಪಾಲಕರಿಲ್ಲದೆ ಪಾಳುಬಡೆದು ಬಿದ್ದಿತ್ತು. ಅಲ್ಲಿ ಲೆಕ್ಕವಿಲ್ಲದಷ್ಟು ಜನರೇನೋ ಇದ್ದರು.

ಅರ್ಜುನನನ್ನು ನೋಡಿ ಅವರು ಸಂತೋಷದಿಂದ ಸ್ವಾಗತ ವಚನಗಳನ್ನು ಹೇಳಿ, "ನೀವಾದರೂ ಈ ನಗರವನ್ನು ಪುನರುದ್ಧಾರ ಮಾಡಬೇಕು" ಎಂದು ಪ್ರಾರ್ಥಿಸಿಕೊಂಡರು.

"ಅರ್ಜುನಾ, ವಾತಾಪಿನಗರವೆಂದರೆ ಇದೇ. ನಗರದ ಮಧ್ಯದಲ್ಲಿರುವ ವಿಘ್ನೇಶ್ವರನು ಅಗಸ್ತ್ಯ ಮಹಾಮುನಿಯಿಂದ ಸ್ಥಾಪಿಸಲ್ಪಟ್ಟ ವಿಗ್ರಹ ರೂಪದಲ್ಲಿದ್ದಾನೆ. ಇದನ್ನು ವಾತಾಪಿಗಣಪತಿ ಕ್ಷೇತ್ರವೆಂತಲೂ ಹೇಳುತ್ತಾರೆ! ಇಲ್ಲಿಯ ವಿಶೇಷಗಳನ್ನು ಹೇಳುತ್ತೇನೆ ಕೇಳು" ಎಂದು ಧೌಮ್ಯನು ಹಿಂದಿನ ಸಮಾಚಾರವನ್ನೆಲ್ಲಾ ಹೇಳಿದನು :

ಗಂಗೆಯ ಬಿಂದುಗಳು ಕವೇರನೆಂಬ ರಾಜರ್ಷಿಯ ಕಮಂಡಲುವಿನೊಳಗೆ ಬಿದ್ದಾಗ ಅದು ಕಾವೇರಿಯ ರೂಪಧರಿಸಿ, ಅವಳು ಅವನ ಕುಮಾರಿಯಾಗಿ ಆಶ್ರಮದಲ್ಲೇ ದೊಡ್ಡವಳಾದಳು. ಅಗಸ್ತ್ಯನು ಆ ಕನ್ಯೆಯನ್ನು ನೋಡಿ, ಅವಳನ್ನು ತಾನು ವಿವಾಹ ಮಾಡಿಕೊಳ್ಳುತ್ತೇನೆಂದು ಕವೇರನೊಂದಿಗೆ ಹೇಳಿದನು.

ಅವನ ಇಷ್ಟಕ್ಕೆ ಕವೇರನು ಸಮ್ಮತಿಯನ್ನು ತಿಳಿಯಪಡಿಸಿ, "ನನ್ನ ಸಮ್ಮತಿಗಿಂತಲೂ ಮುಖ್ಯವಾಗಿ ಕಾವೇರಿಯ ಇಷ್ಟವನ್ನು ತಿಳಿಯುವುದು ಒಳ್ಳೆಯದಲ್ಲವೇ ?" ಎಂದನು.

ಅವಳ ಇಷ್ಟ ತಿಳಿಯಲಿಕ್ಕಾಗಿ ಅಗಸ್ತ್ಯನು ಕವೇರನ ಆಶ್ರಮದಲ್ಲಿಯೇ ಇರುತ್ತ ಕಾವೇರಿಯೊಂದಿಗೆ ಸಲಿಗೆಯಿಂದ ಪಳಗ ತೊಡಗಿದನು. ಒಂದು ದಿನ ಕಾವೇರಿ ಅವನೊಂದಿಗೆ, "ನಾವು ಸಹ್ಯಾದ್ರಿಗೆ ಹೋಗಿ ವನವಿಹಾರ ಮಾಡೋಣ"



ಎಂದಳು. ಅಂತೆಯೇ ಅಗಸ್ತ್ಯನು ಕಾವೇರಿಯನ್ನು ಸಹ್ಯಾದ್ರಿಗೆ ಕರೆದೊಯ್ದನು.

ಇಬ್ಬರೂ ಅಲ್ಲಿಯ ವನದಲ್ಲಿ ವಿಹರಿಸಿಕೊಂಡಿರಲು, ಒಂದು ಮಡುವಿನ ನೀರಿನಲ್ಲಿ ಅರಳಿದ ದೊಡ್ಡ ತಾವರೆ ಹೂವನ್ನು ನೋಡಿ, ಕಾವೇರಿ ಮುಗ್ಧಳಾಗಿ, ಅದನ್ನು ತೆಗೆಯಲು ಮಡುವಿನಲ್ಲಿ ಕಾಲಿಟ್ಟಳು. ನೀರನ್ನು ಮುಟ್ಟಿದ ಕೂಡಲೇ ಅವಳು ಒಮ್ಮೆಗೇ ಕರಗಿ ಜಲರಾಶಿಯಾಗಿ ಮಡುವಿನಲ್ಲಿ ತುಂಬಿ ಉಕ್ಕಿ ಸಹ್ಯಪರ್ವತಶಿಖರಗಳಿಂದ ಜಳಜಳನೆ ಜಾರಿಕೊಂಡು, ದೊಡ್ಡ ಗಂಭೀರ ನದಿಯಾಗಿ ತೆರೆಗಳೊಂದಿಗೆ ನಲಿಯುತ್ತ ಓಡ ತೊಡಗಿದಳು. ಅದು ಕಾವೇರಿ ನದಿಯೆಂದು ಬಹು ಪ್ರಸಿದ್ಧವಾಯಿತು. ಅದರೊಂದಿಗೆ ಅಗಸ್ತ್ಯನ ಕೋರಿಕೆಯೂ ಹೊರಟು ಹೋಯಿತು.

ಅಗಸ್ತ್ಯನು ಕಾವೇರಿಯನ್ನು ಮರೆಯಲಾಗದೆ. ಅವಳನ್ನೇ ಧ್ಯಾನಿಸಿಕೊಂಡು ಬಹಳಕಾಲ ಬ್ರಹ್ಮಚಾರಿಯಾಗಿದ್ದನು. ಆ ಸ್ಥಿತಿಯಲ್ಲೇ ದೊಡ್ಡ ತಪಸ್ಸನ್ನೂ ಮಾಡಿ ಋಷಿಶ್ರೇಷ್ಠನೆನಿಸಿಕೊಂಡನು.

ಒಂದು ದಿನ ಅವನು ಅರಣ್ಯದಲ್ಲಿ, ಮರದ ಕೊಂಬೆಗಳಲ್ಲಿ ತಲೆಕೆಳಗಾಗಿ ನೇತಾಡುತ್ತಿರುವ ಪಿತೃದೇವತೆಗಳನ್ನು ನೋಡಿ "ಯಾರು ನೀವು? ಹೀಗೇಕಿರುವಿರಿ?" ಎಂದು ಕೇಳಿದನು.

ಅವರು ನಿಟ್ಟುಸಿರುಬಿಟ್ಟು, "ನಮ್ಮ ಕಷ್ಟ ಏನೆಂದು ಹೇಳಲಿ? ನಮ್ಮ ವಂಶದವನಾದ ಅಗಸ್ತ್ಯನು ಗೃಹಸ್ಥನಾಗಿ ಸಂತಾನವಂತನಾಗುವವರೆಗೂ ನಾವು ಹೀಗೇ ಇರಬೇಕಾಗಿದೆ!" ಎಂದು ಉತ್ತರ ಕೊಟ್ಟರು.

ಅದನ್ನು ಕೇಳಿ ಅಗಸ್ತ್ಯನು ವಿವಾಹಮಾಡಿಕೊಳ್ಳುವ ಉದ್ದೇಶದಲ್ಲಿ ಜ್ಞಾನದೃಷ್ಟಿಯಿಂದ ತಕ್ಕ ಕನ್ಯೆಯನ್ನು ನೋಡಿದನು. ವಿದರ್ಭದ ರಾಜನಿಗೆ ಕಾವೇರಿಯ ಅಂಶದಿಂದ ಕುಮಾರಿಯೊಬ್ಬಳು ಹುಟ್ಟಿ ಲೋಪಾಮುದ್ರೆ ಎಂಬ ಹೆಸರಿನಲ್ಲಿ ಯುಕ್ತವಯಸ್ಸಿಗೆ ಬಂದಿರುವಳೆಂದು ಗೊತ್ತಾಯಿತು. ಅಗಸ್ತ್ಯನು ಅಲ್ಲಿಗೆ ಹೋಗಿ, ಕುಮಾರಿ ಲೋಪಾಮುದ್ರೆಯನ್ನು ತನಗೆ ವಿವಾಹಮಾಡಿಕೊಡಬೇಕೆಂದು ವಿದರ್ಭ ರಾಜನನ್ನು ಕೇಳಿದನು.

ಕಂದಮೂಲಗಳನ್ನು ತಿನ್ನುತ್ತ, ನಾರು ಬಟ್ಟೆ ಕಟ್ಟಿಕೊಂಡು ತಿರುಗುವ ಮುನಿಗೆ ಸುಕುಮಾರಿಯಾದ ರಾಜಕುಮಾರಿಯನ್ನು ಕೊಡುವುದಾದರೂ ಹೇಗೆ? ಕೊಡುವುದಿಲ್ಲವೆಂದರೆ ಮುನಿ ಶಪಿಸುವನೇನೋ ಎಂದು ರಾಜನಿಗೆ ಸಂಶಯ ಬಂದು ವ್ಯಾಕುಲಪಡ ತೊಡಗಿದನು. ಆಗ ಲೋಪಾಮುದ್ರೆ ತಂದೆಯ ಬಳಿಗೆ ಬಂದು, ಸ್ವಲ್ಪವೂ ಚಿಂತೆ ಮಾಡದೆ ತನ್ನನ್ನು ಅಗಸ್ತ್ಯ ಮಹಾಮುನಿಗೆ ಕೊಟ್ಟು ವಿವಾಹ ಮಾಡುವಂತೆ ಸಂತೋಷದಿಂದ ಹೇಳಿದಳು. ಅವಳು ಮನಃಪೂರ್ವಕವಾಗಿಯೇ ಹೇಳುವಳೆಂಬುದನ್ನು ದೃಢಪಡಿಸಿಕೊಂಡು ವಿದರ್ಭರಾಜನು ಆ ವಿಧವಾಗಿ



ಲೋಪಾಮುದ್ರೆಯನ್ನು ಅಗಸ್ತ್ಯ ಮಹರ್ಷಿಗೆ ಕೊಟ್ಟು ಮದುವೆ ಮಾಡಿ ಕಳುಹಿಸಿಕೊಟ್ಟನು.

ಅಗಸ್ತ್ಯಮುನಿ ಲೋಪಾಮುದ್ರೆಯೊಂದಿಗೆ ತನ್ನ ಆಶ್ರಮಕ್ಕೆ ಬಂದ ಮೇಲೆ ಒಂದು ದಿನ "ನಾನು ನಿನ್ನನ್ನು ಏಕೆ ವಿವಾಹಮಾಡಿಕೊಂಡೆನೆಂದರೆ, ನನ್ನ ಪಿತೃದೇವತೆಗಳನ್ನು ಪುನ್ನಾಮನರಕದಿಂದ ತಪ್ಪಿಸಲಿಕ್ಕಾಗಿಯೇ. ಇನ್ನು ಬೇಗದಲ್ಲೇ ನಿನ್ನಿಂದ ಸಂತಾನ ಪಡೆಯಬೇಕಾಗಿದೆ" ಎಂದನು.

ಆಗ ಅವಳು ತನ್ನ ಮಾಸಿದ ಸೀರೆಯನ್ನು ನೋಡಿಕೊಂಡು ಚಿಂತಿಸುತ್ತ, "ಆದಕ್ಕಾಗಿ ಆನಂದಿಸಬೇಕಾದರೆ ಬರಿಯ ಮದುವೆ ಮಾಡಿಕೊಂಡ ಮಾತ್ರಕ್ಕೆ ಆಯಿತೇ? ನಾನು ರಾಜನ ಮಗಳಾಗಿ ಹುಟ್ಟಿ ಬೆಳೆದವಳು. ನನಗೆ ಸರಿಹೋಗುವಂತಹ ಒಳ್ಳೊಳ್ಳೆಯ ಬಟ್ಟೆ ಬರೆಗಳೂ, ರತ್ನಾಭರಣಗಳೂ ಬೇಕು. ಅವುಗಳನ್ನು ಕೊಡುವುದು ನಿಮ್ಮ ವಿಧಿ. ಆದಕ್ಕಾಗಿ ಮೊದಲು ಬೇಕಾದುದು ಧನ. ಆದನ್ನು ಸಂಪಾದಿಸಬೇಕಾದುದು ನಿಮ್ಮ ಕರ್ತವ್ಯವಲ್ಲವೆ? ಮೊದಲು ಧನ ಸಂಪಾದನೆಗೆ ದಾರಿ ನೋಡಿರಿ. ಅದು ಮದುವೆಯಾಗುವಷ್ಟು ಸುಲಭವಲ್ಲವಷ್ಟೆ?" ಎಂದಳು.

ಅಗಸ್ತ್ಯನು ಹೆಂಡತಿಯ ಮಾತಿನ ನಿಜವನ್ನು ಅರಿತು ಧನ ಸಂಪಾದನೆ ಮಾಡಲು ಹೊರಟನು. ಅವನು ಅನೇಕ ರಾಜರ ಬಳಿಗೆ ಹೋಗಿ. ರಾಜ್ಯ ಪಾಲನೆಗೆ ಸರಿಯಾಗಿದ್ದು, ಹೆಚ್ಚಾಗಿರುವ ಧನವನ್ನು ತನಗೆ ಕೊಡುವಂತೆ ಕೇಳಿದನು. ಯಾವ ರಾಜನೂ ಉಳಿಯುವ ಧನದ ಲೆಕ್ಕ ಹೇಳದೆ ಹೋದನು. ಬದಲಾಗಿ ಪ್ರಜಾಪಾಲನೆಗೆ ಧನವು ಕಡಿಮೆಯಾಗುವುದೆಂದೇ ಹೇಳಿದರು. ಆದರ ಮೇಲೆ ತಮಗೆ ಕೂಡಾ ಧನಲಾಭವಾಗುವ ಮಾರ್ಗವಿದ್ದರೆ ಹೇಳಬೇಕೆಂದು ಅಗಸ್ತ್ಯನನ್ನೇ ತಿರುಗಿ ಕೇಳಿದರು.

ಇದರಿಂದ ಅಗಸ್ತ್ಯನು ಹತಾಶನಾಗಿ ಅರಣ್ಯ ಮಾರ್ಗದಲ್ಲಿ ಎಲ್ಲಿಗೋ ಹೋಗುತ್ತಾ ಇದ್ದನು. ಒಂದು ಕಡೆಯಲ್ಲಿ ಉನ್ನತವಾದೊಂದು ಮಹಾ ಶಿಲೆಯನ್ನು ನೋಡಿದನು. ಆ ಬಂಡೆಗಲ್ಲು ಲಂಬೋದರನಾದ ವಿಘ್ನೇಶ್ವರನನ್ನು ಹೋಲುವಂತೆ ಕಾಣುತ್ತಿದ್ದಿತು. ಆ ಮಹಾ ಶಿಲೆಯನ್ನೇ ವಿಘ್ನೇಶ್ವರನೆಂದು ಭಾವಿಸಿ ಅಗಸ್ತ್ಯನು ಅದಕ್ಕೆ ನಮಸ್ಕಾರ ಮಾಡಿ, "ಮಹಾ ಗಣಪತೀ, ತಪಸ್ಸಿನ ಹೊರತು ಬೇರೆ ಧ್ಯಾನವಿಲ್ಲದವನು ನಾನು. ಧನ ಸಂಪಾದನೆಗೆ ಬೇಕಾದ ವಿದ್ಯೆಗಳೊಂದೂ ನನಗೆ ತಿಳಿಯದು. ಆದರೂ ನನಗೆ ಈಗ ಬೇಕಾದ ಧನವು ಹೇಗೆ ಸಿಗುತ್ತದೆಂದು ನೀನೇ ತೋರಿಸಬೇಕು. ನನಗೊಂದು ಒಳ್ಳೆಯ ದಾರಿ ನೀನೇ ತೋರಿಸಯ್ಯಾ ವಿಘ್ನೇಶ್ವರಾ!" ಎಂದು ಬೇಡಿಕೊಂಡನು.

ಆಗ, "ಇದೇನು ಮಹರ್ಷೀ! ಬರೀ ಶಿಲೆಯೊಂದಿಗೆ ಏನೋ ಚರ್ಚೆ ಮಾಡುವಿಯಲ್ಲಾ?" ಎನ್ನುತ್ತ ವಿಘ್ನೇಶ್ವರನು ಅವನ ಮುಂದೆ ಸಾಕ್ಷಾತ್ಕಾರನಾದನು.



ಅಗಸ್ತ್ಯನು ವಿಘ್ನೇಶ್ವರನಿಗೆ ಪ್ರಣಾಮ ಮಾಡಿ, ತನ್ನ ಸಮಸ್ಯೆಯನ್ನೂ ಕೋರಿಕೆಯನ್ನೂ ಗಣಪತಿಯೊಂದಿಗೆ ಹೇಳಿದನು.

ಅದನ್ನು ಕೇಳಿ ವಿಘ್ನೇಶ್ವರನು ಮುಗುಳು ನಗುತ್ತ, "ಅಗಸ್ತ್ಯ ಮಹರ್ಷೀ! ಬರಬೇಕಾದ ಸ್ಥಳಕ್ಕೇ ಬಂದಿರುವಿ. ಯಾವನು ಬರಬೇಕೋ ಅವನೇ ಬಂದ ಹಾಗಾಯಿತು. ಇನ್ನು ಸ್ವಲ್ಪ ಹೊತ್ತಿಗೆ ದೊಡ್ಡ ಧರ್ಮಿಷ್ಠನ ಹಾಗೆ ಇಲ್ವಲನು ಬಂದು ನಿನ್ನನ್ನು ಭೋಜನಕ್ಕೆ ಆಮಂತ್ರಿಸುತ್ತಾನೆ. ತಪ್ಪದೆ ಹೋಗು. ಅನಂತ ಧನರಾಶಿ ಅವನ ಹತ್ತಿರ ಬಿದ್ದು ನರಳಿ ಕೊಂಡಿದೆ. ಇಲ್ವಲನ ಮೂಲಕ ನಿನ್ನಿಂದಾಗಬೇಕಾದ ಕಾರ್ಯ ಬಹಳ ಮಹತ್ವದ್ದು. ನಿನಗೂ ದೊಡ್ಡ ಲಾಭವಾಗುತ್ತದೆ." ಎಂದನು.

ಅಗಸ್ತ್ಯನು ಗಣಪತಿಯೊಂದಿಗೆ, "ದೇವಾ, ಈ ಮಹಾ ಶಿಲೆಯಲ್ಲಿ ನಿನ್ನ ಹೋಲಿಕೆಗಳು ನನಗೆ ಕಾಣುತ್ತವೆ. ಆದುದರಿಂದ ಈ ಶಿಲೆಯನ್ನು ಅಪೂರ್ವ ಗಣಪತಿ ವಿಗ್ರಹವಾಗುವ ಹಾಗೆ ರೂಪಿಸಬೇಕೆಂದು ನನಗೆ ಆಶೆ. ಈ ಆಶೆಯನ್ನೂ ಸಫಲಗೊಳಿಸು" ಎಂದು ಬೇಡಿದನು.

"ಹಾಗೆಯೇ ಆಗುತ್ತದೆಂದು ನಂಬು" ಎಂದು ಹೇಳಿ ವಿಘ್ನೇಶ್ವರನು ಅಂತರ್ಧಾನನಾದನು.

ಆ ಸಮಯಕ್ಕೆ ಅಗಸ್ತ್ಯನು ತುಂಬಾ ಬಳಲಿದ್ದನು. ಹಸಿವೂ ಬಹಳವಾಗಿ ಅವನನ್ನು ಪೀಡಿಸುತ್ತಿತ್ತು. ಆ ಶಿಲೆಗೆ ಒರಗಿ ಕುಳಿತುಕೊಂಡು ಆಯಾಸ ಪರಿಹಾರ ಮಾಡಿಕೊಳ್ಳುತ್ತಿರಲು, ಇಲ್ವಲನು ಕೆಲವಂದಿ ಅತಿಥಿಗಳನ್ನು ಕರೆದುಕೊಂಡು ತನ್ನತ್ತಲೇ ಬರುವುದನ್ನು ನೋಡಿದನು. ಜ್ಞಾನದೃಷ್ಟಿಯಿಂದ ಇಲ್ವಲನ ರಹಸ್ಯವೆಲ್ಲವೂ ಅಗಸ್ತ್ಯನಿಗೆ ಕ್ಷಣಮಾತ್ರದಲ್ಲಿ ಗೊತ್ತಾಯಿತು.

ಆ ಅರಣ್ಯದಲ್ಲಿ ವಾತಾಪಿ ಮತ್ತು ಇಲ್ವಲರೆಂಬ ಮಹಾ ಮಾಯಾವಿಗಳಾದ ರಾಕ್ಷಸರು ಅರಣ್ಯದಲ್ಲಿರುವ ಋಷಿಗಳನ್ನೂ, ಯಾತ್ರಿಕರನ್ನೂ, ಪ್ರಯಾಣಿಕರನ್ನೂ ಉಪಾಯವಾಗಿ ಕೊಂದು, ಅವರ ಹತ್ತಿರ ವಿದ್ದ ಧನವನ್ನು ದೋಚಿಕೊಂಡು ದೊಡ್ಡದೊಂದು ಕಲ್ಲಿನ ದುರ್ಗದೊಳಗೆ ಕೂಡಿಸಿಡುತ್ತಿದ್ದರು. ಧರ್ಮವೇ ಮೂರ್ತೀಭವಿಸಿದಂತಹ ಮಹಾರಾಜನ ವೇಷದಲ್ಲಿ ಇಲ್ವಲನು, ಅತಿಥಿಗಳಾಗಿ ಕರೆದುಕೊಂಡು ಬಂದವರಿಗೆ ತುಂಬಾ ವಿನಯ ವಿಧೇಯತೆಗಳಿಂದ ಮರ್ಯಾದೆ ಮಾಡಿ, ಕುಶಲಪ್ರಶ್ನೆ ಮಾಡಿಕೊಂಡಿರುವ ಸಮಯದಲ್ಲಿ, ವಾತಾಪಿ ಕೊಬ್ಬಿದ ದೊಡ್ಡ ಹೋತವಾಗಿ ಮಾರ್ಪಡುತ್ತಾನೆ. ಇಲ್ವಲನು ಆ ಹೋತವನ್ನು ಕೊಂದು ಅಡಿಗೆ ಮಾಡಿಸಿ, ಅತಿಥಿಗಳಿಗೆ ಮೇಕೆ ಮಾಂಸದ ಭೋಜನ ಬಡಿಸುತ್ತಾನೆ.

ಭೋಜನಾನಂತರ ಅತಿಥಿಗಳು ಭುಕ್ತಾಯಾಸದಿಂದ ವಿಶ್ರಮಿಸಿಕೊಂಡಿದ್ದ ಸಮಯದಲ್ಲಿ ಇಲ್ವಲನು ಕೊರಳೆತ್ತಿ "ಬಾರೋ ವಾತಾಪೀ" ಎಂದು ಕರೆಯುವನು. ವಾತಾಪಿ ಅತಿಥಿಗಳ ಹೊಟ್ಟೆಯನ್ನು ಸೀಳಿಕೊಂಡು ಬರುವನು. ಇಂತಹ ಆ ದುರ್ಮಾರ್ಗಿ



ಗಳ ಈ ಕೆಲಸವನ್ನು ತಿಳಿದು ಅಗಸ್ತ್ಯನಿಗೆ ಅತ್ಯಂತ ಕೋಪ ಉಂಟಾಯಿತು.

ಇಲ್ವಲನು ಅಗಸ್ತ್ಯನ ಬಳಿಗೆ ಬರುತ್ತಾ, 'ಇವನಾವನೋ ದೊಡ್ಡ ಋಷಿಯಾಗಿದ್ದಾನೆ. ಇಂತಹವರನ್ನು ಬದುಕಿರಲು ಬಿಡುವುದು ನನಗೆ ಒಳ್ಳೆಯದಲ್ಲ. ಇವನ ಕಣ್ಣು ಜ್ಞಾನ ದೃಷ್ಟಿಯುಳ್ಳದಾಗಿದೆ. ಇವನನ್ನು ಕೊಲ್ಲದೆ ಬಿಟ್ಟರೆ ಘಾತವಾದೀತು' ಅಂದುಕೊಂಡು, ಅಗಸ್ತ್ಯನಿಗೆ ವಿನಯದಿಂದ ವಂದಿಸಿ, ಈ ಹೊತ್ತಿಗೆ ತನ್ನ ಅತಿಥಿಯಾಗಿ ಬಂದು ತನ್ನ ಮನೆಯನ್ನು ಪಾವನಮಾಡಬೇಕೆಂದು ಆಹ್ವಾನಿಸಿದನು.

ಅಗಸ್ತ್ಯನು ತುಂಬ ಹಸಿದವನಂತೆ, ಆತ್ಮಾನಂದವನ್ನು ತೋರಿಸಿ, "ಓ ಧರ್ಮದಾತಾ! ನಿನ್ನಂತಹ ಉತ್ತಮ ರಾಜರಿರುವುದರಿಂದಲೇ ಈ ಭೂಮಂಡಲವು ಅನಂತಾಕಾಶದಲ್ಲಿ ನಿಂತಿದೆ. ಎಲ್ಲಿ ನಿಮ್ಮ ಮನೆ, ಬಹಳ ದೂರವೇನಿಲ್ಲವಷ್ಟೆ?" ಎಂದು ಇಲ್ವಲನೊಂದಿಗೆ ಹೊರಟನು.

"ಅದೋ, ಅಲ್ಲಿ ಕಾಣುತ್ತಿದೆಯಲ್ಲಾ, ಕಲ್ಲಿನ ಅರಮನೆ. ಅದೇ" ಎಂದನು ಇಲ್ವಲ ನಡೆಯುತ್ತಾ.

"ಅಯ್ಯಾ ಧರ್ಮದಾತಾ! ಒಂದು ಪ್ರತ್ಯೇಕ ಪ್ರಾರ್ಥನೆ. ಸಾವಿರ ಯಾಗಗಳನ್ನು ಮಾಡಿಸಿ ಉಪವಾಸವಿದ್ದ ನನಗೆ ನೀನು ಮಾಡಿಸಿದ ಅಡಿಗೆಯನ್ನು ಮೊದಲು ನನಗೇ ಬಡಿಸಿಬಿಡು. ಊಟವೆಂಬ ಹೆಸರು ಕೇಳಿದ ಕೂಡಲೇ ನನ್ನ ಹೊಟ್ಟೆಯ ಹಸಿವೆ ಭುಗಿಲೆದ್ದುಬಿಟ್ಟಿತು. ಆ ಹೆಸರು ಕೇಳದಿರುತ್ತಿದ್ದರೆ ಇನ್ನೆಷ್ಟು ದಿನವಾದರೂ ಉಪವಾಸವಿರುತ್ತಿದ್ದೆನು. ನಿನ್ನೊಂದಿಗೆ ಇನ್ನೂ ಕೆಲವರು ಆಮಂತ್ರಿತರಿರುವ ಹಾಗಿದೆ. ನಾನು ಮೊದಲು ಭೋಜನ ಮಾಡುವುದಕ್ಕೆ ಇವರ ಅನುಮತಿ ಕೇಳುತ್ತೇನೆ. ಏಕೆಂದರೆ ಮಾಡಿದ ಅಡಿಗೆ ನನಗೊಬ್ಬನಿಗೇ ಸರಿ ಹೋಗುವುದರಿಂದ, ಇವರಿಗಾಗಿ ಬೇರೆ ಅಡಿಗೆ ಮಾಡಿಸಬೇಕಾದೀತಷ್ಟೆ?" ಎಂದು ನಡೆಯುತ್ತಾ ಹೇಳಿದ ಅಗಸ್ತ್ಯನ ಮಾತು ಕೇಳಿ, ಇತರ ಅತಿಥಿಗಳು, "ಹಾಗೇ ಆಗಲಿ. ಮೊದಲು ಇವರದೇ ಊಟವಾಗಲಿ. ನಮಗೇನೂ ಅವಸರವಿಲ್ಲ." ಎಂದರು.

ಅಷ್ಟರಲ್ಲಿ ಇಲ್ವಲನ ದುರ್ಗದ ಮನೆ ಬಂದಿತು. ವಾತಾಪಿ ಈ ಮೊದಲೇ ಅತಿಥಿಗಳ ಆಗಮನವನ್ನು ತಿಳಿದು ತನ್ನ ಮಾಯದ ಅಡಿಗೆಯನ್ನು ಮಾಡಿಸಿಕೊಂಡು ತಯಾರಾಗಿದ್ದನು. ಹೇಳಿದ ಹಾಗೆಯೇ ಅಗಸ್ತ್ಯನಿಗೆ ಇಲ್ವಲನು ಕೂಡಲೇ ಭೋಜನ ಬಡಿಸಿದನು. ಮಾಡಿಟ್ಟ ಅಡಿಗೆಯಷ್ಟನ್ನೂ ಅಗಸ್ತ್ಯನು ಉಂಡುದನ್ನು ನೋಡಿ, ಇಲ್ವಲನು 'ಅಬ್ಬಾ ಇವನ ಹಸಿವೆಯೇ!' ಎಂದು ಮೂಗಿನ ಮೇಲೆ ಬೆರಳಿಟ್ಟನು.

'ನೀವು ಬಹು ದೊಡ್ಡ ಘನಪಾಟಿಗಳಾಗಿದ್ದೀರಿ. ಉಪವಾಸಕ್ಕೂ ಸಮರ್ಥರು, ಭೋಜನಕ್ಕೂ ಸಮರ್ಥರು! ಇನ್ನು ಮುಂದಿನ ಜನ್ಮಕ್ಕೇ ಭೋಜನ ಮಾಡುವಿರೋ ಏನೋ! ನಿಮ್ಮನ್ನು ತೃಪ್ತಿಪಡಿಸಿ

ನನ್ನ ಜನ್ಮ ಸಾರ್ಥಕವಾಯಿತು.' ಎಂದೆನು ಇಲ್ವಲ. 'ನನ್ನನ್ನು ಹೊಗಳುವುದಿರಲಿ. ಉಳಿದವರಿಗೂ ಬೇಗ ಹೊಸ ಅಡಿಗೆ ಮಾಡಿಸಿ ಬಡಿಸಿಬಿಡು. ನಾನು ಸ್ವಲ್ಪ ವಿಶ್ರಾಂತಿ ಪಡೆದು ನನ್ನ ದಾರಿ ಹಿಡಿಯುತ್ತೇನೆ' ಎಂದು ಅಗಸ್ತ್ಯನು ತೇಗಿದನು.

ಇಲ್ವಲನು 'ಇನ್ನು ನಿನಗೆ ಚಿರವಿಶ್ರಾಂತಿಯೇ ಸರಿ!' ಎಂದು ಹೇಳಿಕೊಳ್ಳುತ್ತಾ ಆಚೆಗೆ ಹೋಗಿ, "ವಾತಾಪೀ, ಬೇಗಬಾರೋ" ಎಂದು ಗಟ್ಟಿಯಾಗಿ ಕರೆದನು. ಅಗಸ್ತ್ಯನು, 'ಇನ್ನೆಲ್ಲಿಯ ವಾತಾಪಿಯೋ ಇಲ್ವಲಾ ? ವಾತಾಪಿ ಜೀರ್ಣನಾದನೋಯ್ ! ಇನ್ನು ಬಾರನು ! ವಾತಾಪಿ ಪೂರ್ತಿಜೀರ್ಣ !' ಎಂದು ಹೊಟ್ಟೆಯನ್ನು ತಡವುತ್ತಾ ಹೇಳಿದನು.

ಆ ಮಾತು ಕೇಳಿ ಇಲ್ವಲನ ಕೈ ಕಾಲುಗಳು ಕತ್ತರಿಸಿದುವು. 'ಇಲ್ವಲಾ ! ಇನ್ನು ನೀನೊಬ್ಬನೇ ಆದೆ, ಏಕಿರಬೇಕು ?' ಎನ್ನುತ್ತಾ ಅಗಸ್ತ್ಯನು ತನಗಿಂತ ದೊಡ್ಡ ರಾಕ್ಷಸನ ಹಾಗೆ ಎದ್ದು ತನ್ನ ಬಳಿಗೆ ಬರುವುದನ್ನು ನೋಡಿ ಇಲ್ವಲನು ಬಹು ವೇಗವಾಗಿ ಓಡಿಹೋದನು. ಈ ವಿಧವಾಗಿ ವಾತಾಪೀ ಇಲ್ವಲರ ಮಾಯಾ ನಾಟಕವು ಅಂತ್ಯವಾಯಿತು. ಉಳಿದ ಅತಿಥಿಗಳೂ, ಪ್ರಯಾಣಿಕರೂ ಉಳಿದರು.

ಅಗಸ್ತ್ಯನು ಅಲ್ಲಿರುವ ಅತಿಥಿಗಳಿಗೆ ನಡೆದ ಸಂಗತಿಯನ್ನು ಹೇಳಿ ಕಲ್ಲಿನ ದುರ್ಗದಲ್ಲಿ ರಾಶಿರಾಶಿಯಾಗಿರುವ ಅಸ್ಥಿಪಂಜರಗಳನ್ನೂ, ಕಪಾಲಗಳನ್ನೂ ತೋರಿಸಿದನು. ಅವರು ಹೆದರಿ ತಮ್ಮನ್ನೆಲ್ಲ ಕಾಪಾಡಿದ ಅಗಸ್ತ್ಯನಿಗೆ ನಮಸ್ಕರಿಸಿ ಹೊರಟುಹೋದರು.

ಆ ದುರ್ಗದಲ್ಲಿ ಭದ್ರಪಡಿಸಿಟ್ಟಿರುವ ಧನದ ರಾಶಿಯನ್ನೂ ಅಗಸ್ತ್ಯನು ನೋಡಿದನು. ತನಗೆ ಬೇಕಾದಷ್ಟು ಧನವನ್ನು ಇಟ್ಟುಕೊಂಡು, ಉಳಿದ ಧನದಿಂದ ಒಂದು ಮಹಾ ನಗರವನ್ನು ನಿರ್ಮಿಸಬಹುದಾಗಿತ್ತು. ಅಲ್ಲಿ ಸಾವಿರಾರು ಜನರಿಗೆ ಸುಖ ನಿವಾಸ ಕಲ್ಪಿಸಬಹುದೆಂದು ಅವನಿಗೆ ತೋರಿತು.

ಕೂಡಲೇ ಅಗಸ್ತ್ಯನು ಎಲ್ಲರಿಗೂ ಧನವನ್ನು ಹಂಚಲು ಮೊದಲು ಮಾಡಿದನು. ಸಮೀಪ ರಾಜ್ಯಗಳಿಂದ ಅನೇಕ ಮಂದಿ ಪ್ರಜೆಗಳು ಅಲ್ಲಿಗೆ ಬಂದು ಸೇರಿಕೊಂಡು ಅಗಸ್ತ್ಯನು ಕೊಟ್ಟ ಧನದಿಂದ ಅಲ್ಲಿಯೇ ಮನೆ ಕಟ್ಟಿಕೊಂಡು ಸ್ಥಿರಪಟ್ಟರು.

ಅಗಸ್ತ್ಯನಿಗೆ ವಿಘ್ನೇಶ್ವರನ ಆಕಾರವಾಗಿ ಕಾಣಿಸಿದ ಮಹಾ ಶಿಲೆಯನ್ನು ಕೇಂದ್ರವಾಗಿಟ್ಟುಕೊಂಡು ಅದರ ಸುತ್ತಲೂ ಒಂದು ಮಹಾನಗರವು ಸೃಷ್ಟಿಯಾಯಿತು. ವಾತಾಪಿಯು ಜೀರ್ಣಿಕೆಯಿಂದ ಉಂಟಾದ ಆ ನಗರವು ವಾತಾಪಿನಗರವೆಂದು ಹೆಸರು ಪಡೆಯಿತು. ಅಗಸ್ತ್ಯನು ರಾಜ್ಯ ಪರಿಪಾಲನೆಯ ಸೂತ್ರಗಳನ್ನು ಶಿಲಾಫಲಕಗಳಲ್ಲಿ ಕೆತ್ತಿಸಿ, ಆದರ್ಶಪ್ರಾಯರಾದ ಪ್ರಜಾರಾಜ್ಯವನ್ನು ಏರ್ಪಡಿಸಿದನು.





# ವಿಘ್ನೇಶ್ವರ

ವಾತಾಪಿಯನ್ನು ಜೀರ್ಣಿಸಿ ರಾಕ್ಷಸ ಪೀಡೆಯನ್ನು ನಿವಾರಿಸಿದ ಮೇಲೆ, ಅಗಸ್ತ್ಯನ ಮನಸ್ಸಿನಲ್ಲಿ, ವಾತಾಪಿನಗರದ ಮಧ್ಯದಲ್ಲಿರುವ ಮಹಾಶಿಲೆಯನ್ನು ವಿಘ್ನೇಶ್ವರ ಶಿಲ್ಪವಾಗಿ ರೂಪಿಸಬೇಕೆಂಬ ಬಯಕೆ ಹಾಗೆಯೇ ಉಳಿದಿತ್ತು. ಚಿತ್ರಕಲೆಯಲ್ಲಿ ಪ್ರವೀಣೆಯಾದ ಲೋಪಾಮುದ್ರೆ ಅಲ್ಲಿಗೆ ಬಂದು ಆ ಮಹಾಶಿಲೆಯನ್ನು ಪರಿಶೀಲಿಸಿ, ಅದು ಯಾವ ವಿಧವಾಗಿ ರೂಪಪಡೆದರೆ ಚೆನ್ನಾಗಿರುವುದೆಂದು ಕಲ್ಪಿಸಿಕೊಂಡು ವಿಘ್ನೇಶ್ವರನ ಒಂದು ರೇಖಾ ಚಿತ್ರವನ್ನು ತಯಾರಿಸಿದಳು. ಅದರಲ್ಲಿ ದೆಘ್ನೇಶ್ವರನ ಮಹೋನ್ನ ತತ್ವವೂ, ಮಹಿಮೆಗಳೂ ಅಡಗಿಕೊಂಡು ಅತ್ಯದ್ಭುತವಾಗಿದ್ದಿತು.

ಅದನ್ನು ನೋಡಿದ ಮೇಲೆ ಅಗಸ್ತ್ಯನ ಬಯಕೆ ಇನ್ನಷ್ಟು ಆತುರಗೊಂಡು ಮೇಲೆದ್ದಿತು. ಆ ಚಿತ್ರದ ಹಾಗೆ ಮಹಾಶಿಲೆಯನ್ನು ಶಿಲ್ಪವಾಗಿ ಕೆತ್ತುವಂತಹ ಶಿಷ್ಯ ಶಿಲ್ಪಿಗಳನ್ನು ಕೂಡಿದ ಆಚಾರ್ಯ ಶಿಲ್ಪಿಯನ್ನು ಹುಡುಕ ತೊಡಗಿದನು. ಎಷ್ಟು ಪ್ರಯತ್ನಿಸಿದರೂ ಅಂತಹ ಶಿಲ್ಪಿ ಲಭಿಸಲಿಲ್ಲ. ಅಗಸ್ತ್ಯನು ಚಿಂತಾಕ್ರಾಂತನಾಗಿ ಆ ಮಹಾಶಿಲೆಯ ಇದಿರಿನಲ್ಲಿ ಕುಳಿತುಕೊಂಡು ಲೋಪಾಮುದ್ರೆ ಬರೆದ ಚಿತ್ರಪಟವನ್ನೂ, ಶಿಲೆಯನ್ನೂ ಪದೇ ಪದೇ ನೋಡಿಕೊಳ್ಳುತ್ತ ಕಾಲ ಕಳೆಯುತ್ತಿದ್ದನು. ಆ ರೇಖಾ ಚಿತ್ರವನ್ನು ಶಿಲ್ಪವಾಗಿ ನೋಡುವ ಭಾಗ್ಯ ತನಗಿಲ್ಲವೇನೋ ಎಂಬ ಚಿಂತೆಯಿಂದ ಬೇಯತೊಡಗಿದನು.

ಅವನ ಕೋರಿಕೆಯನ್ನು ತಿಳಿದು ಬಂದ ಶಿಲ್ಪಾಚಾರ್ಯರೆಲ್ಲರೂ, ರೇಖಾ ಚಿತ್ರವನ್ನು ನೋಡಿ, "ಇಂತಹ ಶಿಲ್ಪವನ್ನು ಕೆತ್ತುವುದು ದೇವಶಿಲ್ಪಿ ವಿಶ್ವಕರ್ಮನೋ, ದಾನವ ಶಿಲ್ಪಿಮಯನೋ ಹೊರತು ಕೇವಲ ಮಾನವ ಶಿಲ್ಪಿಗಳಿಂದ ಸಾಧವಾಗಲಾರದು. ಇದಕ್ಕೆ ಬೇಕಾದ ಉಳಿಗಳೂ, ಚಾಣಗಳೂ, ತಕ್ಕ ಸುತ್ತಿಗೆಗಳೂ ಭೂಮಿಯಲ್ಲಿಲ್ಲ." ಎಂದು ಹೇಳಿ ಹಿಂದಿರುಗಿ ಹೋಗಿ ಬಿಡುತ್ತಿದ್ದರು.

ಕೆಲವು ಶಿಲ್ಪಿಗಳು ಆ ಮಹಾಶಿಲೆಯನ್ನು ಪರೀಕ್ಷಿಸಿ, "ಇದು ವಜ್ರಪಾಷಾಣ. ಇದನ್ನು ಕೆತ್ತಬೇಕಾದರೆ

೧೬. ವಿಘ್ನೇಶ್ವರ ಮಹಾಶಿಲ್ಪ



ಸಾಮಾನ್ಯ ಉಳಿಗಳು ಉಪಯೋಗವಿಲ್ಲ. ವಜ್ರದ ಉಳಿಗಳೇ ಆಗಬೇಕು. ದೇವತೆಗಳೋ ಯಕ್ಷರೋ ಬಂದು ಕೆತ್ತಿದರೆ ನಿಮ್ಮ ಪುಣ್ಯ. ಮಾನವ ಮಾತ್ರರಿಂದ ಎಷ್ಟು ಮಾತ್ರಕ್ಕೂ ಆಗದು. ಇದರ ಸೂಕ್ಷ್ಮ ಭಾಗಗಳನ್ನು ಕೊರೆಯಲು ವಿಶೇಷ ದೃಷ್ಟಿ ಶಕ್ತಿಯೂ ಬೇಕು." ಎಂದು ಹೇಳಿದರು.

ಆ ಸಮಯದಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನಿಗೂ, ಅವನ ಹೆಂಡತಿಯಾದ ವಿಷ್ಣು ಮಾನಸ ಪುತ್ರಿ ವಿಶ್ವಕಳೆಗೂ ಜಗಳವೆದ್ದು, ವಿಶ್ವಕಳೆ ತೌರು ಮನೆಗೆ ಹೋಗಿ ಬಿಟ್ಟಿದ್ದಳು, ಅದರಿಂದ ವಿಶ್ವಕರ್ಮನು ಮತಿಗೆಟ್ಟು ತಿರುಗುತ್ತಿದ್ದನು. ದಾನವ ಶಿಲ್ಪಿಯಾದ ಮಯನಿಗೂ ಹಾಗೇ ಆಗಿತ್ತು. ಅವನ ಅಪ್ಸರಸ ಪತ್ನಿಯಾದ ಹೇಮಾ ಮತ್ತೆ ದೇವಲೋಕಕ್ಕೆ ಹೊರಟು ಹೋದುದರಿಂದ, ಮಯನು ಹುಚ್ಚು ಹಿಡಿದು ಎಲ್ಲಿ ತಿರುಗುತ್ತಿರುವನೆಂದು ಯಾರಿಗೂ ಗೊತ್ತಿಲ್ಲ. ವಿಶ್ವಕರ್ಮನನ್ನೋ ಮಯನನ್ನೋ ಕರೆಯೋಣವೆಂದರೆ ಅವರ ಪರಿಸ್ಥಿತಿ ಅಷ್ಟರ ಮಟ್ಟಿಗೆ ಕೆಟ್ಟು ಹೋಗಿತ್ತು. ಎಂಥವರಾದರೂ ಮನಸ್ಥಿಮಿತ ತಪ್ಪಿದವರಾದರೆ ಯಾವ ಕೆಲಸಕ್ಕೂ ಯೋಗ್ಯವಾಗಲಾರರಷ್ಟೆ?

ಹೀಗಾಗಿ ಮಹಾಶಿಲೆಯನ್ನು ವಿಘ್ನೇಶ್ವರ ವಿಗ್ರಹವಾಗಿ ಮಾಡಿಸಬೇಕೆಂಬ ಕೋರಿಕೆ ದೊಡ್ಡ ಸಮಸ್ಯೆಯೇ ಆಯಿತು. ಅವನು ನಿದ್ರಾಹಾರಗಳನ್ನು ಬಿಟ್ಟು ಶಿಲೆಯ ಇದಿರಿನಲ್ಲಿ ಹಗಲೂ ರಾತ್ರಿಯೂ ನಿಶ್ಚಲನಾಗಿ ಕುಳಿತುಕೊಂಡು ವಿಘ್ನೇಶ್ವರನನ್ನು ಧ್ಯಾನಿಸುತ್ತ, "ಗಣನಾಯಕಾ! ವಿನಾಯಕಾ! ನನ್ನ ಆಶೆಯನ್ನು ನಿರಾಶೆಯಾಗಿ ಮಾರ್ಪಡಿಸಿದೆಯಾ? ನಾನು ನಿನಗೇನು ತಪ್ಪು ಮಾಡಿದ್ದೇನೆ? ಅಥವಾ ಬೇರೆಯಾರಿಗಾದರೂ ಮಾಡಿದ್ದೇನೆಯೆ? ನನಗೇನೂ ತೋರದು! ನಿನಗೇ ಶರಣಾಗಿದ್ದೇನೆ. ಎಲ್ಲಾ ನಿನ್ನದೇ ಭಾರ!" ಎಂದು ಸ್ಮರಣೆ ಮಾಡುತ್ತಾ, ಆಗಾಗ ನಾಲ್ಕು ದಿಕ್ಕುಗಳನ್ನೂ ನಿರೀಕ್ಷಿಸಿಕೊಂಡಿದ್ದನು.

ಒಂದು ದಿನ ಸಂಧ್ಯಾ ಸಮಯದಲ್ಲಿ, ಒಂದು ಕಿರಿಯ ಆಕಾರವು ಬರುವುದು ಕಂಡಿತು. ಅವನೊಬ್ಬ ಹುಡುಗ ಪ್ರಾಯದವನು. ತನ್ನ ಬೊಜ್ಜು ಹೊಟ್ಟೆಯನ್ನು ತಡವಿಕೊಂಡು ಓಲಾಡಿಸುತ್ತ, ಗುಡುಗುಡು ನಡಿಗೆಯಿಂದ ಬರುತ್ತಿದ್ದ. ಅವನ ತಲೆಗೂದಲು ಧೂಳು ಹೊಡೆದುಕೊಂಡು ಕೆದರಿ ಗಾಳಿಗೆ ಹಾರುತ್ತ ಹಣೆಯ ಮೇಲೆ ಕಣ್ಣಿಗೆ ಅಡ್ಡಡ್ಡ ಬರುತ್ತಿದ್ದಿತು. ಸಮೀಪಿಸಿದಂತೆ ಅವನ ಕೈಯಲ್ಲಿ ಉಳಿಯಂತೆ ಹಿಡಿದಿದ್ದ ಯಾವುದೋ ವಸ್ತು ತಳತಳ ಹೊಳೆಯುತ್ತಿದ್ದಿತು. ಚಿಂಡಪುಷ್ಟಿಯಿಂದೊಪ್ಪುವ ಯಾವನೋ ಬಾಲಶಿಲ್ಪಿಯಂತೆ ಕಾಣುತ್ತಿದ್ದನು. ಯಾರಿವನು? ಇತ್ತಲೇ ಏಕೆ ಬರುತ್ತಿದ್ದಾನೆ?

ಅಗಸ್ತ್ಯನು ಆತ್ಯಾಸಕ್ತಿಯಿಂದ ಅವನ ಕೈಯ್ಯಲ್ಲಿರುವುದನ್ನು ಪರೀಕ್ಷಿಸಿ ನೋಡಿದನು. ಅದು ಆನೆಯ ದಂತದ ಕೊನೆಯ ತುಂಡನ್ನು ಹಿಡಿಗೆ

ಬಗಿಸಿದಂತಿರುವುದನ್ನು ನೋಡಿ ಅಗಸ್ತ್ಯನಿಗೆ ಆಶ್ಚರ್ಯವಾಯಿತು. ಆ ತರುಣ ಶಿಲ್ಪಿ ಅಗಸ್ತ್ಯನ ಸಮೀಪ ಬಂದು, "ಮಹರ್ಷಿಗಳು ಈ ಮಹಾ ಶಿಲೆಯ ಮುಂದೆ ಕುಳಿತು ಗಾಢಾಲೋಚನೆಯಲ್ಲಿ ಮುಳುಗಿದ ಹಾಗಿದೆ ? ಈ ಶಿಲೆ ತುಂಬಾ ಚೆನ್ನಾಗಿದೆ! ನನಗೇನಾದರೂ ಶಿಲಾವೃತ್ತಿ ಸಿಗುವುದೇನೋ ಅಂತ ತಿರುಗುತ್ತಾ ಬಂದೆನು" ಎಂದನು.

ಮಧುರವಾದ ಅವನ ಮಾತುಗಳನ್ನು ಕೇಳಿ ಅಗಸ್ತ್ಯನು ಪರವಶನಾದನು.

"ಚಿರಂಜೀವಿ ! ಈ ಮಹಾಶಿಲೆಯನ್ನು ಗಣಪತಿ ದೇವನ ವಿಗ್ರಹ ರೂಪದಲ್ಲಿ ನೋಡಬೇಕೆಂದು ತುಂಬಾ ಆಶೆಯಿಂದ ಕುಳಿತಿದ್ದೇನಪ್ಪಾ" ಎಂದು ತನ್ನ ಹತ್ತಿರವಿದ್ದ ರೇಖಾಚಿತ್ರವನ್ನು ಆ ಹುಡುಗನಿಗೆ ತೋರಿಸಿ. "ಏನೋ ಶಿಲಾವೃತ್ತಿ ಹುಡುಕುವುದು ಅಂದೆಯಲ್ಲಾ ? ಯಾರು ನೀನು ? ಏನು ಕೆಲಸ ಮಾಡುತ್ತಿ ? ಈ ಶಿಲೆಯಲ್ಲಿ ನೀನೇನು ಮಾಡುವೆ ?" ಎಂದು ಕೇಳಿದನು ಅಗಸ್ತ್ಯ.

"ನಾನು ಮಾಡುವ ಕೆಲಸವೆಂದರೆ ಮೊದಲನೆಯದು ಹೊಟ್ಟೆ ತುಂಬ ತಿನ್ನುವುದು. ಆಮೇಲೆ ಶಿಲ್ಪ ಕೆತ್ತುವುದು. ನನ್ನನ್ನು ಬಾಲಶಿಲ್ಪಾಚಾರ್ಯನೆಂದೇ ಕರೆಯುತ್ತಾರೆ. ಎಂಥ ಶಿಲೆಯಾದರೂ ನನ್ನ ಕೈಗೆ ಬೆಣ್ಣೆ ಮುದ್ದೆ !" ಎಂದನು ಆ ಬಾಲಶಿಲ್ಪಿ.

ಅವನು ಹೇಳುವ ರೀತಿ ನೋಡಿ ಅಗಸ್ತ್ಯನಿಗೆ ನಗು ಬಂದಿತು. ಅವನು ಸಂದೇಹದಿಂದ ಅವನನ್ನು ನೋಡುತ್ತ, "ಈ ಮಹಾಶಿಲೆಯನ್ನು ಮಹಾ ಶಿಲ್ಪವಾಗಿ ರೂಪಿಸಬಲ್ಲಂತಹ ಮಹಾಶಿಲ್ಪಿಗಾಗಿಯೇ ನಾನಿಲ್ಲಿ ಕಾದು ಕುಳಿತುಕೊಂಡಿದ್ದೇನೆ. ಶಿಲ್ಪಿ ಎಂದು ನೀನು ಹೇಳಿಕೊಳ್ಳುವೆಯಾಗಲಿ. ಬಾಲನಾಗಿರುವಿಯಲ್ಲಪ್ಪಾ ? ಶಿಲೆ ನೋಡಿದರೆ ಬ್ರಹ್ಮಾಂಡವಾಗಿದೆ: ನೀನೋ ನನ್ನ ಹಾಗೇ ಕುಳ್ಳ ಹುಡುಗ. ಹುಡುಗಾಟದ ಹಸಿರು ಇನ್ನೂ ಮಾಸಿಲ್ಲದವನು. ಹೀಗಿರುವಾಗ



ಮಹಾಶಿಲ್ಪವಾಗಿ ಇದನ್ನು ಮಾಡಬಲ್ಲೆಯಾ ಎಂದು ನಿನ್ನನ್ನು ಹೇಗೆ ಕೇಳಲಿ ? ನಿನ್ನ ಹಿರಿಯರಾರಾದರೂ ಇದ್ದರೆ ಹೇಳಪ್ಪ." ಎಂದನು ನಿಟ್ಟುಸಿರುಬಿಟ್ಟು.

"ಕುಳ್ಳಾ ಅಂದ ಮಾತ್ರಕ್ಕೆ ಕಡಿಮೆ ಅಂದುಕೊಂಡಿರಾ ? ನೀವೂ ಕುಳ್ಳರು. ಸಾಮಾನ್ಯದವರೇನಲ್ಲವಷ್ಟೆ ? ನಾನೂ ಹಾಗಿರುವುದಕ್ಕೆ ಸರಿಹೋಯಿತೆಂದು ಕೊಂಡು ಗಟ್ಟಿ ನಂಬುಗೆಯಿಂದ ಹೇಳಿ ಬಿಡಿ. ಮಹಾ ಶಿಲ್ಪಿಗಳೆಂದುಕೊಳ್ಳುವವರೆಲ್ಲ ದೊಡ್ಡವರಾಗಿ ಬಿಡುವುದಿಲ್ಲ. ನನ್ನ ಉಳಿಚಾಣಗಳಿಗೆ ಸಾಧ್ಯವಾಗದ್ದೇ ಇಲ್ಲ ಗೊತ್ತಾ ?" ಎಂದು ಬಾಲನು ಉಳಿಯನ್ನು ತೆಗೆದು ತೋರಿಸಿದನು. ಅದು ವಜ್ರದ ಹಾಗೆ ಜಗ ಜಗ ಹೊಳೆಯುತ್ತಿದ್ದಿತು.

ಅಗಸ್ತ್ಯನು ಬೆರಗಾಗಿ ನೋಡುತ್ತಿರಲು, ಬಾಲಶಿಲ್ಪಿ ಆ ಉಳಿಯನ್ನು ಮಹಾಶಿಲೆಯ ಕಡೆಗೆ ಬೀಸಿ ಬಿಸುಟನು. ಕಾಂತಿ ಪುಟಿಸುವ ಕಿಡಿಗಳೂ, ಶಬ್ದವೂ ಹೊರಡಲು, ಉಳಿ ಚುಚ್ಚಿದ ಶಿಲೆಯ ಮೇಲೆ



ಒಂದು ರಂಧ್ರವು ಏರ್ಪಟ್ಟಿತು. ಆದನ್ನು ನೋಡಿ ಶಿಲೆಗೇನೋ ಭೇದವಾಯಿತೆಂದು ಆಗಸ್ತ್ಯನು ಗಾಬರಿಯಾದನು.

"ಆದು ನಾಭೀಸ್ಥಾನ. ಮೂರ್ತಿ ಶಿಲ್ಪಕ್ಕೆ ನಾಭೀ ಸ್ಥಾನವು ಬಹಳ ಮುಖ್ಯ. ಆದರ ಮೇಲೆ ಲಂಬೋದರ ನಾಭಿ ಎಂದರೆ ಕೇಳಬೇಕೆ? ಲಂಬೋದರ ದಿಂದಲೇ ನನ್ನ ಶಿಲ್ಪಕಾರ್ಯ ಪ್ರಾರಂಭವಾಯಿತೆಂದು ತಿಳಿಯಿರಿ!" ಎಂದನು ಬಾಲಶಿಲ್ಪಿ. ಆ ಮಾತಿಗೆ ಪ್ರತಿಧ್ವನಿಯಾಗಿ, ಆ ಬಂಡೇಗಲ್ಲಿನ ಕಡೆಯಿಂದ ಉಳಿಯಿಂದೆದ್ದ ಧ್ವನಿ ಇನ್ನೂ ಸ್ಪಂದಿಸುವಂತೆ ಮಾಳವರಾಗದ ಸಣ್ಣಗಿನ ಹಾಡು ಆಗಸ್ತ್ಯನ ಕಿವಿಗೆ ಬೀಳುತಿತ್ತು. ಆಗ ಆಗಸ್ತ್ಯನಲ್ಲಿ ಒಮ್ಮೆಗೇ ರೋಮಾಂಚನವೆದ್ದಿತು!

"ಇದು ಆಯಸ್ಕಾಂತ ಶಿಲೆ. ಕೆತ್ತುತ್ತಿರುವಾಗ ಪ್ರಚಂಡವಾದ ವಿದ್ಯುತ್ಕಾಂತಿ ಹೊರಡುತ್ತಿರುತ್ತೆ. ಆದುದರಿಂದ ಶಿಲ್ಪಕಾರ್ಯ ಮುಗಿಯುವವರೆಗೂ ಸುತ್ತಮುತ್ತಲು ಒಂದು ನರಪ್ರಾಣಿಯೂ ಇರಬಾರದು. ದೊಡ್ಡದೊಡ್ಡ ಧ್ವನಿಗಳು ಏಳುತ್ತಾ ಇರುತ್ತವೆ. ಆದನ್ನು ಕೇಳಿ ನಗರವಾಸಿಗಳು ಹೆದರಿ ಬಿದ್ದು ಗಾಬರಿಯಾಗ ಬೇಕಾಗಿಲ್ಲ. ಓ ಮಹರ್ಷೀ! ಇನ್ನು ನೀವು ಹೋಗಿರಿ. ನಿಶ್ಚಿಂತೆಯಾಗಿ ರಾತ್ರಿ ಪೂರಾ ನಿದ್ದೆ ಮಾಡಿರಿ, ಬೆಳಗಾಗುವಾಗ ಶಿಲ್ಪವು ಪೂರ್ತಿಯಾಗುತ್ತದೆ. ಆಗಬಂದು ನೋಡಿ, ಅಭಿಪ್ರಾಯ ಹೇಳಿರಿ." ಎಂದನು ಬಾಲ ಶಿಲ್ಪಿ.

ಆಗಸ್ತ್ಯನು ಆಶ್ಚರ್ಯಪಡುವುದೊಂದೇ ಹೊರತು ಏನೂ ಹೇಳಲಿಲ್ಲ. ಆವನ ಬುದ್ಧಿಗೆ ನಿದ್ದೆಕವಿದ ಹಾಗೆಯೇ ಆಯಿತು. ಸ್ವಲ್ಪ ಎಚ್ಚರಕ್ಕೆ ಬಂದು, ರೇಖಾ ಚಿತ್ರವನ್ನು ತೆಗೆದು ಬಾಲ ಶಿಲ್ಪಿಗೆ ಕೊಡಲು ನೋಡಿದನು.

"ಆಗಲೇ ನೋಡಿದೆನಲ್ಲಾ? ತೋರಿಸಿದಿರಷ್ಟೆ? ಒಂದು ಸಾರಿ ನೋಡಿದರೇ ಸಾಕು. ಪದೇ ಪದೇ ನೋಡುತ್ತಾ ಶಿಲ್ಪ ಕೆತ್ತುವವನು ಮಹಾ ಶಿಲ್ಪಿ ಹೇಗಾದಾನು? ಶಿಲ್ಪವನ್ನು ಒಂದು ಆಟದ ಹಾಗೆ ಕೆತ್ತಿ ಕೊರೆಯುವ ಬಾಲ ಶಿಲ್ಪಿ ನಾನು. ಎಲ್ಲಾ ಮುಗಿದ ಮೇಲೆ ಚಿತ್ರ ಗೀಚಿದವರನ್ನು ಬಂದು ನೋಡಲು ಹೇಳಿರಿ, ಸರಿಯಾಗಿದೆಯೋ ಇಲ್ಲವೋ ಹೇಳಲಿ. ಈ ಚಿತ್ರ ಬರೆದವರಿಗೆ ಏನು ಕೊಟ್ಟಿರೋ ನಾನರಿಯೆ. ನನಗೆ ಏನು ಪ್ರತಿಫಲ ಕೊಡುವಿರೆಂದು ನೋಡಬೇಕು." ಎಂದನು ಆ ಬಾಲ ಶಿಲ್ಪಿ. ಈ ಕೊನೆಯ ಮಾತು ಆಗಸ್ತ್ಯನಿಗೆ ಭಯವನ್ನು ಹುಟ್ಟಿಸಿತು.

ತನ್ನ ಹೆಂಡತಿ ಲೋಪಾಮುದ್ರೆಯ ಆಶೆಯಂತೆ ಇರಿಸಿಕೊಂಡ ಧನದ ಹೊರತು ತನ್ನದೆನ್ನುವ ಬೇರೆ ಧನ ಯಾವುದೂ ಆಗಸ್ತ್ಯನ ಬಳಿಯಲ್ಲಿರಲಿಲ್ಲ. ಎಲ್ಲವನ್ನೂ ಹಂಚಿ ಕೊಟ್ಟಾಗಿತ್ತು. ಇನ್ನು ಈ ಶಿಲ್ಪಿಗೆ ಪಾರಿತೋಷಿಕವಾಗಿ ಆ ಸ್ವಲ್ಪ ಧನವನ್ನು ಕೂಡಾ ಕೊಡದೆ ಗತ್ಯಂತರವಿಲ್ಲ. ಆ ಮೇಲೆ ಲೋಪಾಮುದ್ರೆಗೆ ಏನು ಹೇಳಲಿ?

ಹೀಗೆ ಚಿಂತಿಸುತ್ತಾ ಅಗಸ್ತ್ಯನು ತನ್ನ ಬಿಡಾರ ವನ್ನು ತಲಪಿದನು. ಆ ದಿನ ಹೊಸದಾಗಿ ಲೋಪಾ ಮುದ್ರೆಯ ಮುಖದಲ್ಲಿ ದೀಪ ಬೆಳಗುವಂತೆ ಹೊಸ ಪ್ರಕಾಶ ಕಾಣುತ್ತಿತ್ತು. ಏನು ವಿಶೇಷವೆಂಬ ಹಾಗೆ ಅಗಸ್ತ್ಯನು ಅವಳ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದನು.

ಲೋಪಾಮುದ್ರೆ ಅತ್ಯಾನಂದದಿಂದ, "ನೀವು ನನ್ನನ್ನು ಕ್ಷಮಿಸಬೇಕು. ಋಷಿ ಪತ್ನಿಯಾದ ನಾನು ಋಷಿ ಪತ್ನಿಯ ಹಾಗಿರುವುದನ್ನು ಬಿಟ್ಟು, ಯಾಕೆ ಹೀಗೆಲ್ಲ ಹೇಳಿದೆನೋ ಗೊತ್ತಾಗುವುದಿಲ್ಲ. ಋಷಿಪತ್ನಿ ಹೇಗಿರಬೇಕೆಂದು ನನಗೆ ಚೆನ್ನಾಗಿಯೇ ಗೊತ್ತಿತ್ತು. ನಗನಟ್ಟು ಒಳ್ಳೊಳ್ಳೆಯ ಬಟ್ಟೆಗಳೆಲ್ಲ ಬೇಕೆಂದು ಹೇಳಿ ಧನಶೇಖರಣೆಯ ಶ್ರಮಕ್ಕೆ ನಿಮ್ಮನ್ನು ಏಕೆ ಹೇಳಿದೆ ನೆಂದು ಆಶ್ಚರ್ಯವಾಗುತ್ತದೆ. ಏನೋ ಹೊಸ ಕಾರ್ಯ ನೆರವೇರುವ ಹಾಗೆ ಆಗಲಿಕ್ಕಾಗಿ ಯಾವುದೋ ಶಕ್ತಿ ನನ್ನ ಮುಖದಿಂದ ಆ ಮಾತು ಹೊರಡಿಸಿದೆ. ನನಗೆ ಯಾವ ಆಭರಣಗಳೂ ಬೇಡ, ನನ್ನಲ್ಲಿ ತಾತ್ಕಾಲಿಕವಾಗಿ ಪ್ರವೇಶಿಸಿದ ಅಜ್ಞಾನವು ತೊಲಗಿತು. ಉಳಿದ ಧನವನ್ನೆಲ್ಲಾ ದಾನಧರ್ಮ ಮಾಡಿಬಿಡಿ" ಎಂದಳು.

ಅವಳ ಮಾತುಗಳನ್ನು ಕೇಳಿ ಅಗಸ್ತ್ಯನು ತನ್ನೊಳಗೆ ಸಂತೋಷಿಸುತ್ತ "ಶಿಲ್ಪಿ ದೊರೆತನು. ತೇಜಸ್ವೀ ಬಾಲಕ! ಬೆಳಗಾಗುವಾಗಲೇ ಶಿಲ್ಪ ತಯಾರಾಗು ತ್ತದಂತೆ!" ಎಂದನು ಅಗಸ್ತ್ಯ.

"ಏನೇನು? ಬೆಳಗಾಗುವಾಗ ಆ ಮಹಾ ಶಿಲೆ ಶಿಲ್ಪವಾಗುತ್ತದೆಯೆ? ಶಿಲ್ಪಿ ಯಾರು? ದೇವನೋ?" ಎಂದಳು ಲೋಪಾಮುದ್ರೆ.

"ಮಾನವಮಾತ್ರನೇ. ಚಿಕ್ಕ ಹುಡುಗ. ಈಗ ಅವನಿಗೆ ಪ್ರತಿಫಲ ಹೇಗೆ ಕೊಡಬೇಕೋ ಎಷ್ಟು ಕೊಡ ಬೇಕೋ ಗೊತ್ತಾಗುವುದಿಲ್ಲ. ವಿನಾಯಕನೇ ಗತಿ!" ಎಂದನು ಅಗಸ್ತ್ಯ.



"ನನಗೋಸ್ಕರ ಇರಿಸಿಕೊಂಡ ಧನವಿದೆಯಲ್ಲವೇ? ಅದು ಸಾಲದೇ?" ಎಂದಳು ಲೋಪಾಮುದ್ರೆ.

"ಅದೊಂದು ಸಮಾಧಾನವಿದೆ ಅನ್ನು. ಬೆಳಗಾದ ಮೇಲೆ ಏನೋ ಒಂದು ನೋಡಿದರಾಯಿತು." ಎಂದನು ತುಸುಹಗುರಾದ ಮನಸ್ಸಿನಿಂದ ಅಗಸ್ತ್ಯ.

"ಅಂದ ಹಾಗೆ ನಾಳೆ ಭಾದ್ರಪದಶುದ್ಧ ಚತುರ್ಥಿ. ವಿನಾಯಕ ಚತುರ್ಥಿಯ ದಿನ. ಶಿಲ್ಪದ ಧ್ಯಾನದಲ್ಲಿದ್ದು ನೀವು ತಿಥಿ ವಾರ ತಿಂಗಳನ್ನೆಲ್ಲ ಮರೆತಿರಿ!" ಎಂದಳು ಲೋಪಾಮುದ್ರೆ.

"ಏನು? ನಾಳೆ ವಿನಾಯಕ ಚತುರ್ಥಿಯೆ! ವಿಘ್ನೇಶ್ವರನ ಶಿಲ್ಪ ನಾಳೆಗೇ ತಯಾರೆಂದರೆ ಏನು ವಿಚಿತ್ರ!" ಎಂದು ಅಗಸ್ತ್ಯನು ಆಶ್ಚರ್ಯ ಪಡುತ್ತಿರಲು, ಲೋಪಾಮುದ್ರೆ "ಆ ಶಿಲ್ಪಿ ಬಾಲನೂ ಅಲ್ಲ, ಮಾನವ ಮಾತ್ರನೂ ಅಲ್ಲ! ಓ! ಗೊತ್ತಾಯಿತು!" ಎಂದಳು. ಹೆಂಡತಿಯ ಮಾತಿನಲ್ಲಿ ಏನೋ ಅದ್ಭುತ ಸತ್ಯ



ವಿರುವಂತೆ ಅಗಸ್ತ್ಯನಿಗೆ ತೋರಿತು. ಬಹಳ ರಾತ್ರಿಯಾದರೂ ಅಗಸ್ತ್ಯನಿಗೆ ನಿದ್ದೆ ಹತ್ತಲಿಲ್ಲ. ಕುತೂಹಲ ಹೆಚ್ಚುತ್ತಿರಲು, ಏನು ನಡೆಯುತ್ತದೋ ನೋಡಬೇಕೆಂದು ಅಗಸ್ತ್ಯನು ಹೊರಟನು.

ಅಗಸ್ತ್ಯನು ಮಹಾ ಶಿಲೆಯ ಸಮೀಪಕ್ಕೆ ಬರುವ ಹೊತ್ತಿಗೆ, ಅಲ್ಲಿ ಕಾಣುವ ದೃಶ್ಯವು ಅವನಿಗೆ ರೋಮಾಂಚನವನ್ನುಂಟುಮಾಡಿತು. ಸ್ಪೃಹೆ ತಪ್ಪುವಂತೆನಿಸಿ ಹಾಗೆಯೇ ಕುಳಿತು ಬಿಟ್ಟನು. ಕೆಲವು ನೂರು ಉಳಿಗಳು ತನ್ನಂತಾನೇ ಶಿಲೆಯ ಮೇಲೆ ಚಕಚಕನೆ ಶಿಲ್ಪಕೆತ್ತುತ್ತಿದ್ದುವು. ಬಣ್ಣ ಬಣ್ಣದ ವಿದ್ಯುತ್ಕಾಂತಿಗಳು ಮಿಂಚಿಕೊಂಡು ಅಲ್ಲೆಲ್ಲಾ ಪ್ರಕಾಶವಾಗಿದ್ದಿತು. ಖಣಖಣ ಧ್ವನಿಗಳೆಲ್ಲ ಒಂದಾಗಿ ಹೋರ್ದನಿಗೊಡುತ್ತಿದ್ದುವು. ಉಳಿಗಳೆಲ್ಲ ಆನೆಯ ದಂತದ ಕೊನೆಗಳಾಗಿ ವಜ್ರದಂತೆಹೊಳೆಯುತ್ತಿದ್ದುವು. ಅದು ಸ್ವಪ್ನವೋ ನಿಜವೋ ತಿಳಿಯದ ವಿಭ್ರಾಂತಿಯಲ್ಲಿ ಅಗಸ್ತ್ಯನಿಗೆ ಮಯಕ ಕವಿದು, ಹಾಗೆಯೇ ನಿದ್ದೆಯಲ್ಲಿ ಬಿದ್ದನು. ಮತ್ತೆ ಅವನು ನಿದ್ದೆಯಿಂದೆದ್ದು ಕಣ್ಣು ತೆರೆದಾಗ, ಅವನನ್ನು ತಟ್ಟಿ ಎಬ್ಬಿಸುವ ಬಾಲ ಶಿಲ್ಪಿಯನ್ನು ನೋಡಿದನು. ಮೂಡು ದಿಕ್ಕು ಕೆಂಪಗಾಗಿತ್ತು.

“ಇದೇನು ಮಹರ್ಷೀ! ಇಲ್ಲಿ ಹೀಗೆ ನಿದ್ರಿಸಿಕೊಂಡು ಕನಸು ಕಾಣುವಿರಾ? ಯೋಗನಿದ್ರಾಪಾರಂಗತರಾದ ನಿಮಗೆ ಕನಸಿನ ನಿದ್ರೆ ಅಂದರೇನು? ಶಿಲ್ಪವು ಪೂರ್ತಿಯಾಯಿತು. ಚಿತ್ರ ಬರೆದವರನ್ನು ಬಂದು ನೋಡಲು ಹೇಳಿರಿ. ಚಿತ್ರಕ್ಕೆ ಸರಿಯಾಗಿ ರೂಪಿಸಲ್ಪಟ್ಟಿದೆಯೋ ಇಲ್ಲವೋ? ನನ್ನ ಕೆಲಸವಂತೂ ತೀರಿತು!” ಎಂದು ಶಿಲ್ಪಿ ಹೇಳಿದನು.

ಆಗ ಅಲ್ಲಿಗೆ ತಾಂಬಾಣದಲ್ಲಿ ತುಂಬಾ ಮೋದಕಗಳನ್ನೂ, ಉಂಡ್ಲುಕೆಗಳನ್ನೂ, ಬಾಳೇ ಹಣ್ಣುಗಳನ್ನೂ ನೀರನ್ನೂ ಹೂಗಳನ್ನೂ ಇಟ್ಟುಕೊಂಡು ಲೋಪಾಮುದ್ರೆ ಬರುತ್ತಿದ್ದಳು.

ಅಗಸ್ತ್ಯನು ಸಂಭ್ರಮಾಶ್ಚರ್ಯಗಳಿಂದ ಸ್ಫಟಿಕದಂತೆ ಜಗಜಗಿಸುವ ವಿಘ್ನೇಶ್ವರ ಮಹಾಶಿಲ್ಪವನ್ನು ನೋಡುತ್ತಿರಲು, ಬಾಲ ಶಿಲ್ಪಿ ಅಗಸ್ತ್ಯನೊಂದಿಗೆ, “ನನಗೆ ಕೊಡುವ ಪ್ರತಿಫಲವೇನೋ ಕೊಟ್ಟು ಬಿಡಿರಿ.” ಎಂದನು.

ಅಗಸ್ತ್ಯನು ನಾಲಗೆ ತಡವರಿಸಿಕೊಳ್ಳಲು, “ಹೌದು. ನಿಜ. ಓ ಮಹಾಶಿಲ್ಪೀ! ನಿನಗೆ ಏನು ಕೊಟ್ಟರೂ ಸಾಲದು. ಆದರೂ ಚಂದ್ರನಿಗೊಂದು ದಾರದ ಚೂರು ಎಂಬ ಹಾಗೆ ಸ್ವಲ್ಪ ಮಾತ್ರ ಧನವಿಟ್ಟುಕೊಂಡಿದ್ದೇನೆ. ತರುತ್ತೇನೆ” ಎಂದನು.

“ಸರಿ ಸರಿ.” ಎಂದು ಬಾಲಶಿಲ್ಪಿ ತಲೆಯಾಡಿಸಿ “ಹೌದಯ್ಯಾ. ಋಷಿಗಳೇ, ಈ ರೇಖಾ ಚಿತ್ರ ಬರೆದವರಿಗೆ ಏನು ಕೊಟ್ಟರೋ ಅದನ್ನು ಮೊದಲು ಹೇಳಿರಿ. ಶಿಲ್ಪಕೆತ್ತುವುದು ಶ್ರಮವೇ ಹೊರತು, ಆದರ ದೊಡ್ಡತನವೆಲ್ಲಾ ಈ ಶಿಲ್ಪ ಕೃತಿಗೆ ಮೂಲ

ವಾದ ರೇಖಾ ಚಿತ್ರವ್ವೇ. ಚಿತ್ರಣವೆಂಬುದು ಊಹಾ ಶಕ್ತಿಗೆ ಕೂಡಿದ ಮೇಧಸ್ಸಿನ ಕಳೆ!" ಎಂದನು.

"ಅಯ್ಯಾ, ಬಾಲಶಿಲ್ಪಾಚಾರ್ಯಾ, ಚಿತ್ರ ಬರೆದವರಿಗೆ ಏನೂ ಕೊಡುವ ಅಗತ್ಯವಿಲ್ಲ. ಅದನ್ನು ತಯಾರಿಸಿದವಳು ನನ್ನ ಹೆಂಡತಿಯೇ" ಎಂದು ಲೋಪಾಮುದ್ರೆಯನ್ನು ತೋರಿಸುವವನಂತೆ ಅವಳನ್ನು ನೋಡಿದನು ಅಗಸ್ತ್ಯ. ಲೋಪಾಮುದ್ರೆ ತನ್ಮಯಸ್ಥಿತಿಯಲ್ಲಿದ್ದಳು.

"ಏನು ಮಾತು ಹೇಳಿದಿರಿ ಋಷಿಗಳೇ? ನಾನಾಗಿರುತ್ತಿದ್ದರೆ ಒಂದು ಮಹಾ ನಗರವನ್ನು ನಿರ್ಮಿಸಲು ಬೇಕಾದಷ್ಟು ಧನವನ್ನು ಚಿತ್ರಕ್ಕೆ ಕೊಡುತ್ತಿದ್ದೆ. ಅಷ್ಟು ಮಹತ್ವದ ರೇಖಾ ಚಿತ್ರವದು. ಆ ಧನವೆಲ್ಲಾ ಆಕೆಗೇ ಸಲ್ಲಬೇಕು" ಎಂದನು ಬಾಲಶಿಲ್ಪಿ.

"ನಿಜಕ್ಕೂ ಅದನ್ನು ಅವಳಿಗಾಗಿಯೇ ಇರಿಸಿದ್ದೆನಪ್ಪಾ!" ಎಂದು ಬಾಯಿ ಜಾರಿ ಹೇಳಿಬಿಟ್ಟನು ಅಗಸ್ತ್ಯ.

ಬಾಲಶಿಲ್ಪಿ ಆಶ್ಚರ್ಯಪಡುತ್ತ, "ಏನಂದಿರಿ? ಓ! ಅದು ಸ್ತ್ರೀಧನವನ್ನಿರಿ! ನನ್ನ ಪುಣ್ಯ! ಮೊದಲೇ ಹೇಳಿದಿರಿ! ಅದನ್ನು ನೀವು ನನಗೆ ಕೊಟ್ಟು, ನಾನು ತೆಗೆದುಕೊಂಡು ಹೋಗುತ್ತಿದ್ದರೆ ಎಂತಹ ಅನ್ಯಾಯವಾಗುತ್ತಿತ್ತು! ಅದರಲ್ಲಿಯ ಒಂದು ಚಿಕ್ಕಾಸುಕೂಡಾ ನನಗೆ ಬೇಡ!" ಎಂದು ಲೋಪಾಮುದ್ರೆಯನ್ನು ನೋಡಿ, "ಅಮ್ಮಾ, ನಿನ್ನ ಕೈಯಿಂದ ಒಂದು ಮೋದಕವನ್ನೂ, ನಾಲ್ಕು ಉಂಡ್ಲುಕವನ್ನೂ, ಚೂರುಕಡುಬನ್ನೂ ನನಗೆ ಕೊಡು. ಚಕ್ಕಡಿ ಎಳೆದದ್ದಕ್ಕೆ ಮುಕ್ಕಿದ್ದೇ ಕೂಲಿ ಎಂಬ ಹಾಗೆ ಶಿಲ್ಪಿಗಳ ಹಣೆಯಲ್ಲಿ ಬ್ರಹ್ಮ ಎಂದೋ ಬರೆದಿಟ್ಟಿದ್ದಾನೆ" ಎಂದನು.

ಅವನು ಹೇಳಿದ ಮಾತು ಕೇಳಿ ಲೋಪಾಮುದ್ರೆ ತಾಂಬಾಣವನ್ನು ಅವನ ಮುಂದಿಟ್ಟು, ಅಡ್ಡ ಬಿದ್ದು ಬಾಲಶಿಲ್ಪಿಯ ಪಾದ ಹಿಡಿದು, "ವಿಘ್ನೇಶ್ವರಾ! ನಿನ್ನ ಅನುಗ್ರಹದಿಂದ ನಮ್ಮ ಜನ್ಮ ತಾರಕವಾಯಿತು" ಎಂದಳು. ಮರುಕ್ಷಣದಲ್ಲಿ ಬಾಲಶಿಲ್ಪಿ ಮಾಯವಾದನು.

ಅಗಸ್ತ್ಯನನ್ನು ಆವರಿಸಿದ ಮಾಯೆ ಬಿಟ್ಟು ಹೋಯಿತು ಅಗಸ್ತ್ಯನು ಮಹಾ ಶಿಲ್ಪದ ಮುಂದೆ ಸಾಷ್ಟಾಂಗ ಬಿದ್ದು, "ವಿಘ್ನೇಶ್ವರಾ! ನಾನು ದೊಡ್ಡ ಯೋಗಬಲವುಳ್ಳವನೆಂದು ಗರ್ವಪಡುತ್ತಿರುವಾಗ, ನೀನು ನನ್ನ ಕಣ್ಣು ತೆರೆಯಿಸಿದಿ. ಎಂತಹವನಾದರೂ ನಿನ್ನ ಮಾಯೆಗೆ ಅತೀತನಲ್ಲ." ಎಂದು ನಮಸ್ಕಾರ ಮಾಡಿ ಗಲ್ಲಬಡೆದುಕೊಂಡನು. ಆಗ ಶಿಲ್ಪದೊಳಗಿನ ದೇವತೆಗಳೆಲ್ಲಾ ಕೂಡಿ ಹಾಡುವಂತೆ, "ವಾತಾಪಿ ಗಣಪತಿಂ ಭಜೇಹಂ" ಎಂಬ ಕೀರ್ತನೆಯು ಹಂಸಧ್ವನಿ ರಾಗಾಲಾಪನೆ ಕೇಳುತ್ತಿದ್ದಿತು,






ಅದ್ಭುತವಾದ ವಿಘ್ನೇಶ್ವರ ಶಿಲ್ಪದೊಳಗಿನ ದೇವತಾ ವಿಗ್ರಹಗಳಿಂದ ಹೊರಡುವ ಗಾನಾಮೃತ ಪಾನದಿಂದ ತನ್ಮಯನಾಗಿ ಹೋದ ಅಗಸ್ತ್ಯನು "ಹೇ ! ಅದ್ಭುತ ಗಜಾನನಾ ! ನಿನ್ನ ದಿವ್ಯ ವಿಗ್ರಹವನ್ನು ನೀನೇ ಕಡೆದುಕೊಂಡೆಯಾ ? ಹೌದು. ಇಂತಹ ಮಹೋನ್ನತ ಶಿಲ್ಪವನ್ನು ನಿನ್ನ ಹೊರತು ಬೇರೆ ಯಾರಿಂದ ಕಡೆಯಲು ಸಾಧ್ಯ !" ಎಂದು ಹೇಳಿಕೊಂಡನು.

ಅವನ ಮಾತಿಗೆ ವಿಗ್ರಹದೊಳಗಿನಿಂದ ಹೀಗೆ ಮಾರ್ನುಡಿ ಹೊರಟಿತು : "ಅಗಸ್ತ್ಯಮಹರ್ಷೀ ! ನನಗೋಸ್ಕರ ನಾನು ಶಿಲ್ಪವನ್ನು ಕಡೆದುಕೊಳ್ಳಲಿಲ್ಲ. ನಿನ್ನ ತೃಪ್ತಿಗಾಗಿಯೇ ನಿನ್ನ ಆಸೆಯನ್ನು ನೆರವೇರಿಸಿದ್ದೇನೆ, ಅಷ್ಟೇ. ಆದುದರಿಂದ ಈ ಮಹಾ ಶಿಲ್ಪವು ಸ್ವಲ್ಪ ಕಾಲವಷ್ಟೇ ಇರುತ್ತದೆ. ಅಮೇಲೆ ಅದೃಶ್ಯವಾಗಿ ಹೋಗುತ್ತದೆ. ದ್ವಾಪರಯುಗದಲ್ಲಿ ಧರ್ಮರಾಜನು ಪ್ರಾರಂಭಿಸುವ ಅಶ್ವಮೇಧ ಯಾಗದ ಸಂದರ್ಭದಲ್ಲಿ, ಇದೇ ಸ್ಥಾನದಲ್ಲಿ ಮತ್ತೊಂದು ದೊಡ್ಡದಾದ ನನ್ನ ವಿಗ್ರಹವು ಇಲ್ಲಿ ಪ್ರತಿಷ್ಠಿಸಲ್ಪಡುತ್ತದೆ. ವಾತಾಪಿಗಣಪತಿ ಎಂದು ಆ ವಿಗ್ರಹವು ಪ್ರಸಿದ್ಧವಾಗುತ್ತದೆ".

ಈ ವಿಧವಾಗಿ ಧೌಮ್ಯನು ಅರ್ಜುನನಿಗೆ ಹೇಳುತ್ತಾ "ಅರ್ಜುನಾ, ನಾವೀಗ ನೋಡುವುದು ಆ ಮಹಾದ್ಭುತ ಶಿಲ್ಪವನ್ನೇ." ಎಂದು ಮುಗಿಸಿದನು.

ಅರ್ಜುನನು ಆ ಮಹಾಗಣಪತಿಗೆ ಪ್ರದಕ್ಷಿಣೆಗಳನ್ನು ಮಾಡಿ, ಭಕ್ತಿಶ್ರದ್ಧೆಗಳಿಂದ ಸಾಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸಿ ಆ ಮಹಾಶಿಲ್ಪವನ್ನು ಪರಿಶೀಲಿಸಿ ನೋಡಿದನು. ಆ ವಿಘ್ನೇಶ್ವರ ಶಿಲ್ಪವನ್ನು ಅಂಟಿಕೊಂಡು ತ್ರಿಮೂರ್ತಿಗಳು, ಜಗದಂಬೆ, ಲಕ್ಷ್ಮೀ, ಪಾರ್ವತಿ, ಸರಸ್ವತಿಯರು, ನವಗ್ರಹಗಳು ಮೊದಲಾದ ಅನೇಕ ದೇವತೆಗಳು ಶಿಲ್ಪರೂಪಗಳಲ್ಲಿ ಕಡೆಯಲ್ಪಟ್ಟಿದ್ದರು. ವಿಘ್ನೇಶ್ವರನ ಎರಡು ಪಾದಗಳ ಇರುಕಿನೆಡೆಯಲ್ಲಿ ವಿಘ್ನವು ಬಂಧಿಸಲ್ಪಟ್ಟಿತ್ತು. ಇಲಿರಾಜನ ಬಾಲವು ವಿಗ್ರಹದ ಸುತ್ತಲೂ ವಲಯಾಕಾರದಲ್ಲಿ ಸುತ್ತಲ್ಪಟ್ಟಿತ್ತು. ಶಿಲ್ಪದ ಶೋಭೆ



ಯನ್ನು ನೋಡಲು ಸಾವಿರ ಕಣ್ಣುಗಳೂ ಸಾಲವೆಂದು ಅರ್ಜುನನಿಗೆ ತೋರಿತು. ತಣಿವೆತೀರ ದಂತೆ ನೋಡುತ್ತಾ ಅರ್ಜುನನು ಧೌಮ್ಯ ನೊಂದಿಗೆ, "ಆಚಾರ್ಯ ದೇವಾ, ಈ ಶಿಲ್ಪವನ್ನು ನೋಡಿ ನಾನು ಧನ್ಯನಾದೆನು. ನನ್ನ ಜನ್ಮ ಸಾರ್ಥಕ ವಾಯಿತು. ಇಷ್ಟೊಂದು ಮಹನೀಯವಾದ ಶಿಲ್ಪವು ಈ ಪುಣ್ಯಸ್ಥಳದಲ್ಲಿರುವಾಗ, ಇದರ ಸಮೀಪದಲ್ಲಿರುವ ವಾತಾಪಿನಗರವು ಮಹೋನ್ನತ ದಶೆಯನ್ನು ಅನುಭವಿಸಿ ಈಗ ಈ ರೀತಿಯಾಗಿ ಪಾಳುಬಿದ್ದಿತೇಕೆ ? ವಾತಾಪಿನಗರದ ವೃತ್ತಾಂತವನ್ನು ಇನ್ನಿಷ್ಟು ಕೇಳ ಬೇಕೆಂದು ಕುತೂಹಲವಾಗಿದೆ" ಎಂದನು.

ಧೌಮ್ಯನು ಮತ್ತೆ ಹೇಳಲು ಪ್ರಾರಂಭಿಸಿದನು :

ಅಗಸ್ತ್ಯನು ಲೋಪಾಮುದ್ರೆಯ ಆದೇಶಾನು ಸಾರವಾಗಿ ಏನೊಂದನ್ನೂ ಉಳಿಸಿಕೊಳ್ಳದೆ, ಇರುವ ಧನವನ್ನೆಲ್ಲಾ ಎಲ್ಲರಿಗೂ ಹಂಚಿಕೊಟ್ಟು, "ಪ್ರಜಾರಾಜ್ಯ ಪರಿಪಾಲನೆಯ ಬಾಧ್ಯತೆಗಳನ್ನು ನೋಡಿಕೊಂಡು, ಪೌರಧರ್ಮಗಳನ್ನು ಅನುಸರಿಸುತ್ತ ಸುಖವಾಗಿರಿರಿ" ಎಂದು ಪ್ರಜೆಗಳಿಗೆ ಹೇಳಿ, ಎಲ್ಲರ ಅನುಮತಿ ಪಡೆದು ಉಟ್ಟ ಬಟ್ಟೆಗಳೊಂದಿಗೆ ಲೋಪಾ ಮುದ್ರೆಯನ್ನು ಕರೆದುಕೊಂಡು ನಿಶ್ಚಿಂತನಾಗಿ ಹೊರಟುಹೋದನು.

ವಿಘ್ನೇಶ್ವರ ಮಹಾಶಿಲ್ಪವನ್ನು ಪ್ರಜಾರಾಜ್ಯದ ಅಧಿದೇವತೆಯಾಗಿ ಇಟ್ಟುಕೊಂಡು ಆರಾಧಿಸುತ್ತ ವಾತಾಪಿ ನಗರದ ಪ್ರಜೆಗಳು ಚಿರಕಾಲ ಕ್ರಮಬದ್ಧ ವಾಗಿ ಸುಖಜೀವನ ನಡೆಸಿದರು. ಹೀಗೆ ತಲಾಂತರ ಗಳು ಕ್ರಮಿಸಿದಂತೆ ವಾತಾಪಿ ನಗರವು ಪ್ರವರ್ಧ ಮಾನವಾಗಿ ದೇಶದೇಶಾಂತರಗಳಲ್ಲಿ ಕೂಡಾ ಖ್ಯಾತಿ ಗೊಂಡಿತು.

. ಆಗ ಏನಾಯಿತೆಂದರೆ, ಅಗಸ್ತ್ಯನ ಭಯದಿಂದ ಓಡಿಹೋದ ರಾಕ್ಷಸ ಇಲ್ವಲನು, ಅವನ ಕಣ್ಣಿಗೆ ಬಿದ್ದರೆ ಸಾಯುವೆನೆಂಬ ಭಯದಲ್ಲಿ ವಿಂಧ್ಯಾಟವಿ ಯಲ್ಲಿ ಊರು ಹೆಸರಿಲ್ಲದ ಕತ್ತಲೆಯಲ್ಲೇ ಬದುಕಿ ಕೊಂಡಿದ್ದನು. ವಾತಾಪಿ ನಗರದ ಹೆಸರು ಖ್ಯಾತಿ ಗಳನ್ನು ಕೇಳುತ್ತಲೇ ಇದ್ದನು. ಅನೇಕ ವರ್ಷ ಗಳಿಂದಲೂ ಅಗಸ್ತ್ಯನು ವಾತಾಪಿ ನಗರಕ್ಕೆ ಬಾರ ದಿರುವುದನ್ನು ನೋಡಿ, ಇನ್ನು ಬರಲಾರನೆಂಬ ಧೈರ್ಯದಿಂದ, ಅಗಸ್ತ್ಯನ ಸೃಷ್ಟಿಯನ್ನು ನಾಶ ಮಾಡಲು ಬಯಲಿಗೆ ಬಂದನು.

ಆಗ ಅವನದು ದೊಡ್ಡ ಮನುಷ್ಯನ ವೇಷ ವಾಗಿತ್ತು. ಮಹಾಧರ್ಮಾತ್ಮನ ಹಾಗೆ ನಟನೆ. ಪ್ರಜಾಸೇವೆಯೇ ತನ್ನ ಜೀವಿತ ಪರಮಾರ್ಥ ಎಂಬವನಂತೆ ರೂಪ ವೇಷಗಳಿಂದ ಪ್ರಜಾ ಜನರ ನಡುವೆ ಸೇರಿಕೊಂಡನು. ಆಗಿನ ಕಾಲದ ಮಾರ್ಪಾಡಿ ನೊಂದಿಗೆ ಉಂಟಾದ ಪರಿಸ್ಥಿತಿ ಕೂಡಾ ಇಲ್ವಲನಿಗೆ ಅನುಕೂಲವಾಗಿಯೇ ಇದ್ದಿತು.

ಕಾಲಮಹಿಮೆಯಿಂದ ಈಗ ವಾತಾಪಿ ನಗರದ ಪ್ರಜೆಗಳಲ್ಲಿ ಸ್ವಾರ್ಥಚಿಂತನೆ ಅಂಕುರಿಸಿ ಬೆಳೆಯ

ತೊಡಗಿತ್ತು. ಜ್ಞಾನಪಿಪಾಸೆ ಜನರಲ್ಲಿ ಕಡಿಮೆಯಾಯಿತು. ಪ್ರಜೆಗಳೊಳಗೆ ಭೇದಾಭಿಪ್ರಾಯಗಳೂ ಹೆಚ್ಚು ಕಡಿಮೆಗಳೂ, ಮೇಲ್ಮನ ಕೀಳ್ಮನಗಳೂ ತಲೆ ಹಾಕಿದುವು. ಬುದ್ಧಿವಂತಿಕೆಗಳು ಬುದ್ಧಿ ಕಡಿಮೆಯಾದವರನ್ನು ವಂಚಿಸಲು ಉಪಯೋಗವಾದುವು. ಅಂತಹ ಪತನ ದಶೆಯ ಪ್ರಾರಂಭದಲ್ಲಿಯೇ ಇಲ್ವಲನು ಒಂದು ಗುಂಪಿನ ಪ್ರಜೆಗಳಿಗೆ ನಾಯಕನಾಗಿ ಮೆರೆಯತೊಡಗಿ, ಇಂದ್ರಜಾಲ ವಿದ್ಯೆಗಳಿಂದ ಅದ್ಭುತ ಪುರುಷನೆನಿಸಿ, ಮಹಾನಾಯಕನಾಗಿ ಎಲ್ಲರನ್ನೂ ವಶಪಡಿಸಿಕೊಳ್ಳುವಷ್ಟು ಸಮರ್ಥನಾದನು. ನಗರದ ಮಧ್ಯದಲ್ಲಿರುವ ವಿಘ್ನೇಶ್ವರನ ಮಹಾಶಿಲ್ಪದ ಮೇಲೆ ಜನರಿಗೆ ಗುರಿ ನಿಂತಿರುವ ವರೆಗೆ ಅಗಸ್ತ್ಯನನ್ನೂ, ಅಗಸ್ತ್ಯನು ಹೇಳಿದ ನೈತಿಕ ಸೂತ್ರಗಳನ್ನೂ ಮರೆಯಲಾರರೆಂಬ ಸೂಕ್ಷ್ಮವು ಇಲ್ವಲನಿಗೆ ಗೊತ್ತಾಯಿತು. ತಾಂತ್ರಿಕ ವಿದ್ಯೆಯನ್ನು ಪ್ರಯೋಗಿಸಿ ಜನರಿಗೆ ಮದ್ಯಪಾನೀಯಗಳ ಚಟ ಅಂಟಿಸಿದನು. ಅಗಸ್ತ್ಯನ ನೀತಿವಾಕ್ಯಗಳ ಫಲಕಗಳನ್ನು ಕೀಳಿಸಿ, ಹೊಸ ಹೊಸ ಸೂತ್ರಗಳನ್ನು ಬೋಧಿಸಿದನು. ಒಬ್ಬರನ್ನೊಬ್ಬರು ದೋಚಿಕೊಳ್ಳುವುದರಲ್ಲಿರುವ ಆನಂದ ವಿಶೇಷಗಳನ್ನು ಪ್ರಚಾರ ಮಾಡಿದನು. ಹಳೆಯ ಸುಖಗಳನ್ನೇ ನಂಬಿ ಕುಳಿತುಕೊಳ್ಳುವುದು ಮನುಷ್ಯತ್ವವಲ್ಲವೆಂದೂ, ಹೊಸಹೊಸ ಸುಖಗಳನ್ನು ತಿಳಿದುಕೊಳ್ಳುವುದೇ ಜೀವಿಸುವುದೆಂಬ ಸಿದ್ಧಾಂತಕ್ಕೆ ಲಕ್ಷಣವೆಂದೂ ಪ್ರಜೆಗಳ ಬುದ್ಧಿಯನ್ನು ಚೆನ್ನಾಗಿ ತಿರುಗಿಸಿದನು. ಪ್ರಚ್ಛನ್ನ ವೇಷಗಳಿಂದ ಅನೇಕಮಂದಿ ಮಿತ್ರ ರಾಕ್ಷಸರು ಇಲ್ವಲನ ಜತೆಗೆ ಕೂಡಿದರು. ಪ್ರಜಾಸೇವಕನಾಗಿ ಅವತರಿಸಿ, ಪ್ರಜಾನಾಯಕನಾಗಿ ಮೇಲೇರಿದ ಇಲ್ವಲನು ಮಹಾನಾಯಕನಾಗಿ ಪ್ರಜೆಗಳ ಮೇಲೆ ಸವಾರಿ ಮಾಡುತ್ತ ಪ್ರಜೆಗಳಿಗೊಂದು ಅಂಕುಶದಂತಾದನು. ಅಂತಃಕಲಹಗಳನ್ನು ಎಬ್ಬಿಸಿದನು.



ವಾತಾಪಿ ನಗರವು ಪರಸ್ಪರ ಜಗಳಾಟ ಹೊಡೆದಾಟಗಳಿಂದ ತುಂಬಿತು. ದುಷ್ಟರು ಸಾಧುಗಳನ್ನು ಬೇಟೆಯಾಡತೊಡಗಿದರು. ನಗರವು ಅಲ್ಲಕಲ್ಲೋಲವಾಯಿತು. ಅನೇಕಮಂದಿ ಸಾಧು ಪ್ರಜೆಗಳು ಭಯದಿಂದ ಇರಲಾಗದೆ, ನೆಮ್ಮದಿಯನ್ನು ಅರಸಿಕೊಂಡು ನಗರವನ್ನು ಬಿಟ್ಟು ಹೋಗಲಿಕ್ಕೂ ತೊಡಗಿದರು.

ಇಲ್ವಲನು ನಗರದ ಮಧ್ಯದಲ್ಲಿದ್ದ ವಿಘ್ನೇಶ್ವರನ ಮಹಾಶಿಲ್ಪವನ್ನು ನೆಲಮಟ್ಟ ಮಾಡಬೇಕೆಂಬ ಪ್ರಯತ್ನಕ್ಕೆ ಪ್ರಾರಂಭಿಸಿದನು. ಶತಘ್ನಿಯನ್ನು ತಯಾರಿಸಿ ತಂದು ಅದರ ಸುತ್ತಲೂ ಗುರಿಯಿಡಿಸಿದನು. ಶಿಲ್ಪದ ಅಡಿಯಲ್ಲಿ ಸಿಡಿಮದ್ದುಗಳನ್ನು ಜಡಿಸಿ ಇನ್ನೇನು ಬೆಂಕಿ ತಾಗಿಸಬೇಕೆಂದಿರುವಾಗ ಅತಿವಿಚಿತ್ರವಾದೊಂದು ಅದ್ಭುತವೇ ನಡೆಯಿತು. ಬೆಂಕಿ ತಗಲುವುದಕ್ಕೆ ಮೊದಲೇ ಮದ್ದುಗಳು ಸಿಡಿದುವು. ಆ ಅದುರುವಿಕೆಯಿಂದ ಶತಘ್ನಿ ಶಕಟ



ಗಳು ಅತ್ತಿಂದಿತ್ತ ತಿರುಗಿ ಸಿಡಿಯತೊಡಗಿ ಗುಂಡು ಗಳ ಮಳೆಯೇ ಸುತ್ತಲೂ ಹಾರಿದುವು. ಆ ಅಗ್ನಿ ವರ್ಷಣದಿಂದ ದುಷ್ಟರೆಲ್ಲಾ ಸತ್ತು ಸತ್ತು ಬಿದ್ದರು. ಅನೇಕರು ವಿಕಲಾಂಗರಾದರು. ಅಂಥವರಲ್ಲಿ ಇಲ್ವಲನೂ ಒಬ್ಬನು. ಇಲ್ವಲನಿಗೆ ಒಂದು ಕಾಲೂ ಒಂದು ಕೈಯೂ ಹೋದುವು.

ರಕ್ತಸಿಕ್ತವಾದ ಶರೀರದಿಂದ ಅವನು ನೆಲದಲ್ಲಿ ಬಿದ್ದು ಜೀವದೊಂದಿಗೆ ನರಳುತ್ತ ಹೊರಳಾಡಿ ಕೊಂಡಿರುವಾಗ, ಗಣಪತಿ ವಿಗ್ರಹದೊಳಗಿನಿಂದ ಈ ಮಾತುಗಳು ಕೇಳಿದುವು :

" ಎಲೋ ಇಲ್ವಲಾ ! ಹೀಗೆಯೇ ಅಂಗ ವೈಕಲ್ಯತೆಯಿಂದ, ವಾರ್ಧಕ್ಯದಲ್ಲಿ ನರಳಿ ನರಳಿ ಕೊಳೆತು ಇನ್ನೂ ಇಷ್ಟು ಕಾಲ ಜೀವಿಸಿಕೊಂಡಿರು. ನಿನಗೆ ಅದೇ ಸರಿಯಾದ ಶಿಕ್ಷೆ."

ವಿಘ್ನೇಶ್ವರನ ಈ ಶಾಪ ವಾಕ್ಯಗಳು ಅವನ ಕಿವಿಗಳೊಳಗೆ ಚೆನ್ನಾಗಿ ಅಚ್ಚೊತ್ತಿದುವು. ಅಲ್ಲಿಗೆ ವಾತಾಪಿ ನಗರವು ಪೂರ್ವದ ವೈಭವವನ್ನು ಪೂರ್ತಿ ಕಳೆದುಕೊಂಡು, ಕೆಲವೇ ಮಂದಿ ಬಿಡಿಯಾಳುಗಳಿಂದ ಜೀವ ಮಾತ್ರ ಹಿಡಿದುಕೊಂಡು ಹೀಗಾಗಿದೆ.

ಧೌಮ್ಯನು ಹೀಗೆ ಹೇಳಿ ಮುಗಿಸಿದ ಕೂಡಲೇ ಅರ್ಜುನನು ವಿಗ್ರಹದ ಕಡೆಗೆ ಮುಖ ತಿರುಗಿಸಿ ನೋಡಿದನು. ಆಶ್ಚರ್ಯದಿಂದ ಅವನ ಬಾಯಿ ಅರೆದೆರೆದಂತೆಯೇ ನಿಂತುಹೋಯಿತು. ವಿಘ್ನೇಶ್ವರ ಮಹಾಶಿಲ್ಪವು ಅಲ್ಲಿ ಕಾಣಲೇ ಇಲ್ಲ !

ಧೌಮ್ಯನು ಸ್ವಲ್ಪವೂ ಆಶ್ಚರ್ಯ ಪಡದೆ, " ಅರ್ಜುನಾ, ಆಶ್ಚರ್ಯ ಪಡಬೇಡ. ಮಹಾ ಶಿಲ್ಪವು ಅದೃಶ್ಯವಾಗಿ ಹೋಗುತ್ತದೆಂದು ಆಗಲೇ ಹೇಳಿದೆನಷ್ಟೆ ? " ಎಂದನು.

ಆಗ ಸುತ್ತುಮುತ್ತಲಿನ ಮುಳ್ಳಿನ ಪೊದರು ಗಳಾಚೆಯಿಂದ ತೀರಾ ಹಣ್ಣು ಹಣ್ಣು ಮುದುಕ ನಾದ ವಿಕೃತರೂಪದವನೊಬ್ಬನು, ಒಂದು ಕೈ, ಒಂದು ಕಾಲಿನಿಂದ ಶರೀರವನ್ನು ಎಳೆದುಕೊಳ್ಳುತ್ತಾ ಬಂದು ಕೆಟ್ಟದನಿಯಿಂದ ಅರಚಿ, ಮಹಾಶಿಲ್ಪವಿದ್ದ ಕಡೆಗೆ ಒಕ್ಕೈಯನ್ನು ಚಾಚಿ ವಂದಿಸುವಂತೆ ಮಾಡುತ್ತಾ, ಹಾಗೆಯೇ ಬಿದ್ದು ಪ್ರಾಣಬಿಟ್ಟನು.

ಅರ್ಜುನನು ಅವನನ್ನು ನೋಡಿ, " ಗುರು ದೇವಾ ! ಅವನೇ ಅಲ್ಲವೇ ರಾಕ್ಷಸ ಇಲ್ವಲ ! " ಎಂದು ಕೇಳಿದನು.

" ಹೌದು. ಅವನ ಕಿರಾತ ಕೃತ್ಯಗಳಿಂದಲೇ ರಾಕ್ಷಸ ಶಕ್ತಿಯನ್ನು ಕೂಡಾ ಕಳೆದುಕೊಂಡು ಹೀಗಾದನು. ದುಷ್ಟರಿಗೆ ಒಂದುದಿನ ಹೀಗೆಯೇ ಆಗುತ್ತದೆ " ಎಂದನು ಧೌಮ್ಯ.

ಅನಂತರ ಅರ್ಜುನನು ತಡಮಾಡದೆ, ಅಣ್ಣನಾದ ಧರ್ಮರಾಜನನ್ನು ಕರೆದುಕೊಂಡು ಬರಲು ದೂತರನ್ನು ಹಸ್ತಿನಾವತಿಗೆ ಓಡಿಸಿದನು. ಅದರಂತೆ ಹಸ್ತಿನಾಪುರದಿಂದ, ಭೀಮ, ನಕುಲ, ಸಹ



ದೇವರನ್ನೂ, ಪರಿವಾರದವರನ್ನೂ ಕರೆದುಕೊಂಡು ಧರ್ಮರಾಜನು ವಾತಾಪಿ ನಗರಕ್ಕೆ ಬಂದನು.

ಆ ರಾತ್ರಿ ಧರ್ಮರಾಜನು ವಿಘ್ನೇಶ್ವರನ ಮಹಾ ಶಿಲ್ಪವು ಅಂತರ್ಧಾನವಾದ ಸ್ಥಳಕ್ಕೆ ಇದಿರಾಗಿ ಕುಳಿತುಕೊಂಡು, "ದೇವಾ! ನನ್ನ ತಮ್ಮನು ನಿನ್ನ ಮಹಾಶಿಲ್ಪವನ್ನು ನೋಡಿ ಧನ್ಯನಾದನು. ನನಗೂ ಆ ಭಾಗ್ಯವನ್ನು ಕರುಣಿಸಲಾರೆಯಾ? ನಿನ್ನ ಮಹನೀಯವಾದ ಶಿಲ್ಪವನ್ನು ಇನ್ನಾರು ಕೆತ್ತ ಬಲ್ಲರು? ಬೇಗದಲ್ಲೇ ನಿನ್ನ ವಿಗ್ರಹ ಪ್ರತಿಷ್ಠೆ ನಡೆಯುವ ಮಹಾಭಾಗ್ಯವನ್ನು ನನಗೆ ಕೊಡು ಮಹಾಗಣಪತೀ!" ಎಂದು ಕಣ್ಣು ಮುಚ್ಚಿ ವಿಘ್ನೇಶ್ವರನನ್ನು ಧ್ಯಾನಿಸುತ್ತಾ ಬೇಡಿಕೊಂಡನು.

ಆಗ ಅವನ ಕಿವಿಗಳಲ್ಲಿ "ಧರ್ಮಜಾ, ದೇವ ಶಿಲ್ಪಿ ವಿಶ್ವಕರ್ಮನೂ, ದಾನವಶಿಲ್ಪಿ ಮಯನೂ ಕೂಡಿ ಶಿಲ್ಪಿಗಳಾಗಿ ಬಂದು ವಿಗ್ರಹವನ್ನು ಕೆತ್ತಿ, ಕಡೆದು, ರೂಪಿಸಿಕೊಡುತ್ತಾರೆ. ವಿಗ್ರಹಪ್ರತಿಷ್ಠೆ ನಡೆದ ಕೂಡಲೇ ಯಾಗಾಶ್ವವು ಕದಲಿ ಹೊರಡುತ್ತದೆ. ಆಮೇಲೆ ನಿನ್ನ ಅಶ್ವಮೇಧಯಾಗವು ಜಯಪ್ರದವಾಗಿ ನಡೆಯುತ್ತದೆ. ವಾತಾಪಿ ನಗರವನ್ನು ಪುನರುದ್ಧಾರಣ ಮಾಡು. ನಿನ್ನ ಪಾಂಡವ ಸಂತತಿಯವರಾದ ಚಂದ್ರವಂಶದ ರಾಜರು ಚಿರಕಾಲ ಈ ನಗರವನ್ನು ಪಾಲಿಸುತ್ತಾರೆ" ಎಂಬ ಮಾತುಗಳು ಕೇಳಿಸಿದುವು.

ಧರ್ಮರಾಜನು ಕಣ್ಣುಬಿಡಿಸಿ ನೋಡಿದಾಗ, ಇದಿರಿನಲ್ಲಿ ಮಹೋನ್ನತವಾದ ವಿಘ್ನೇಶ್ವರನ ಮಹಾಶಿಲ್ಪವು ದೇದೀಪ್ಯಮಾನವಾಗಿ ಕಾಣಿಸಿ, ಹಾಗೆಯೇ ಅಂತರ್ಧಾನವಾಗಿ ಹೋಯಿತು. ಧರ್ಮರಾಜನ ಸರ್ವಾಂಗವೂ ಆನಂದಪುಲಕಿತವಾಯಿತು. ಮರುದಿನ ಬೆಳಿಗ್ಗೆ ಬೆಳ್ಳಗಿನವನೊಬ್ಬನೂ, ಕಪ್ಪಗಿನವನೊಬ್ಬನೂ ಸಮೀಪದಲ್ಲಿ ಪೊದರುಗಳ ನಡುವಿನಲ್ಲಿದ್ದ ಸ್ಫಟಿಕ ಶಿಲೆಯನ್ನು ಪರೀಕ್ಷಿಸುತ್ತಿರುವುದು ಕಂಡಿತು. ಅವರು ಯಾರೆಂಬುದನ್ನು ಗ್ರಹಿಸಿ ಧರ್ಮರಾಜನು ಅವರಿಗೆ ವಂದನೆಗಳನ್ನರ್ಪಿಸಿ ಆದರಿಸಿ ಗೌರವಿಸಿದನು.

ಅವರಿಬ್ಬರೂ ಆ ಶಿಲೆಯನ್ನು ಕೀಳಲು ಪ್ರಯತ್ನಿಸುವಾಗ, ಆ ಸ್ಥಳದ ಅಡಿಯಲ್ಲಿ ದೊಡ್ಡದೊಂದು ನಿಧಿಯ ಭಂಡಾರವು ಸಿಕ್ಕಿತು. ಅದು ಇಲ್ವಲನು ಬಚ್ಚಿಟ್ಟ ಧನರಾಶಿಯಾಗಿತ್ತು. ಧನದ ಮೋಹವನ್ನು ಬಿಡದೆ ಅನುಭವಿಸಲಾಗದೆ ನರಳಿ ನರಳಿ ಇಲ್ವಲನು ಸತ್ತದ್ದು ಕೂಡಾ ಅಲ್ಲಿ ತಾನೇ! ಅದೀಗ ಸದ್ವಿನಿಯೋಗಕ್ಕೆ ಸಿಕ್ಕಿದಂತಾಯಿತು. ಧರ್ಮರಾಜನು ಆ ಧನವನ್ನು ವಾತಾಪಿ ನಗರದ ಅಭಿವೃದ್ಧಿಗಾಗಿಯೇ ವಿನಿಯೋಗಿಸಿದನು.

ಇಬ್ಬರು ಮಹಾ ಶಿಲ್ಪಿಗಳ ಕೈಗಳಿಂದ ವಿಘ್ನೇಶ್ವರನ ಮಹಾಶಿಲ್ಪವು ಸಿದ್ಧವಾಯಿತು. ಮೊದಲಿನ ಮಹಾ ಶಿಲ್ಪವು ಮಾಯವಾದ ಸ್ಥಳದಲ್ಲಿಯೇ ದೊಡ್ಡ ಆಲಯವೂ, ದೊಡ್ಡ ಮಂಟಪವೂ ತಯಾರಾದುವು.




ವಿಶ್ವಕರ್ಮನೂ ಮಯನೂ ಸೇರಿ, ಒಂದು ವಿಶೇಷ ರೀತಿಯ ಶಿಲ್ಪ ಸಾಂಪ್ರದಾಯವನ್ನು ಆರೀತಿಯಾಗಿ ಭೂಮಿಯಲ್ಲಿ ಸ್ಥಿರಗೊಳಿಸಿದರು. ಹೊಸ ಶಿಲ್ಪ ಸಾಂಪ್ರದಾಯಕ್ಕೆ ಅದು ನಾಂದಿಯಾಯಿತು. ಭರತವಂಶದವರಿಂದ ಸ್ಥಾಪಿತವಾದ ಅದು ಭಾರತೀಯ ಶಿಲ್ಪಕಲೆಯಾಗಿ ಹೆಸರು ಪಡೆಯಿತು. ಕಾಲಾನುಸಾರವಾಗಿ ಅದು ಪ್ರಖ್ಯಾತವಾಗಿ ವರ್ಧಿಸುತ್ತಾ ಚಿರಸ್ಥಾಯಿಯಾಯಿತು. ಗಣಪತಿ ಶಿಲ್ಪವೂ, ಆಲಯವೂ ಪೂರ್ತಿಯಾದ ಮೇಲೆ ಆ ಶಿಲ್ಪಿಗಳಿಬ್ಬರೂ ಹೇಗೆ ಬಂದರೋ ಹಾಗೆಯೇ ಅದೃಶ್ಯರಾದರು.

ಆಲಯದಲ್ಲಿ ಧರ್ಮರಾಜನಿಂದ ವಿಘ್ನೇಶ್ವರ ವಿಗ್ರಹ ಪ್ರತಿಷ್ಠೆ ನಡೆದ ಕೂಡಲೇ ಯಾಗಾಶ್ವವು ನಿಂತ ಸ್ಥಳದಿಂದ ದೌಡು ತೆಗೆದು ಓಡತೊಡಗಿತು. ಅರ್ಜುನನೂ, ಭೀಮನೂ ಸೈನ್ಯದೊಂದಿಗೆ ಅದರ ಒಂದೆ ಹೊರಟರು.

ಅಗಸ್ತ್ಯನು ಏರ್ಪಡಿಸಿದ ಪ್ರಜಾರಾಜ್ಯ ಪದ್ಧತಿಯನ್ನೇ ಧರ್ಮರಾಜನು, ವಾತಾಪಿ ನಗರದಲ್ಲಿ ಮತ್ತೆ ಏರ್ಪಡಿಸಿದನು. ಅದಕ್ಕೆ ಬೇಕಾದ ಹಾಗೆ ತಕ್ಕ ಶಾಸನಗಳನ್ನು ಮಾಡಿ ಅವರಿಗೆ ಒಪ್ಪಿಸಿ, ನಕುಲ ಸಹದೇವರೊಂದಿಗೆ ಹಿಂದಿರುಗಿ ಹಸ್ತಿನಾಪುರಕ್ಕೆ ಹೊರಟುಹೋದನು.

ಪ್ರಜಾರಾಜ್ಯದ ಪರ್ಯಾಯ ಪದವಾಗಿ ಆ ಪ್ರಾಂತಕ್ಕೆ ಅಗಸ್ತ್ಯ ರಾಜ್ಯವೆಂದೂ, ನಗರಕ್ಕೆ ಅಗಸ್ತ್ಯ ನಗರವೆಂದೂ ಸ್ವಲ್ಪ ಕಾಲದವರೆಗೆ ಪ್ರಚಾರದಲ್ಲಿತ್ತು. ಕಾಲಕ್ರಮದಲ್ಲಿ ವಾತಾಪಿ ನಗರವೆಂಬ ಹೆಸರೇ ಸ್ಥಿರವಾಗಿ ಉಳಿಯಿತು.

ಅರ್ಜುನನು ದಿಗ್ವಿಜಯವನ್ನು ಮುಗಿಸಿಕೊಂಡು ಕುದುರೆಯೊಂದಿಗೆ ಹಸ್ತಿನಾಪುರವನ್ನು ತಲಪಿದನು. ಧರ್ಮರಾಜನ ಅಶ್ವಮೇಧಯಾಗವು ಮಹಾಘನವಾಗಿ ನಡೆಯಿತು. ಧರ್ಮರಾಜನು ಯಾಗ ಭಾಗಗಳನ್ನು ವಿಶ್ವಕರ್ಮನಿಗೂ, ಮಯನಿಗೂ ಪ್ರತ್ಯೇಕವಾಗಿ ಸಮರ್ಪಿಸಿದನು. ಶಿಲ್ಪಿಗಳಿಗೆಲ್ಲಾ ಗೌರವ ಪ್ರಪತ್ತಿಗಳನ್ನು ಏರ್ಪಡಿಸಿದನು.

ಧರ್ಮರಾಜನ ಅನಂತರ ಪರೀಕ್ಷಿತನೂ, ಪರೀಕ್ಷಿತನ ತರುವಾಯ ಜನಮೇಜಯನೂ ರಾಜ್ಯಪಾಲನೆ ಮಾಡಿದರು. ಜನಮೇಜಯನ ಸಂತತಿಯವರಾದ ರಾಜರ ವಶಕ್ಕೆ ತಾನಾಗಿಯೇ ವಾತಾಪಿ ನಗರವು ಬಂದಿತು. ವಾತಾಪಿ ನಗರವನ್ನು ಪಾಲಿಸಿದ ಚಂದ್ರವಂಶದ ರಾಜರಲ್ಲಿ ಶತ್ರುಂಜಯನು ದೊಡ್ಡ ಸಾಮ್ರಾಜ್ಯ ಪಿಪಾಸಿಯಾಗಿದ್ದನು. ಅವನು ವಾತಾಪಿ ನಗರವನ್ನು ರಾಜಧಾನಿಯಾಗಿ ಮಾಡಿಕೊಂಡು, ವಾತಾಪಿ ಸಾಮ್ರಾಜ್ಯವನ್ನು ಸ್ಥಾಪಿಸಿ ದೊಡ್ಡ ರಾಜನೆನಿಸಿದನು. ಸೈನ್ಯವನ್ನು ಬೆಳೆಯಿಸಲಿಕ್ಕಾಗಿ ಪ್ರಜೆಗಳ ಮೇಲೆ ತೆರಿಗೆಗಳನ್ನು ಹಾಕಿದನು. ಅವನು ನಿರಂಕುಶ ಪ್ರಭುತ್ವವನ್ನು ಚಲಾಯಿಸುತ್ತ, ಇಲ್ವಲನು ಮತ್ತೆ ಹುಟ್ಟಿದನೋ ಅನಿಸುವಂತಿದ್ದನು.

ಅವನ ಕುಮಾರರಲ್ಲಿ ಚಳುಕವರ್ಮನೆಂಬವನು ತುಂಬಾ ಒಳ್ಳೆಯವನಾಗಿದ್ದನು. ಅಗಸ್ತ್ಯನ ಪ್ರಜಾ ರಾಜ್ಯ ಸೂತ್ರಗಳ ಮೇಲೆ ಅವನಿಗೆ ಒಳ್ಳೆಯ ಗುರಿ ಯಿದ್ದಿತು. ಅವನು ವಿಘ್ನೇಶ್ವರನನ್ನು ಭಕ್ತಿಯಿಂದ ಆರಾಧಿಸುತ್ತ, ವಿದ್ಯಾರ್ಜನೆಯಲ್ಲಿಯೂ, ಲಲಿತಕಲೆ, ಶಿಲ್ಪ ಕಲೆಗಳ ಮೇಲೆಯೂ ಮನಸ್ಸುಳ್ಳವನಾಗಿದ್ದನು. ಅಗಸ್ತ್ಯನ ಅಂಶವೇ ಅವನಲ್ಲಿ ಇರುವುದೆಂದು ಜನರು ಹೇಳಿ ಕೊಳ್ಳುತ್ತಿದ್ದರು.

ಸಾಮ್ರಾಜ್ಯವನ್ನು ವಿಸ್ತರಿಸಲಿಕ್ಕಾಗಿ ಶತ್ರುಂಜಯನು ತನ್ನ ಕುಮಾರರಿಗೆ ಆಜ್ಞೆಗಳನ್ನು ಮಾಡಿದನು. ಆಗ ಚಳುಕನು ತಂದೆಯೊಂದಿಗೆ, "ಜನರಿಗೆ ಹಿಂಸೆ ಕೊಡುವುದೂ, ಪರರನ್ನು ಪೀಡಿಸುವುದೂ ಏನೇನೂ ಚೆನ್ನಾಗಿಲ್ಲ. ಈರೀತಿಯಾಗಿ ಸಾಮ್ರಾಜ್ಯ ವಿಸ್ತರಣೆ ಮಾಡುವುದಕ್ಕೂ, ಚಾಂಡಾಲ ವೃತ್ತಿಗೂ ಏನು ವ್ಯತ್ಯಾಸವಿದೆ ? ಇಂತಹ ನೀಚಕಾರ್ಯಗಳಿಗೆ ನಾನಿಲ್ಲ" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿ, ಅಣ್ಣಂದಿರೊಂದಿಗೆ ಸೈನ್ಯ ತೆಗೆದುಕೊಂಡು ಹೋಗಲು ನಿರಾಕರಿಸಿ ಬಿಟ್ಟನು !

ಶತ್ರುಂಜಯನು ಮಹಾ ಕೋಪದಿಂದ, "ಛೀ ಛೀ ! ಸಿಂಹದ ಹೊಟ್ಟೆಯಲ್ಲಿ ಇಲಿ ಹುಟ್ಟಿದಂತೆ ನೀನು ರಾಜವಂಶದಲ್ಲಿ ನನ್ನ ಮಗನಾಗಿ ಹುಟ್ಟಿದೆ ! ನಿನಗೆ ತಕ್ಕ ಶಾಸ್ತಿ ನಡೆಯಲೇಬೇಕು !" ಎಂದು ಒಂದು ಇಲಿಯನ್ನು ಹಿಡಿಸಿ ತರಿಸಿ, ಅದಕ್ಕೆ ಚುಳುಕಿ ಎಂದು ಹೆಸರಿಟ್ಟು, ಅದರೊಂದಿಗೆ ಚಳುಕ ವರ್ಮನಿಗೆ ಮದುವೆ ಮಾಡುವೆ ನೆಂದು ಡಂಗುರ ಹೊಡೆಸಿ ಎಲ್ಲರನ್ನೂ ಆಹ್ವಾನಿಸಿದನು.

ಚುಳುಕಿ ಎಂಬ ಆ ಇಲಿ "ಕಲ್ಯಾಣ ಕಿಂಕಿಣಿ" ಎಂಬ ಅಪ್ಸರಸಿ. ಇಂದ್ರನ ಶಾಪದಿಂದ ಇಲಿಯಾಗಿ ಭೂಮಿಯಲ್ಲಿ ಬಿದ್ದಿದ್ದಳು.

ಕಲ್ಯಾಣ ವೇದಿಕೆಯ ಮೇಲೆ ಅಲಂಕರಿಸಲ್ಪಟ್ಟ ಹಸೆಮಣೆಯ ಮೇಲೆ ಕುಳಿತಿದ್ದ ರಾಜಕುಮಾರ ನನ್ನೂ, ಇಲಿಯನ್ನೂ ನೋಡಿ ಎಲ್ಲರೂ ಮಾಡುವ ಪರಿಹಾಸದ ಕೋಲಾಹಲಕ್ಕೆ, ಚಳುಕವರ್ಮನು ನಾಚಿ ನೀರಾಗಿ ಹೋಗಬೇಕೆಂದೇ, ಶತ್ರುಂಜಯನು ಈ ವಿಚಿತ್ರ ವಿವಾಹಕ್ಕೆ ಎಲ್ಲಾ ರಾಜರನ್ನೂ ಪ್ರಜೆ ಗಳನ್ನೂ ಆಹ್ವಾನಿಸಿದ್ದನು.

ಆದರೆ ಚಳುಕವರ್ಮನು ಮಂದಹಾಸದಿಂದ, "ಇಲಿಯನ್ನು ಮಹಾರಾಜನ ಸೊಸೆಯಾಗಿ ಮಾಡಿಸಬಲ್ಲವನಾದ ನನ್ನ ಆರಾಧ್ಯದೇವ ಮೂಷಿಕ ವಾಹನ ವಿಘ್ನೇಶ್ವರನು, ಈ ಇಲಿಯನ್ನು ಕೋಕಿಲ ವಾಣಿಯಂತಹ ಕನ್ಯೆಯಾಗಿ ಮಾಡಲಾರನೆಂದು ಇಲ್ಲಿ ಯಾರೂ ನಂಬದಿದ್ದರೂ, ನಾನು ಗಟ್ಟಿಯಾಗಿ ನಂಬುತ್ತೇನೆ" ಎಂದನು.






**ಕೋ**ಣೆಯ ಹೊರಗೆ ಅಷ್ಟೊಂದು ಕೋಲಾಹಲ ನಡೆಯುತ್ತಿದ್ದರೂ, ಒಳಗೆ ನಿದ್ರಿಸಿಕೊಂಡಿದ್ದ ರೈತನಿಗೆ ಎಚ್ಚರವಾಗಲೇ ಇಲ್ಲ. ಅವನ ಬದಿಯಲ್ಲಿ ಪತ್ರ ಪುಷ್ಪಗಳಿಂದ ಅಲಂಕೃತವಾದ ಗಣೇಶನ ವಿಗ್ರಹ ವಿದ್ದಿತು. ನೆಲದಲ್ಲೆಲ್ಲಾ ಕಬ್ಬಿನ ರಸ ಪಾನಕದ ಜೊಲ್ಲು ಕೆಸರಿನಂತೆ ಕಾಣುತ್ತಿತ್ತು.

ಜಮೀನ್ದಾರನು ಇದೇನೆಂದು ಕಾವಲಿನವರನ್ನು ಕೇಳಿದನು. ಕಾವಲಿನವರು ನಡುಗುವ ಕಂಠದಿಂದ, "ಅಯ್ಯಾ, ಬಹಳ ರಾತ್ರಿಯಾಗಿ ಹೋಗಿತ್ತು. ಒಳಗಿರುವ ಆ ರೈತ ಯಾವ ಚಿಂತೆಯೂ ಇಲ್ಲದೆ ನಿದ್ದೆ ಮಾಡುವುದನ್ನು ನೋಡಿ ನಮಗೆ ಆಶ್ಚರ್ಯವಾಗುತ್ತಾ ಇತ್ತು. ನಮಗೂ ಹಾಗೆಯೇ ತೂಕಡಿಕೆ ಶುರುವಾಯಿತು. ಸ್ವಲ್ಪ ಹೊತ್ತು ಏನಾಯಿತೆಂದೇ ನಮಗೆ ಗೊತ್ತಾಗಲಿಲ್ಲ. ಆನೆಯ ಕಾಲಡಿ ಶಬ್ದ, ಶ್ವಾಸ, ಕೂಗು ಕೇಳಿ ಥಕ್ಕನೆ ನಮ್ಮ ನಿದ್ದೆಯ ಮತ್ತು ಇಳಿದು ಹೋಯಿತು. ದೊಡ್ಡದೊಂದು ಬೆಳ್ಳಗಿನ ಆನೆ ರೈತನ ಕೋಣೆಯೊಳಗೆ ಸೇರಿತ್ತು. ಹೇಗೆ ಬಂತೋ ದೇವರೇ ಬಲ್ಲ. ಮಲಗಿದ ಹಾಗೇ ಇರುವ ರೈತನನ್ನು ನೋಡಿ ಸತ್ತನೇನೋ ಅಂದುಕೊಂಡೆವು. ಪಕ್ಕದಲ್ಲಿ ಕಬ್ಬಿನ ಜಲ್ಲೆಗಳನ್ನು ಸೊಂಡಿಲಿನಿಂದೆತ್ತಿ ಬಾಯಿಯೊಳಗೆ ಹಾಕಿ ಜಗಿದು ರಸ ಕುಡಿಯುವ ಆನೆಯ ಶಬ್ದಕ್ಕೆ ಅವನಿಗೆ ಎಚ್ಚರವೇ ಆಗಿಲ್ಲ! ಕಬ್ಬೆಲ್ಲಾ ಹಿಪ್ಪೆಯ ಪರ್ವತವಾಗುವುದನ್ನು ನೋಡಿ ಹೆದರಿ ನಾವು ದೂರ ಓಡಿದೆವು" ಎಂದು ಹೇಳಿದರು.

ಮುಚ್ಚಿದ ಕೋಣೆಯೊಳಗೆ ಆನೆ ನುಳಿಯುವುದೆಂದರೇನು? ಜಮೀನ್ದಾರನಲ್ಲಿ ದೊಡ್ಡದೊಂದು ಪರಿವರ್ತನೆಯುಂಟಾಗುತ್ತ .ರೋಮಾಂಚಿತನಾದನು. ಅವನು ಭಾವಪರವಶತೆಯಲ್ಲಿ ನಡುಗುತ್ತ ಕೋಣೆಯೊಳಗೆ ಹೋಗಿ, ರೈತನ ಪಾದಗಳನ್ನು ಹಿಡಿಯು ವವನಂತೆ ಬಿದ್ದನು.

ಆಗ ರೈತನು ಕನಸಿನ ಲೋಕದಿಂದ ಇಳಿದವನಂತೆ ಎದ್ದುನಿಂತನು. ಜಮೀನ್ದಾರನು ಅವನ ಪಾದಗಳ ಮೇಲೆ ತಲೆಯನ್ನು ತಿಕ್ಕುತ್ತ, ಕಣ್ಣೀರಿನಿಂದ ತೊಳೆಯುತ್ತಿರಲು, ಆತನ ಹೆಂಡತಿ ಅಲ್ಲಿದ್ದ



ವಿಘ್ನೇಶ್ವರನ ಮುಂದೆ ಅಡ್ಡಬಿದ್ದು "ದೇವಾ, ಇಷ್ಟು ದಿನಗಳ ಮೇಲೆ ನಮ್ಮನ್ನು ಅನುಗ್ರಹಿಸಿದೆಯಾ! ನಾವೆಲ್ಲಾ ಧನ್ಯರಾದೆವು ಸ್ವಾಮಿ!" ಎಂದು ಪ್ರಾರ್ಥಿಸಿಕೊಂಡಳು. ಆಮೇಲೆ ರೈತನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಅವಳೇ ಹೇಳಿದಳು.

ಈ ಮಹಾ ಅದ್ಭುತದ ಸಮಾಚಾರವು ಕ್ಷಣ ಮಾತ್ರದಲ್ಲಿ ಊರೊಳಗೆಲ್ಲಾ ಹರಡಿತು. ಜನರು ತಂಡೋಪತಂಡವಾಗಿ ಜಮೀನ್ದಾರನ ಮನೆಗೆ ಬರ ತೊಡಗಿದರು. ಕಬ್ಬಿನ ಕೋಣೆಯಲ್ಲಿದ್ದ ಆನೆಯ ಪಾದ ಬಿದ್ದ ಗುಳಿಗಳಲ್ಲಿ ಸೇರಿದ್ದ ಕಬ್ಬಿನ ರಸವನ್ನು ತೀರ್ಥದಂತೆ ಸೇವಿಸಿದರು. ಕಬ್ಬಿನ ಸಿಪ್ಪೆಯನ್ನು ವಿಘ್ನೇಶ್ವರನ ಮಹಾ ಪ್ರಸಾದವೆಂದುಕೊಂಡು ಒಯ್ದು ತಲೆಯಲ್ಲಿ ಧರಿಸಿಕೊಂಡರು.

ರೈತನು ಹೆಂಡತಿಯೊಂದಿಗೂ, ಮಗನೊಂದಿಗೂ ವಿನಾಯಕ ವಿಗ್ರಹಕ್ಕೇ ನಮಸ್ಕಾರ ಮಾಡುತ್ತ, "ನಾನೊಬ್ಬ ಶುಂಠ. ಸಣ್ಣದೊಂದು ಪತ್ರದ ಚೂರೂ ನಿನ್ನಮೇಲೆ ಹಾಕಿ ಪೂಜಿಸಲಿಲ್ಲ. ನಿನಗಾಗಿ ಕಳುಹಿಸಿದ ಕಬ್ಬು ನಿನಗೆ ನೈವೇದ್ಯಮಾಡಲೂ ಇಲ್ಲ. ನನ್ನಂಥ ಅಲ್ಪದವನಿಗಾಗಿ ಇಷ್ಟು ಶ್ರಮಪಡುವ ಅಗತ್ಯವೇನು ಬಂತು ಸ್ವಾಮಿ? ಆನೆಯ ರೂಪದಲ್ಲಿ ಎಲ್ಲರಿಗೂ ದರ್ಶನ ಕೊಟ್ಟ ನೀನು ನನಗೆ ಕಾಣಲೇ ಇಲ್ಲ. ನಿದ್ದೆಯಲ್ಲಿ ಮುಳುಗಿದ ದುರ್ಭಾಗ್ಯದ ಪೆದ್ದಪ್ಪ ನಾನು!" ಎಂದು ಸಣ್ಣ ಹುಡುಗನ ಹಾಗೆ ಕಣ್ಣೀರು ಸುರಿಸಿಕೊಂಡನು.

ಆಗ ವಿಗ್ರಹದ ಸ್ಥಾನದಲ್ಲಿ ಕಬ್ಬಿನ ಜಲ್ಲೆಯನ್ನು ಹಿಡಿದುಕೊಂಡು ವಿಘ್ನೇಶ್ವರನು ಆ ರೈತನ ಮುಂದೆ ಪ್ರತ್ಯಕ್ಷನಾದನು. ರೈತನ ಮಗನು ಎತ್ತಿಕೊಂಡು ಹೋದ ಕಬ್ಬಿನ ಕೋಲೇ ಅವನ ಕೈಯಲ್ಲಿದ್ದಿತು.

ವಿಘ್ನೇಶ್ವರನು ತನ್ನ ಸೊಂಡಿಲಿನಿಂದ ರೈತನನ್ನು ಹತ್ತಿರಕ್ಕೆ ಎಳೆದುಕೊಂಡು. "ಅಪ್ಪಾ, ಅಳಬೇಡ. ಉಳಿದವರಿಗೆ ಆನೆಯಾಗಿ ಕಂಡ ನಾನು ನಿನಗೆ ಆನೆಯ ಮುಖದ ಗುಂಡೋದರನಾಗಿ ಕಾಣಿಸುತ್ತೇನೆ. ಈ ನಿಮ್ಮ ಜಾತಿ ಕುಲ ಗೋತ್ರ ಆಚಾರಗಳನ್ನೆಲ್ಲಾ ನಾನು ಕಲ್ಪಿಸಿದವನಲ್ಲ. ಎಲ್ಲಾ ಮನುಷ್ಯರೇ ಕಲ್ಪಿಸಿಕೊಂಡು ತಾರತಮ್ಯವಿಟ್ಟಿದ್ದಾರೆ. ನನ್ನ ಹತ್ತಿರ ಆ ಹೆಚ್ಚು ಕಡಿಮೆಗಳ ತಾರತಮ್ಯಗಳಿಗೆ ಸ್ಥಾನವಿಲ್ಲ. ನಾನು ನಿಮಗೆಲ್ಲರಿಗೂ ಸೇರಿದವನೇ" ಎಂದು ಹೇಳಿ ಅಂತರ್ಧಾನನಾದನು.

ಅಲ್ಲಿ ಕೂಡಿದ ಜನರೆಲ್ಲಾ ಕೈಗಳನ್ನೆತ್ತಿ ಜೋಡಿಸಿ ಆ ರೈತನಿಗೆ ನಮಸ್ಕರಿಸುತ್ತ "ಆಹಾ ನೀನು ರೈತನಲ್ಲಾ! ಗಣಪತಿಯಮೂರ್ತಿ! ನಿನ್ನಲ್ಲೇ ನಾವೆಲ್ಲಾ ಮಹಾ ಗಣಪತಿಯನ್ನು ಕಂಡೆವು!" ಎಂದು ಪದೇ ಪದೇ ವಂದಿಸಿದರು. ಜಮೀನ್ದಾರನಂತೂ ರೈತನಿಗೆ ಬ್ರಹ್ಮರಥವನ್ನೇ ಹಿಡಿದನು. ಅವನ ಜಂಬ ದರ್ಪಗಳೆಲ್ಲಾ ಪೂರ್ತಿ ಹಾರಿ ಹೋದುವು.

ಹೀಗೆ ಕಥೆಯನ್ನು ಮುಗಿಸುತ್ತ ಬಾವನ ಮಿಶ್ರನು "ಇಕ್ಷು ಅಂದರೆ ಕಬ್ಬು. ಸಾವಿರ ಕಬ್ಬುಗಳ ಗಣಪತಿ



ಏಂಟಂತೆ ಸಹಸ್ರೇಕ್ಷು ಗಣಪತಿ ಎಂದು ಪ್ರಸಿದ್ಧನಾದ ಗಣಪತಿಯ ಈ ಕಥೆಯನ್ನು ಕೇಳಿದಿರಿ. ಆ ಜಾಗದಲ್ಲಿ ಕಬ್ಬಿನ ಜಲ್ಲೆಯನ್ನು ಹಿಡಿದ ಗಣಪತಿಯ ವಿಗ್ರಹವು ಪ್ರತಿಷ್ಠಿತವಾಗಿ. ದೊಡ್ಡ ದೇವಾಲಯವು ಎದ್ದಿತು" ಎಂದು ಮುಗಿಸಿದನು.

ಆಲಯ ಮಂಟಪದೊಳಗಿನ ಚಿತ್ರಗಳ ಕಥೆಗಳನ್ನು ಪಾವನ ಮಿಶ್ರನು ಹೇಳುತ್ತಿದ್ದನೇ ಹೊರತು, ಮುಖ ದ್ವಾರದ ಹತ್ತಿರ ಚಿತ್ರಿಸಲ್ಪಟ್ಟ ಚಿತ್ರವು ಮಾತ್ರ ಹಾಗೆಯೇ ಉಳಿದುಹೋಯಿತು. ಅದು ಬಹಳ ದೊಡ್ಡ ಚಿತ್ರವಾಗಿತ್ತು. ಚಿತ್ರಲೇಖನ ಪ್ರತಿಭೆಗಳೆಲ್ಲಾ ಅದರಲ್ಲಿ ಅಡಕವಾಗಿತ್ತು. ಒಬ್ಬ ಯುವಕನು ಪ್ರತಿ ದಿನವೂ ಆ ಚಿತ್ರದ ಮುಂದೆ ಬಹಳ ಹೊತ್ತಿನವರೆಗೆ ತದೇಕ ಚಿತ್ತನಾಗಿ ನೋಡುವನು. ಕಡೆಗೆ ಒಂದು ದಿನ ಅವನು ಪಾವನ ಮಿಶ್ರನ ಪಾದಗಳಿಗೆ ಮಣಿದು, "ಮಹಾಶಯಾ, ಈ ಆಲಯ ಮಂಟಪದ ಚಿತ್ರಗಳನ್ನು ಚಿತ್ರಿಸಿದವರು ಯಾರೆಂದು ಗೊತ್ತಿದೆಯೆ? ಆ ಮಹಾಶಿಲ್ಪಿ ಚಿತ್ರಕಾರನ ಚರಿತ್ರೆ ತಿಳಿಯಬೇಕೆಂದು ಬಹಳ ಆಸೆಯಾಗಿದೆ. ಆ ಮುಖದ್ವಾರದಲ್ಲಿರುವ ಚಿತ್ರ ನೋಡುತ್ತಿದ್ದರೆ, ನನ್ನ ಕಣ್ಮನಗಳೆರಡೂ ಅಲ್ಲೇ ಸಿಕ್ಕಿಕೊಳ್ಳುತ್ತವೆ. ಅದರ ವಿವರಗಳೇನೋ ಗೊತ್ತಾಗಲಿಲ್ಲ. ಆ ಚಿತ್ರದ ಕಥಾ ವಿವರಗಳನ್ನು ತಿಳಿಸಿ ಈ ಚಿತ್ರ ಚರಿತ್ರೆಯನ್ನು ಸಂಪೂರ್ಣ ಮಾಡುವಿರಾ?" ಎಂದು ಕೇಳಿಕೊಂಡನು.

ಪಾವನ ಮಿಶ್ರನು ಆ ಯುವಕನನ್ನು ಸಾದರ ನಯನಗಳಿಂದ ನೋಡಿ, "ಅಪ್ಪಾ, ನಿನ್ನನ್ನು ನೋಡಿದರೆ ಚಿತ್ರಕಾರನ ಹಾಗೆಯೇ ಕಾಣುವಿ. ಮುಖದ್ವಾರದಲ್ಲಿರುವ ಚಿತ್ರವು ನನಗೂ ಅಭಿಮಾನವುಳ್ಳದ್ದಾಗಿದೆ. ಅದರ ವಿವರಗಳನ್ನು ಆಮೇಲೆ ಹೇಳಿ ವಿಘ್ನೇಶ್ವರ ಚರಿತ್ರೆಯನ್ನು ಮುಗಿಸುತ್ತೇನೆ. ನೀನು ಕೇಳಿದ ಚಿತ್ರಶಿಲ್ಪಿಗೆ ಒಳ್ಳೆಯ ಚರಿತ್ರೆ ಇರುವುದು ನಿಜವೇ. ನಿನಗೂ ಅದನ್ನು ಕೇಳುವ ಕುತೂಹಲ ತುಂಬಾ ಇರುವಂತೆ ಕಾಣುತ್ತದೆ. ಕೇಳಪ್ಪ" ಎಂದು ಕಣ್ಣುಗಳನ್ನು ಮುಚ್ಚಿ ಏನನ್ನೋ ನೆನೆಸಿಕೊಂಡು, ಸ್ವಲ್ಪ ಹೊತ್ತಿನ ಮೇಲೆ ಹೇಳಲು ತೊಡಗಿದನು:

ಒಂದು ಸಾರಿ ವಾತಾಪಿನಗರಕ್ಕೆ ಸಾಧುಗಳ ಗುಂಪೊಂದು ಬಂದಿತು. ಅವರೊಳಗೆ ಹದಿನಾಲ್ಕು ವಯಸ್ಸಿನ ಬಾಲಕನೊಬ್ಬನೂ ಇದ್ದನು. ಸಾಧುಗಳೆಲ್ಲ ಇಲ್ಲಿನ ಸೇವೆ ಮುಗಿಸಿ ಮುಂದೆ ಹೊರಟುಹೋದರೂ ಆ ಬಾಲಕನು ಮಾತ್ರ ವಾತಾಪಿ ಗಣಪತಿಯ ಆಲಯವನ್ನು ಬಿಡದೆ ಅಲ್ಲಿಯೇ ಇದ್ದನು. ಅವನು ಅಲ್ಲಿಂದ ಹೊರಟು ಹೋಗುವವನಂತೆ ಕಾಣಲಿಲ್ಲ.

ಅವನ ಊರಾವುದು, ಹೆಸರೇನು ಎಂಬುದು ಅವನಿಗೇ ತಿಳಿಯದು. ಅವನ ನೊಸಲಿನಲ್ಲಿ ದೊಡ್ಡದೊಂದು ಗಾಯವು ಮಾಸಿ ಹೋದ ಗುರುತಿದ್ದಿತು. ಅದನ್ನು ನೋಡಿದವರು ಎಲ್ಲೋ ಬಿದ್ದು ಸ್ಮೃತಿ ತಪ್ಪಿ ಹೋದವನಿರಬೇಕೆಂದು ಎಲ್ಲರೂ ಅಂದು



ಕೊಂಡರು. ಆ ಬಾಲನು ಮೂಗನಲ್ಲವೆಂಬಷ್ಟೆ ಬಹಳ ಸ್ವಲ್ಪ ಮಾತಾಡುತ್ತಿದ್ದನು. ಕುಳಿತಲ್ಲಿ ನೆಲದ ಮೇಲೆ, ಗೋಡೆಗಳ ಮೇಲೆ ಚಿತ್ರಗಳನ್ನು ಬರೆಯುತ್ತಿದ್ದನು. ಚಿತ್ರ ಬರೆಯುವಾಗ ಅವನ ಮುಖವು ಪೂರ್ಣ ಚಂದ್ರನ ಬಿಂಬದಂತೆ ಬೆಳಗುತ್ತ, ಮುಗುಳು ನಗು ಲಾಸ್ಯವಾಡುತ್ತಿತ್ತು. ಆದುದರಿಂದ, ಅವನನ್ನು ಚಿತ್ರಾನಂದ ಎಂದರು. ಇನ್ನು ಕೆಲವರು ಚಿತ್ರ ಮುಖನೆಂದರು, ಅವನು ಹೆಚ್ಚಾಗಿ ವಿಘ್ನೇಶ್ವರನ ಚಿತ್ರಗಳನ್ನೇ ಬರೆಯುವುದರಿಂದ ವಿಘ್ನೇಶ್ವರ ಚಿತ್ರಕಾರ ಎಂಬ ಹೆಸರನ್ನು ಲುಪ್ತಾಕ್ಷರಿಯಾಗಿ ಮಾಡಿ, ವಿಚಿತ್ರನೆಂದು ಅನೇಕರು ಅವನನ್ನು ಸಂಬೋಧಿಸಿದರು. ಕಡೆಗೆ ವಿಚಿತ್ರನೆಂಬ ಹೆಸರೇ ನೆಲೆಯಾಯಿತು.

ಆ ಹೊತ್ತಿಗೆ ಗಜಾನನ ಪಂಡಿತನು ಬಹಳ ವೃದ್ಧನಾಗಿದ್ದನು. ಪ್ರತಿ ದಿನ ಸಾಯಂಕಾಲ ಮನೆಯ ಹತ್ತಿರವೇ ಹುಡುಗರಿಗೆ ವಿಘ್ನೇಶ್ವರನ ಕಥೆಗಳನ್ನು ಹೇಳುತ್ತಿದ್ದನು. ವಿಚಿತ್ರನು ಆ ಕಥೆಗಳನ್ನು ಆತ್ಮಾಸಕ್ತಿಯಿಂದ ಕೇಳುತ್ತಿದ್ದನು. ಕಥೆ ಕೇಳಿದ ಮರುದಿನ ಆ ಕಥೆಗೆ ಸಂಬಂಧಿಸಿದ ಚಿತ್ರಗಳನ್ನು ಯಾವುದಾದರೂ ಗೋಡೆಯಲ್ಲಿ ಬರೆಯುತ್ತಿದ್ದನು. ಆಗ ಅವನಿಗೆ ಬಹಳ ಉತ್ಸಾಹವೆನಿಸಿ ಹೊತ್ತು ಹೋಗುವುದೇ ತಿಳಿಯದು.

ಗಜಾನನ ಪಂಡಿತನಿಗೆ ವಿಚಿತ್ರನ ಮೇಲೆ ಅತ್ಯಂತ ವಾತ್ಸಲ್ಯವುಂಟಾಗಿತ್ತು. ಮನೆಯೊಳಗೆ ಬಾರೆಂದು ಕರೆದರೆ ವಿಚಿತ್ರನು ಮುಂಬಾಗಿಲಿನ ಹೊಸ್ತಿಲಿನ ಹೊರಗೇ ಕುಳಿತುಕೊಂಡು ಕಥೆಯನ್ನು ಕೇಳುವನು. "ಸ್ವಾಮೀ, ಇಲ್ಲಿ ಕುಳಿತುಕೊಂಡು ಕೇಳುವಾಗ ನೀವು ನನಗೊಬ್ಬನಿಗೇ ಬಹಳ ಚೆನ್ನಾಗಿ ಕಥೆ ಹೇಳುವಂತೆ ಕೇಳಿಸುತ್ತದೆ" ಎನ್ನುವನು ವಿಚಿತ್ರ. ಕಥೆಗಳಿಗೆ ಅವನು ಚಿತ್ರಿಸಿದ ವಿಘ್ನೇಶ್ವರನ ಚಿತ್ರಗಳನ್ನು ನೋಡಿ ಗಜಾನನ ಪಂಡಿತನು ಮುಗ್ಧನಾಗಿ, ವಿಘ್ನೇಶ್ವರನ ಸಂಬಂಧವಾದ ಅನೇಕ ಕಥೆಗಳನ್ನು ಪ್ರತ್ಯೇಕವಾಗಿ ಅವನಿಗೆ ಹೇಳುತ್ತಿದ್ದನು.

ವಿಚಿತ್ರನ ಹಿಂದೆ ಯಾವಾಗಲೂ ಕೆಲವರು ಅವನಂತಹ ಹುಡುಗರು ಗುಂಪಾಗಿರುತ್ತಿದ್ದರು. ಅವನು ಚಿತ್ರಗಳನ್ನು ಬರೆಯುವಾಗ ನಿಶ್ಶಬ್ದವಾಗಿ ನೋಡಿ ಆನಂದಿಸುತ್ತ, ಆಮೇಲೆ ಅವರು ಕೂಡಾ ಚಿಕ್ಕ ಚಿಕ್ಕ ಚಿತ್ರಗಳನ್ನು ಬರೆಯುವರು. ಹೀಗೆ ಚಿತ್ರಕಲೆ ಚಟದಂತೆ ಊರೊಳಗಿನ ಹುಡುಗರಿಗೆ ಕೂಡ ಅಂಟಿಕೊಂಡಿತು.

ವಿಚಿತ್ರನು ಹಗಲು ಊರೊಳಗೆ ತಿರುಗುವಾಗ ಬೀದಿಗಳ ಗೋಡೆಗಳ ಮೇಲೆ, ಕಂದು ಮಣ್ಣಿನ ಗೆಡ್ಡೆಯಿಂದಲೋ, ಜೇಡಿ ಮಣ್ಣಿನಿಂದಲೋ ಚಿತ್ರಗಳನ್ನು ಬರೆಯುತ್ತ, ವಾತಾಪಿಗಣಪತಿ ಆಲಯದಲ್ಲಿ ಹಂಚಿಕೊಡುವ ಪ್ರಸಾದದಿಂದಲೇ ದಿನಗಳೆಯುತ್ತಿದ್ದನು. ರಾತ್ರಿ ಆಲಯ ಮಂಟಪದ ಮೆಟ್ಟಿಲಿನ ಮೇಲೋ, ಊರಹೊರಗಿನ ಯಾವ ಮನೆಯ ಜಗಲಿಯ ಬದಿಯಲ್ಲಿಯೋ ಮಲಗಿ ನಿದ್ರಿಸುವನು.

ಊರ ಹೊರಗೆ ಅವನು ಮಲಗುವುದು ಕುಂಬಾರ ಕೇರಿಯಾಗಿತ್ತು. ಅದರ ಹತ್ತಿರವೇ ಚರ್ಮಕಾರರೂ ಇದ್ದರು. ಅವರಿಗೆಲ್ಲಾ ವಿಚಿತ್ರನ ಮೇಲೆ ಬಲು ಪ್ರೀತಿ. ಯಾವ ಅಪರಾತ್ರಿಯ ಹೊತ್ತಿನಲ್ಲಿ ವಿಚಿತ್ರನು ಬಂದರೂ, ಅವನಿಗಾಗಿ ತೆಗೆದಿಟ್ಟ ತಿಂಡಿಯನ್ನು ಪ್ರೀತಿಯಿಂದ ಕೊಟ್ಟು ತಿನ್ನಿಸುವರು. ಮಲಗಲು ಅವನಿಗೆ ಚಾಪೆ ಹಾಸು ವಸ್ತ್ರಗಳನ್ನು ಕೂಡಾ ಕೊಡುವರು. ಹೀಗೆ ಅವನು ಕೇರಿಗಾರರೆಲ್ಲರಿಗೂ ಮಗನಂತಾದನು. ಈ ರೀತಿಯಾಗಿ ವಿಚಿತ್ರನು ಬೆಳೆದು ದೊಡ್ಡವನಾದನು.

ತಾನು ಯಾರೆಂಬುದನ್ನು ಅರಿಯದೆ ಮರೆತು ಹೋದ ವಿಚಿತ್ರನಿಗೆ ನಿಜಕ್ಕೂ ತಾಯಿ ತಂದೆ ಅಣ್ಣಂದಿರೂ ಇದ್ದರು. ಅವನು ಅವರನ್ನೆಲ್ಲ ಹೇಗೆ ಅಗಲಿದನೆಂದರೆ.



ವಾತಾಪಿನಗರಕ್ಕೆ ಸ್ವಲ್ಪ ದೂರದಲ್ಲಿರುವ ಒಂದು ಊರಿನಲ್ಲಿರುವ ಮಧ್ಯಮ ತರಗತಿಯ ಕುಟುಂಬದಲ್ಲಿ ವಿಚಿತ್ರನು ಹುಟ್ಟಿದ್ದನು. ತಂದೆಯ ಮೂಲಕವಾಗಿಯೇ ಅವನಿಗೆ ಚಿಕ್ಕಂದಿನಲ್ಲೇ ಚಿತ್ರ ಗೀಚುವ ಅಭ್ಯಾಸ ಅಂಟಿತ್ತು. ಅವನ ತಂದೆ ಮಣ್ಣಿನ ಬೊಂಬೆಗಳನ್ನು ಮಾಡಿ ಮಾರುವವನಾಗಿದ್ದನು. ಆದರೆ ತನ್ನ ಮಕ್ಕಳು ಬೇರೆ ವೃತ್ತಿಯಿಂದ ಬೆಳಗಬೇಕೆಂದು ತಂದೆಯ ಆಸೆ, ಅದಕ್ಕಾಗಿ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ತೊಡಗಿಸಿದ್ದನು, ವಿಚಿತ್ರನಿಗೆ ಚಿತ್ರ ಬರೆಯುವುದರಲ್ಲಿರುವ ಆಸಕ್ತಿ ಬೇರೆ ವಿದ್ಯೆಗಳ ಮೇಲೆ ಇರಲಿಲ್ಲ, ಅದರಿಂದ ಅವನ ಅಣ್ಣಂದಿರೂ ಅತ್ತಿಗೆಯರೂ ಅವನಿಗೆ ಛೀಮಾರಿ ಹಾಕಿ ಮನೆಯಿಂದ ಓಡಿಸಿ ಬಿಟ್ಟರು, ಆ ಹುಡುಗನಿಗೆ ವಿಘ್ನೇಶ್ವರನ ಮೇಲೆ ಬಹಳ ಇಷ್ಟ. ವಾತಾಪಿ ವಿಘ್ನೇಶ್ವರನ ಮಹಿಮೆಗಳನ್ನು ಎಷ್ಟೋ ಕೇಳಿದ್ದನು. ಅಂತಲೇ ಅಲ್ಲಿಗೆ ಹೊರಟು ಬರುತ್ತ. ದಾರಿಯಲ್ಲಿ ತಿಂಡಿ ತೀರ್ಥಗಳೇನೂ ಸಿಗದೆ, ಆಯಾಸ ಬಂದ ಮಾರ್ಗ ಮಧ್ಯದ ಒಂದು ದೊರಗು ಕಲ್ಲಿನ ಮೇಲೆ ಬಿದ್ದುಕೊಂಡಿದ್ದನು. ಬಿದ್ದ ಪೆಟ್ಟಿನಿಂದ ಗಾಯಗೊಂಡು ಮೂರ್ಛಿತನಾದವನನ್ನು ಸಾಧುಗಳ ಗುಂಪು ಕಾಪಾಡಿ, ವಾತಾಪಿನಗರಕ್ಕೆ ಕರೆ ತಂದು ಬಿಟ್ಟಿತ್ತು. ಇದು ವಿಚಿತ್ರನ ಬಾಲ್ಯ ಚರಿತ್ರೆ.

ಆಮೇಲೆ ಏನಾಯಿತೆಂದರೆ, ಆ ವರ್ಷದ ವಿನಾಯಕ ಚತುರ್ಥಿ ಸಮೀಪಿಸುತ್ತಿತ್ತು. ಆ ಉತ್ಸವಕ್ಕೆ ಒಂದು ವಿಶೇಷ ಪ್ರದರ್ಶನದ ಏರ್ಪಾಡು ನಡೆಯ ತೊಡಗಿತು.

ಆಳೆತ್ತರದ ವಿನಾಯಕ ವಿಗ್ರಹಗಳನ್ನು ಚಿತ್ರಕಳಾ ಪ್ರತಿಭೆಯನ್ನು ತೋರಿಸುವಂತೆ ಬಣ್ಣಗಳನ್ನು ಹಾಕಿ ಪ್ರದರ್ಶನದಲ್ಲಿ ಇರಿಸುವಂತಹ ಹೊಸ ಏರ್ಪಾಡು ಅದು. ಎಲ್ಲಕ್ಕಿಂತಲೂ ಉತ್ತಮವಾಗಿ ತೋರುವ ವಿಗ್ರಹಕ್ಕೆ ಸಾವಿರ ಚಿನ್ನದ ನಾಣ್ಯಗಳನ್ನು ಕೊಟ್ಟು, ನವರಾತ್ರಿಯ ಉತ್ಸವವನ್ನು ನಿರ್ವಹಿಸುವವರು ಕೊಂಡುಕೊಳ್ಳುತ್ತಾರೆ. ರತ್ನಖಚಿತವಾದ ಸ್ವರ್ಣ ಕಂಕಣಗಳನ್ನು ನಗರಪಾಲಕರು ಆ ಚಿತ್ರಕಾರನಿಗೆ ಬಹುಮಾನ ಕೊಡುತ್ತಾರೆ. ಆದುದರಿಂದ ಚಿತ್ರ



ಶಿಲ್ಪಿಗಳಿಗೆಲ್ಲಾ ಉತ್ತೇಜನಕಾರಿಯಾಗಿ, ಅದೊಂದು ಸ್ಪರ್ಧೆಯ ಪ್ರದರ್ಶನವೇ ಆಯಿತು.

ಇಂತಹ ವಿಶೇಷ ಪ್ರದರ್ಶನಕ್ಕಾಗಿ ಆಸ್ಥಾನದ ಚಿತ್ರಕಾರರೂ, ದೊಡ್ಡ ದೊಡ್ಡ ಚಿತ್ರಕಲಾ ನಿಪುಣರೂ ತುಂಬಾ ಹಣವನ್ನು ವೆಚ್ಚ ಮಾಡಿ ದೇಶಾಂತರಗಳಿಂದ ತರಿಸಿದ ಬಣ್ಣಗಳಿಂದ, ಬಂಗಾರದ ಲೇಪನಗಳಿಂದ. ಹೊಳೆಯುವ ವರ್ಣರೇಖೆಗಳಿಂದ, ಬಣ್ಣದ ಕಲ್ಲುಗಳನ್ನು ಕೂಡಾ ಉಪಯೋಗಿಸಿ, ಒಂದಕ್ಕಿಂತ ಒಂದು ಅದ್ಭುತವೆನಿಸುವ ವಿಘ್ನೇಶ್ವರನ ವಿಗ್ರಹಗಳನ್ನು ಮಾಡಿ, ಪ್ರದರ್ಶನದಲ್ಲಿ ಇರಿಸಿದ್ದರು.

ವಿಚಿತ್ರನಿಗೆ ಒಬ್ಬ ಕುಂಬಾರ ಮಿತ್ರನಿದ್ದ. ವಿಚಿತ್ರನು ಹತ್ತಿರವಿದ್ದು ಹೇಳಿದ ವಿಧವಾಗಿ ಅವನು ಆವೆ ಮಣ್ಣಿನಿಂದ ವಿಘ್ನೇಶ್ವರ ವಿಗ್ರಹವನ್ನು ಮಾಡಿದನು. ವಿಚಿತ್ರನು ಸುಣ್ಣ, ಮಸಿ, ಕಂದು ಮಣ್ಣು, ಹಳದಿ ಮಣ್ಣು, ಕೆಮ್ಮಣ್ಣುಗಳಿಂದ, ಹಸಿರೆಲೆಗಳ ರಸಗಳಿಂದ ವಿಗ್ರಹಕ್ಕೆ ಬಣ್ಣ ತೀಡಿದನು.

ವಿಚಿತ್ರನು ಮಾಡಿದ ಈ ಬಣ್ಣದ ಗಣಪತಿಯನ್ನು, ಚಿತ್ರಕಾರ ಪ್ರಮುಖರ ಪ್ರದರ್ಶನದಲ್ಲಿ ಇರಿಸಲು ನೋಡಿದಾಗ ಯಾರೂ ಅದಕ್ಕೆ ಎಡೆ ಕೊಡಲಿಲ್ಲ.

ವಿಚಿತ್ರನು ಪ್ರದರ್ಶನ ನಿರ್ವಾಹಕರೊಂದಿಗೆ, "ಅಯ್ಯಾ, ದಯವಿಟ್ಟು ಕಟ್ಟಕಡೆಯ ಒಂದು ಮೂಲೆಯಲ್ಲಾದರೂ ನನ್ನ ವಿಗ್ರಹವನ್ನು ಇರಿಸಿರಿ ಸ್ವಾಮಿ. ಅಳಿಲು ಭಕ್ತಿಯಂತೆ ನಾನು ಕೂಡಾ ನನ್ನ ಶಕ್ತಿಗೆ ಸಾಧ್ಯವಾದ ಹಾಗೆ ವಿಘ್ನೇಶ್ವರನಿಗೆ ಬಣ್ಣ ಹಾಕಿದೆನೆಂದುಕೊಳ್ಳುತ್ತ, ಆ ದೊಡ್ಡ ದೊಡ್ಡ ವಿಘ್ನೇಶ್ವರರ ಸಾಲಿನಲ್ಲಿ ನನ್ನ ವಿಘ್ನೇಶ್ವರನು ಕೂಡಾ ಇದ್ದರೆ ನೋಡಬೇಕೆಂದು ಒಂದು ಆಶೆಯಷ್ಟೇ ನನಗೆ. ಬೇರೆ ಕೋರಿಕೆಯಾವುದೂ ನನಗಿಲ್ಲವಯ್ಯಾ" ಎಂದು ದೀನನಾಗಿ ಪ್ರಾರ್ಥಿಸಿಕೊಂಡನು.

"ಸಾಧ್ಯವಿಲ್ಲಪ್ಪ, ಕುಲಗೋತ್ರ, ಊರು ಹೆಸರು ಇಲ್ಲದವನ ಕೈಯಿಂದಾದ ಬೊಂಬೆಗಳನ್ನು, ವಂಶ ಪ್ರತಿಷ್ಠೆಯುಳ್ಳವರ ವಿಗ್ರಹಗಳ ಜತೆಯಲ್ಲಿಡುವುದು ಸರಿಯಲ್ಲ. ಪ್ರಖ್ಯಾತ ಚಿತ್ರಕಾರರ, ಶಿಲ್ಪಿಗಳ ಸಾಲಿಗೆ ಸೇರಲು ತಕ್ಕ ಅರ್ಹತೆ ನಿನಗಿಲ್ಲ" ಎಂದು ಒತ್ತಿ ಹೇಳಿಬಿಟ್ಟರು. ನಿರ್ವಾಹಕರು ವಿಚಿತ್ರನಿಗೆ ನಿರಾಶೆಯಿಂದ ಅಳುವೇ ಬಂದಿತು.

ಆಗ ಅವನ ಕುಂಬಾರಮಿತ್ರನು, "ಹೋಗಲಿ ಬಿಡು. ಪ್ರದರ್ಶನ ಮಂದಿರದೊಳಗೆ ಇಡಲಾಗದಿದ್ದರೆ ಬೇಡ. ನಾವು ಈ ವಿಗ್ರಹವನ್ನು ಬೇರೊಂದು ಕಡೆಯಲ್ಲಿ ಇಡೋಣ, ನಡೆ" ಎಂದು ವಿಚಿತ್ರನಿಗೆ ಸಮಾಧಾನ ಹೇಳಿ, ಪ್ರದರ್ಶನ ಮಂದಿರದ ಪಕ್ಕದಲ್ಲಿದ್ದ, ಒಂದು ಬಾಳೇ ಮರದ ಅಡಿಯಲ್ಲಿ ಆ ವಿಗ್ರಹವನ್ನು ಇರಿಸಿದನು. ವಿಚಿತ್ರನೂ ಅವನ ಮಿತ್ರನೂ ಅಲ್ಲಿಯೇ ಕುಳಿತರು.

ಜನರು ಪ್ರದರ್ಶನ ಮಂದಿರದಲ್ಲಿರುವ ದೊಡ್ಡವರ ವಿಗ್ರಹಗಳನ್ನು ನೋಡುತ್ತ, ಗುಂಪು ಗುಂಪಾಗಿ

ಸೇರಿ, ವಿಗ್ರಹಗಳಿಗೆ ಉಪಯೋಗಿಸಲ್ಪಟ್ಟ ಬಣ್ಣಗಳ ಬೆಲೆಯನ್ನು ಕುರಿತೂ, ಚಿತ್ರಕಾರರ ವಂಶಗೌರವ, ಪದವಿಗಳನ್ನು ಕುರಿತೂ ವ್ಯಾಖ್ಯಾನಿಸಿಕೊಂಡಿರುವಾಗ, ಬಾಲಬಾಲೆಯರೆಲ್ಲಾ ವಿಚಿತ್ರನ ಸುತ್ತಲೂ ಸೇರಿ ಹರ್ಷಧ್ವಾನಮಾಡುತ್ತ ಆಸಕ್ತಿಯಿಂದ ಅವನು ತಯಾರಿಸಿದ ವಿಗ್ರಹವನ್ನು ನೋಡುತ್ತಿದ್ದರು.

ಆ ಸಮಯದಲ್ಲಿ ಆಕಾಶದಿಂದ ಜಾರಿಬಿದ್ದ ಜಂಟಿ ಮಿಂಚುಗಳಂತೆ ಕಾಣುವ ಇಬ್ಬರು ತರುಣಿಯರು ಚಿತ್ರ ಶಿಲ್ಪಗಳ ಪ್ರದರ್ಶನ ಮಂದಿರದೊಳಗೆ ಪ್ರವೇಶಿಸಿದರು. , ಅವರ ಶರೀರದಲ್ಲಿ ರತ್ನಾಭರಣಗಳು ದೇದೀಪ್ಯಮಾನವಾಗಿ ಮರೆಯುತ್ತಿದ್ದುವು.

ಜನರು ಅವರನ್ನು ನೋಡಿ ಯಾವ ಲೋಕದ ವರಪ್ಪಾ ಎಂದು ಬೆರಗಾಗುತ್ತಿರಲು, ಅವರಲ್ಲಿ ಸ್ವಲ್ಪ ದೊಡ್ಡವಳಾದವಳು, "ನಮ್ಮದು ಕಲಾನಂದ ನಗರ. ನಮಗೆ ಹಿಡಿಸುವ ವಿನಾಯಕ ವಿಗ್ರಹವಿದ್ದರೆ ಕೊಂಡುಕೊಳ್ಳಬೇಕೆಂದು ಹತ್ತು ಸಾವಿರ ವರಹಗಳೊಂದಿಗೆ ತಿರುಗುತ್ತಿದ್ದೇವೆ" ಎನ್ನುತ್ತ ಬಂಗಾರದ ಎಳೆಗಳಿಂದ ಕೋದ ಜರತಾರೀ ಸಂಬಿಕೆಯನ್ನು ಗಲಗಲವಾಡಿಸಿದಳು. ಅದನ್ನು ನೋಡಿ, ಅಲ್ಲಲ್ಲಿದ್ದ ಕಲಾಕಾರರೆಲ್ಲಾ ಅವರವರ ಚಿತ್ರಶಿಲ್ಪಗಳ ಹತ್ತಿರ ಹೋಗಿ ನಿಂತರು.

"ನನ್ನ ಅಕ್ಕ ಪ್ರಸನ್ನವದನೆ ದೊಡ್ಡ ಗಾಯಕಮಣಿ ಮಾತ್ರವಲ್ಲದೆ, ಭಾರೀ ತಿಂಡಿಬಾಕಳು. ನೈವೇದ್ಯ ಪುಷ್ಟಿ ವಿಗ್ರಹಪುಷ್ಟಿಯಾದ ಮೇಲೆ ಹೊಟ್ಟೆಡೊಳ್ಳಾಗಿ ಬಂದಾಗ ಕೇಳಬೇಕು ಇವಳ ಹಾಡು. ಆಗ ತಿಳಿಯುತ್ತೆ ಗಾಯಕ ಸಿದ್ಧಾಂತಕ್ಕೆ ಇವಳ ತಾರ್ಕಾಣೆ ಹೇಗೆಂದು!" ಎನ್ನುತ್ತ ಸುಕುಮಾರಿಯಾಗಿ ಸಮ್ಮೋಹನಾಸ್ತ್ರದಂತಿದ್ದ ಚಿಕ್ಕವಳು ತನ್ನ ಕಾಲಿನ ಗೆಜ್ಜೆಗಳನ್ನು ಘಲುಘಲ್ಲಾಡಿಸಿಕೊಂಡು ನಲಿದಳು.

"ಈ ನನ್ನ ತಂಗಿ ಮೋಹನೆಯಷ್ಟು ವಾಚಾಳಿ ಇನ್ನೊಬ್ಬರಿಲ್ಲ. ಅದಕ್ಕಿಂತ ಹೆಚ್ಚು ನರ್ತನಾಮಣಿ. ನೋಡಲು ಸಣ್ಣವಳಾಗಿ ಕಾಣುತ್ತಾಳೆಯೇ ಹೊರತು ನನ್ನನ್ನೇ ಎತ್ತಿ ಗಿರಿಗಿರಿ ಸುತ್ತುತ್ತಾಳೆ ! ಅಷ್ಟು ದೊಡ್ಡ ಶಕ್ತಿ ಇವಳಿಗಿದೆ. ನೃತ್ಯದಲ್ಲಿ ಇವಳ ಚುರುಕುತನ ನೋಡಲು ಕಣ್ಣುಗಳ ವೇಗ ಸಾಲದಪ್ಪ !" ಎಂದಳು ಅಕ್ಕ ಪ್ರಸನ್ನವದನೆ.

"ನಮ್ಮಂದ ಹಾಡಿಸಲಿಕ್ಕೂ ಆಡಿಸಲಿಕ್ಕೂ ಆ ಇಂದ್ರನಿಗೂ, ಕುಬೇರನಿಗೂ ಸಾಧ್ಯವಲ್ಲ. ಆ ಬಗೆಯ ನಮ್ಮ ನೃತ್ಯಗೀತಗಳನ್ನು ನಮಗೆ ಬೇಕಾದ ವಿಗ್ರಹದ ಮುಂದೆ ನಡೆಸುತ್ತೇವೆಂದು ಹರಕೆ ಹೇಳಿಕೊಂಡಿದ್ದೇವೆ" ಎಂದಳು ಮೋಹನೆ.

ಆ ಮಾತುಗಳಿಂದ ಜನರೆಲ್ಲಾ ಪರವಶರಾಗಿ ಮಂತ್ರಿಸಿದ ಹಾಗೆ ಅಕ್ಕಪಕ್ಕಗಳಿಗೆ ಸರಿದು ದೂರದೂರ ನಿಂತು ಅವರಿಗೆ ವಿಶಾಲವಾದ ದಾರಿ ಮಾಡಿದರು.

(ಮುಂದಿನ ಸಂಚಿಕೆಯಲ್ಲಿ ಮುಗಿಯುತ್ತದೆ)





ಶ್ರೀಮಂತ ಸುಂದರಿಯರಾದ ಪ್ರಸನ್ನವದನೆಯೂ, ಮೋಹನೆಯೂ ಸಾಲುಸಾಲಾಗಿರುವ ವಿಗ್ರಹಗಳನ್ನು ನೋಡುತ್ತಾ, ಚಿತ್ರಶಾಲೆಯೊಳಗೆಲ್ಲಾ ತಿರುಗಿದರು. ಕಡೆಗೆ ನಿರಾಶೆಯಿಂದ ಹಿಂದಿರುಗುತ್ತಿರಲು, ಹೊರಗೆ ಮಕ್ಕಳು ಮಾಡುವ ಕೋಲಾಹಲವು ಅವರಿಬ್ಬರ ಗಮನವನ್ನು ಸೆಳೆಯಿತು. ಬಿರಬಿರನೆ ಅಲ್ಲಿಗೇ ಹೋದರು.

ಅದನ್ನು ನೋಡಿ ಯಾರೋ ಒಬ್ಬರು, "ಅಲ್ಲಿರುವುದು ಕಡಿಮೆ ತರಗತಿಯ ಬಣ್ಣದ ವಿಗ್ರಹ, ಅಷ್ಟೇ" ಎಂದರು. ಆ ಮಾತು ಇಬ್ಬರು ಸುಂದರಿಯರ ಕಿವಿಗೂ ಬಿದ್ದಿತು.

ಅದನ್ನು ಕೇಳಿ ಮೋಹನೆ ಉತ್ಸಾಹದಿಂದ "ನಡೀ ಅಕ್ಕಾ. ಅದೇನೋ ಕಡಿಮೆ ಬೆಲೆಗೇ ಸಿಗುವ ಹಾಗಿದ್ದರೆ ಒಳ್ಳೇದು ತಾನೆ!" ಎಂದು ಪ್ರಸನ್ನವದನೆಯ ಕೈಯನ್ನು ಹಿಡಿದು ಆ ಕಡೆಗೆ ಕರೆದೊಯ್ದಳು. ಅದನ್ನು ನೋಡಿ ಪ್ರದರ್ಶನಶಾಲೆಯೊಳಗೆ ಒಬ್ಬರೂ ಉಳಿಯದಂತೆ, ಎಲ್ಲರೂ ಕುತೂಹಲದ ಆಕರ್ಷಣೆಗೊಳಗಾದವರಂತೆ ಅವರನ್ನನುಸರಿಸಿಕೊಂಡು ಹೊರಗೆ ಬಂದರು.

ಪ್ರಸನ್ನವದನೆ ಸರಸರನೆ ಹೋಗಿ ವರಹಗಳ ಚೀಲವನ್ನು ವಿಗ್ರಹದ ಮುಂದೆ ಇಟ್ಟಳು. ಆಮೇಲೆ ತನ್ನ ಕೊರಳಲ್ಲಿರುವ, ಮರಕತ ರತ್ನಗಳ ಹಾರವನ್ನು ತೆಗೆದು, ತಲೆತಗ್ಗಿಸಿ ಕುಳಿತುಕೊಂಡಿದ್ದ ವಿಚಿತ್ರನ ಕೈಯನ್ನು ಹಿಡಿದು ಕಂಕಣ ತೊಡಿಸುವ ಹಾಗೆ ಸುತ್ತಿದಳು.

ಅದನ್ನು ನೋಡಿ ಜನರು, "ಇವರಿಗೇನೋ ಹುಚ್ಚು ಹಿಡಿದಿದೆ. ಪ್ರದರ್ಶನಶಾಲೆಯೊಳಗಿನ ಮಹಾ ಮಹಾ ವಿಗ್ರಹಗಳನ್ನು ಬಿಟ್ಟು, ಇದರ ಮುಂದೆ ಹಣ ಸುರಿಯುತ್ತಿದ್ದಾರೆ!" ಎಂದರು.

ಪ್ರಸನ್ನವದನೆ ಆ ಮಾತು ಹೇಳಿದವರನ್ನು ನೋಡಿ, "ಇಲ್ಲಿರುವ ಈ ವಿಗ್ರಹದಲ್ಲಿ ಯಾವ ವಿಶೇಷವನ್ನು ನೋಡಿ ಬಾಲಬಾಲಕಿಯರೆಲ್ಲಾ ಆನಂದಪಡುತ್ತಿದ್ದಾರೋ ಆ ವಿಶೇಷವೇ ನಮ್ಮನ್ನು ಮುಗ್ಧಗೊಳಿಸಿತು. ಬಾಲರ ಮೆಚ್ಚುಗೆಯೇ ಬ್ರಹ್ಮನ



ಮೆಚ್ಚುಗೆ. ಬಾಲರು ದೇವರಿಗೆ ಸಮಾನರೆಂದು ಹೇಳುತ್ತಾರಲ್ಲವೆ ? ಆದುದರಿಂದಲೇ ಅವರ ಆರಿಕೆಯನ್ನೇ ಶ್ರೇಷ್ಠವೆಂದುಕೊಂಡು ನಾವು ಶಿರಸಾ ವಹಿಸಿಕೊಂಡೆವು." ಎಂದಳು.

"ಕೇವಲ ಮಣ್ಣಿನ ಶಿಲ್ಪದಲ್ಲಿ ಎಲ್ಲಿಲ್ಲದ ಸೌಂದರ್ಯವನ್ನೂ, ಅಮೋಘತೆಯನ್ನೂ, ಜೇಡಿ, ಸುಣ್ಣ, ಮಸಿ, ಅರಸಿನ, ಕುಂಕುಮಗಳಿಂದಲೇ ಮೂಡಿಸಿ, ಮೂರ್ತಿಮಂತವಾಗುವಂತೆ ತಿದ್ದಿ ತೀಡಿದ ಈ ಬಾಲ ಚಿತ್ರಕಾರನ ಪ್ರತಿಭೆ ಅತ್ಯಮೋಘ ವಾಗಿದೆ. ನಾವು ಕೊಡುವ ಬಹುಮಾನವು ಅತ್ಯಲ್ಪ" ಎಂದಳು ಮೋಹನೆ.

ಆ ಸಮಯದಲ್ಲಿ ವಿಚಿತ್ರನ ವೃದ್ಧ ಜನನೀ ಜನಕರು ಅಲ್ಲಿಗೆ ಅಕಸ್ಮಾತ್ತಾಗಿ ಬಂದರು.

"ಕಂದಾ, ಪಾವನಾ ! ವಾತಾಪೀಗಣಪತಿಯ ಕೃಪೆಯಿಂದ ನಮ್ಮ ಅನ್ವೇಷಣೆ ಫಲಿಸಿತು. ಮನೆ ಬಿಟ್ಟು ಹೋದ ಮೇಲೆ ನಿನ್ನನ್ನು ಎಲ್ಲೆಲ್ಲೋ ಹುಡುಕಿದೆವು. ಇಷ್ಟು ದೊಡ್ಡವನಾಗಿ ನಮ್ಮ ಕಣ್ಣಿಗೆ ಬಿದ್ದು ಆತ್ಮಾನಂದಪಡಿಸಿದಿ ! ನಿನ್ನನ್ನು ಪಡೆದ ನಮ್ಮ ಜನ್ಮ ಸಾರ್ಥಕವಾಯಿತು." ಎಂದು ತಂದೆತಾಯಿಯರು ಕುಮಾರನನ್ನು ಆಲಿಂಗಿಸಿ ಕೊಂಡು ಆನಂದಭಾಷ್ಪ ಸುರಿಸಿದರು.

ಆಗ ವಿಚಿತ್ರನು ಬಾಲ್ಯದಿಂದ ತಾರುಣ್ಯಕ್ಕೆ ಕಾಲಿಟ್ಟಿದ್ದನು. ತಂದೆತಾಯಿಯರನ್ನು ನೋಡಿ ಅವನಿಗಾದ ಆನಂದ ಅಷ್ಟಿಷ್ಟಲ್ಲ. ಹಿಂದಿನ ಸಂಗತಿ ಗಳೆಲ್ಲಾ ಅವನ ನೆನಪಿಗೆ ಬಂದುವು. ತನ್ನ ನಿಜವಾದ ಹೆಸರು ಏನೆಂಬುದೂ ಅವನಿಗೆ ಈಗ ತಿಳಿಯಿತು.

ತಾಯಿತಂದೆ ಮಗಂದಿರ ಈ ಸಮಾಗಮವನ್ನು ನೋಡಿ ಪ್ರಸನ್ನವದನೆ ಅತ್ಯಂತ ತೃಪ್ತಿಯಿಂದ, "ಈಗ ತಾನೇ ನಮ್ಮ ಕೋರಿಕೆ ನೆರವೇರಿತು. ಇನ್ನು ನಾವು ಸಂತೃಪ್ತಿಯಿಂದ ನಮ್ಮ ಹರಕೆ ಸಲಿಸ ಬಹುದು. ಈಗಲೇ ಇಲ್ಲಿಯೇ ಅದನ್ನೂ ಸಲಿಸಿ ಬಿಡುತ್ತೇವೆ" ಎಂದಳು ಗೆಜ್ಜೆಯ ಕಾಲುಗಳನ್ನು ಝಣತ್ಕರಿಸುತ್ತ.

ಕೆಲವೇ ನಿಮಿಷಗಳಲ್ಲಿ ಅಲ್ಲಿ ಕೂಡಿದ ಜನರು ಅಲಂಕಾರ ಚಪ್ಪರವನ್ನೆಬ್ಬಿಸಿ, ಭವ್ಯವಾದ ವೇದಿಕೆ ಯನ್ನು ನಿರ್ಮಿಸಿಬಿಟ್ಟರು. ಪ್ರಸನ್ನವದನೆ ವಿನಾಯಕ ವಿಗ್ರಹವನ್ನು ಅಂಟಿಕೊಂಡಂತೆ ಕುಳಿತು ತಾಳ ಗಳನ್ನು ಬಾರಿಸುತ್ತ "ತಾಂಡವ ನೃತ್ಯಕರೀ ಗಜಾನನ......" ಎಂದು ಕೀರ್ತನೆಯನ್ನು ಪ್ರಾರಂಭಿ ಸಿದಳು. ಆ ಧ್ವನಿಯಿಂದ ನಾಲ್ಕು ಸುತ್ತಲೂ ಸೇರಿದ ಜನರೆಲ್ಲ ನಿಶ್ಶಬ್ದರಾದರು.

ವೇದಿಕೆಯ ಮೇಲೆ ಮೋಹನೆ ವಿದ್ಯುಲ್ಲತೆಯ ಹಾಗೆ ನೃತ್ಯಮಾಡುತ್ತಿರಲು, ಜನರು ಆನಂದ ತರಂಗಗಳಿಂದ ಪರವಶರಾಗಿ ಓಲಾಡತೊಡಗಿದರು.

ಪ್ರಸನ್ನವದನೆಯ ಗಾನವು ಗಜಾನನ ಪಂಡಿತನ ಕಿವಿಗೂ ಕೇಳಿಸಿತು. ಆಗ ಗಜಾನನ ಪಂಡಿತನು ಶತಾಧಿಕ ವೃದ್ಧನಾಗಿ ಮನೆಬಿಟ್ಟು ಕದಲಲಾಗದ

ಸ್ಥಿತಿಯಲ್ಲಿದ್ದನು. ಅಂತಹವನಿಗೆ ಎಲ್ಲಿಲ್ಲದ ಶಕ್ತಿ ಸತ್ವದೊಂದಿಗೆ ಕುತೂಹಲವೆದ್ದಿತು. ಅವನು ಓಡು ನಡಿಗೆಯಿಂದ ಚಪ್ಪರದ ವರೆಗೆ ಬಂದು, ಪ್ರಸನ್ನ ವದನೆಯನ್ನು ನೋಡಿ, ಕೈಗಳನ್ನೆತ್ತಿ ಜೋಡಿಸಿ ಸಾಷ್ಟಾಂಗವಾಗಿ ಬಿದ್ದು ಹಾಗೆಯೇ ಧ್ಯಾನಮುದ್ರೆ ಯಲ್ಲಿ ಇದ್ದುಬಿಟ್ಟನು.

ಮೋಹನೆ ನೃತ್ಯಮಾಡುತ್ತ ಮಾಡುತ್ತ, ವಿಚಿತ್ರನು ಮಾಡಿಟ್ಟ ದೊಡ್ಡದಾದ ವಿಗ್ರಹವನ್ನು ಅವಲೀಲೆ ಯಾಗಿ ಎತ್ತಿ ಹೆಗಲಿನ ಮೇಲೆ ಇಟ್ಟುಕೊಂಡಳು. ಅದನ್ನು ನೋಡಿ ಎಚ್ಚೆತ್ತುಕೊಂಡ ಜನರು "ಅಷ್ಟು ಭಾರ ಹೊರಲು ನಿನ್ನಿಂದಾಗದಮ್ಮಾ!" ಎಂದು ಕೂಗಿದರು.

ಅದಕ್ಕೆ ಉತ್ತರವಾಗಿ ಮೋಹನೆ "ನನಗೆ ಇದನ್ನು ಹೊತ್ತು ಹೊತ್ತು ಅಭ್ಯಾಸ ತಾನೇ!" ಎಂದಳು ನಗುತ್ತಾ. ಹಾಗೆ ಅವಳು ಆ ವಿಗ್ರಹವನ್ನು ಹೊತ್ತುಕೊಂಡು ನಾಟ್ಯದ ನಡಿಗೆಯಲ್ಲಿಯೇ ಹೊರಟಳು. ಜನರು ಕೂಡಾ ಮಂತ್ರಮುಗ್ಧರಾಗಿ ಅವಳ ಹಿಂದೆಯೇ ಹೊರಟರು. ಆ ಗಲಾಟೆಯಲ್ಲಿ ಯಾವಾಗಲೋ ಮಾಯವಾಗಿ ಹೋದ ಪ್ರಸನ್ನ ವದನೆಯನ್ನು ಯಾರೂ ಗಮನಿಸಲಿಲ್ಲ.

ಧ್ಯಾನಮುದ್ರೆಯಲ್ಲಿದ್ದ ಗಜಾನನ ಪಂಡಿತನು ಕಣ್ಣು ತೆರೆದನು. ಇದಿರಿನಲ್ಲಿ ವಿಗ್ರಹವಿದ್ದ ಜಾಗದಲ್ಲಿ ವರಹ ಗಳಿಂದ ತುಂಬಿ ಹೊಳೆಯುವ ಬಂಗಾರದ ಜರತಾರೀ ಚೀಲವಿರುವುದನ್ನು ನೋಡಿದನು. ಆತನ ಪಾದ ಪ್ರದೇಶದಲ್ಲಿ ಕೈಮುಗಿದು ವಿನೀತನಾಗಿ ಕುಳಿತಿದ್ದ ವಿಚಿತ್ರನನ್ನು ನೋಡಿ "ನೋಡಿದೆಯಾ ಕಂದಾ! ಆಲಯದ ಮಂಟಪ, ಕಂಬ ಗೋಡೆಗಳಲ್ಲೆಲ್ಲಾ ಗಣೇಶಲೀಲೆಯ ಚಿತ್ರಗಳನ್ನು ರಚಿಸಿ ಶೋಭಾಯ ಮಾನ ಮಾಡು. ಅದಕ್ಕೆ ಬೇಕಾದ ಧನವನ್ನು ಪ್ರಸನ್ನವದನನಾದ ವಿಘ್ನೇಶ್ವರನೇ ನಿನಗೆ ಒದಗಿಸಿ ದ್ದಾನೆ ನೋಡು!" ಎಂದು ಹೇಳಿ ಎದ್ದನು.



ಗಜಾನನ ಪಂಡಿತನೂ, ವಿಚಿತ್ರನೂ ಮೆರವಣಿಗೆ ಯಾಗಿ ಹೋಗುತ್ತಿರುವ ಜನರೊಂದಿಗೆ ಕೂಡಿದರು.

ಮೋಹನೆ ವಿಗ್ರಹವನ್ನು ಹೊತ್ತುಕೊಂಡು ಆಲಯದ ಪುಷ್ಕರಣಿಯ ಬದಿಗೆ ಹೋದಳು. ಮೆಟ್ಟಿಲುಗಳನ್ನು ಇಳಿಯುತ್ತಾ ಒಮ್ಮಿಂದೊಮ್ಮೆಗೇ ಮಾಯವಾದಳು. ಅವಳಿಗೆ ಬದಲಾಗಿ ಇಲಿಯೊಂದು ಗಣೇಶ ವಿಗ್ರಹವನ್ನು ಹೊತ್ತುಕೊಂಡು ನೀರಿನ ಮೇಲೆ ಓಡಿ ಮುಳುಗಿ ಮಾಯವಾಯಿತು. ಆ ದಿನವೇ ವಿಘ್ನೇಶ ವಿಗ್ರಹವನ್ನು ಜಲವಿಸರ್ಜನ ಮಾಡುವ ಪರ್ವದಿನವಾಗಿತ್ತು.

ಇಲಿ ವಿಗ್ರಹದೊಂದಿಗೆ ಮುಳುಗಿದ ಜಾಗದಲ್ಲಿ ಕೋಟಿ ಪೂರ್ಣಿಮೆಯ ಬೆಳುದಿಂಗಳ ಪ್ರಕಾಶವು ಬೆಳಗಿತ್ತು. ಆ ಕಾಂತಿಯಲ್ಲಿ ಅಭಯಹಸ್ತದಿಂದ ಆಶೀರ್ವಾದ ತೋರುವ ವಿಘ್ನೇಶ್ವರನು ಸಾಕ್ಷಾತ್ಕಾರ ನಾಗಿ ಎಲ್ಲರಿಗೂ ಒಮ್ಮೆ ತೋರಿ, ಮರುಕ್ಷಣವೇ ಅಂತರ್ಧಾನನಾದನು.



ಗಜಾನನ ಪಂಡಿತನು ವಿಚಿತ್ರನನ್ನು ಗಾಢಾಲಿಂಗನ ಮಾಡಿ, "ಕಂದಾ, ಪಾವನಾ! ನಿನ್ನ ಮೂಲಕವಾಗಿ ವಾತಾಪಿ ನಗರಕ್ಕೆ ಪಾವನತೆ ಪ್ರಾಪ್ತವಾಯಿತು. ಇನ್ನು ನಿನ್ನನ್ನು ಪಾವನ ಮಿಶ್ರನೆಂದು ಕರೆಯುತ್ತೇನೆ." ಎಂದನು.

ಹೀಗೆ ಪಾವನ ಮಿಶ್ರನು ಕಥೆಯನ್ನು ಹೇಳುತ್ತ ಮುಂದುವರಿಸಿ, "ಗರ್ಭಾಲಯ ಮುಖದ್ವಾರದ ಮೇಲೆ ಮಹಾಭಾರತ ರಚನೆಯ ಗಣಪತಿ..." ಎನ್ನುವುದನ್ನು ಕೇಳಿದ ಕೂಡಲೇ ಯುವಚಿತ್ರಕಾರನು ಪಾವನ ಮಿಶ್ರನ ಪಾದಗಳನ್ನು ಬಿಗಿ ಹಿಡಿದುಕೊಂಡು, "ಗುರುದೇವಾ! ನಿಮ್ಮ ಪಾವನ ಚರಿತ್ರೆಯನ್ನು ಕೇಳಿ ನಾನು ಧನ್ಯನಾದೆನು. ನನ್ನ ಹೆಸರು ಆನಂದನೆಂದು. ನಿಮ್ಮ ಪಾವನ ನಾಮಾಕ್ಷರಗಳಲ್ಲಿರುವ ಮೊದಲನೆಯ ಎರಡು ಅಕ್ಷರಗಳನ್ನು ಬದಲಿಸಿ ನನ್ನ ಹೆಸರಿನ ಮುಂದೆ ಸೇರಿಸಿ 'ಪವಾನಂದ' ಅನಿಸಿಕೊಳ್ಳಲು ಅನುಮತಿ ನೀಡಬೇಕು. ಈ ಆಲಯ ಮಂಟಪವು ಪಾವನ ಚಿತ್ರಾಲಯವಾಗಿದೆ. ಈ ಪಾವನ ಮಂಟಪದ ಚಿತ್ರಗಳಿಗೆ ನಾನು ಪ್ರತಿಕೃತಿಗಳನ್ನು ರಚಿಸುತ್ತೇನೆ. ಮುಂದಿನವರಿಗಾಗಿ ನೀವು ಹೇಳಿದ ಕಥೆಗಳನ್ನೆಲ್ಲಾ ಹೇಳುತ್ತೇನೆ. ಅನುಗ್ರಹಿಸಿರಿ ಗುರೂ!" ಎಂದು ತಲೆಬಾಗಿದನು.

ಹೊಳೆಯುವ ಬೆಳ್ಳಿಯ ಕೂದಲುಗಳಿಂದ, ನಿರಿಗೆ ಬಿದ್ದ ವಿಶಾಲ ಫಾಲದಿಂದ, ವಾರ್ಧಕ್ಯವು ಮೇಲೆ ಬಿದ್ದರೂ ಮನಸ್ಸಿಗೆ ವಾರ್ಧಕ್ಯವನ್ನು ಮುಟ್ಟಲು ಬಿಡದ ಪಾವನ ಮಿಶ್ರನು, ಮಂದಹಾಸ ಬೀರಿ ಮತ್ತೆ ಹೇಳತೊಡಗಿದನು.

ಭಗವಾನ್ ವ್ಯಾಸನು ತಾನು ಹೇಳುವಂತಹ ಮಹಾಭಾರತವನ್ನು ಬರೆಯಬಲ್ಲ ಸಮರ್ಥ ಲೇಖಕನು ಯಾರೆಂದು ಆಲೋಚಿಸುತ್ತಿದ್ದನು. ಅದನ್ನು ತಿಳಿದು ಬ್ರಹ್ಮನು ಅವನ ಮುಂದೆ ಸಾಕ್ಷಾತ್ಕರಿಸಿ, ವಿಘ್ನೇಶ್ವರನನ್ನು ಲೇಖಕನಾಗಿ ಇಟ್ಟುಕೊಳ್ಳುವಂತೆ ಸೂಚಿಸಿ ಮಾಯವಾದನು.

ಬ್ರಹ್ಮದೇವನ ಆದೇಶದಂತೆ ವ್ಯಾಸನು ವಿಘ್ನೇಶ್ವರನನ್ನು ಧ್ಯಾನಿಸುತ್ತ ಪ್ರಾರ್ಥಿಸತೊಡಗಿದನು.

ವಿಘ್ನೇಶ್ವರನು ಪ್ರಸನ್ನನಾಗಿ ವ್ಯಾಸನ ಮುಂದೆ ಪ್ರತ್ಯಕ್ಷನಾಗಿ, "ಅಯ್ಯಾ, ವ್ಯಾಸಮಹರ್ಷಿ! ಮಹಾಭಾರತವನ್ನು ಪೂರ್ತಿ ಯೋಚಿಸಿ ನಿನ್ನ ಪಾಡಿಗೆ ಹೇಳಿಕೊಂಡು ಹೋಗಬೇಕೇ ಹೊರತು ನನ್ನ ಕಡೆಗೆ ನೋಡಕೂಡದು" ಎಂದು ಹೇಳಿ ಬರೆಯಲು ಕುಳಿತೇಬಿಟ್ಟನು.

ವಿಘ್ನೇಶ್ವರನು ತನ್ನ ದಂತದ ತುಂಡನ್ನು ಕಂಠವಾಗಿ ಹಿಡಿದುಕೊಂಡು, ತಾಲಪತ್ರದ ಮೇಲೆ ತಾಗಿಸಿದ ಅದರ ಮೊನೆಯನ್ನು ಎತ್ತದೆ ಬರೆಯುತ್ತಾ ಹೋಗುತ್ತಿರಲು, ವ್ಯಾಸನು ಅರ್ಧನಿಮೀಲಿತ ನೇತ್ರಗಳಿಂದ ಧ್ಯಾನಮಾಡುತ್ತ, ತುಟಿಯಲುಗಿಸಿಕೊಂಡು ನಿರ್ವಿರಾಮವಾಗಿ ಹೇಳುತ್ತ ಹೋದನು.



ಅವರ ಇದಿರಿನಲ್ಲಿ ಹಿಮಾಲಯ ಶಿಖರಗಳಿದ್ದುವು. ಒಂದು ಹಿಮಶಿಖರಾಗ್ರದಿಂದ ಬೀಳುತ್ತಿದ್ದ ಜಲಪಾತವು ಮಧ್ಯಮಾವತಿ ರಾಗಾಲಾಪನೆಯ ಮಂದ್ರ ಗಂಭೀರ ಧ್ವನಿ ನೇಪಥ್ಯ ಶ್ರುತಿಯಾಗಿ ಹೊರಡುತಿತ್ತು. ದೇವದಾರು ವೃಕ್ಷಗಳ ವನವು ತಲೆಯಾಡಿಸುತ್ತಿದ್ದಿತು. ಜಲ ಜಲನೆ ಹರಿಯುವ ನದಿಗಳ ಅನಂತ ರಾಗಮಾಲಿಕೆಗಳು ಆನಂದಲಹರಿಯಂತಾದುವು. ಮಹಾಭಾರತ ರಚನೆ ಧಾರಾವಾಹಿಯಾಗಿ ನಿರ್ವಿರಾಮವಾಗಿ ಸಾಗುತ್ತಿದ್ದಿತು.

ಹುಟ್ಟುಗುರುಡನಾದ ಧೃತರಾಷ್ಟ್ರನು ಹಸ್ತಿನಾಪುರದ ಸಿಂಹಾಸನವನ್ನು ಅಲಂಕರಿಸಿದನು. ಅವನ ತಮ್ಮ ಪಾಂಡುರಾಜನು ಸಾಮ್ರಾಜ್ಯಪಾಲನೆ ಹೊತ್ತುಕೊಂಡು ತುಂಬಾ ವಿಸ್ತರಿಸಿದನು. ಪಾಂಡುರಾಜನಿಗೆ ಪಂಚಪಾಂಡವರೂ, ಧೃತರಾಷ್ಟ್ರನಿಗೆ ನೂರು ಮಂದಿ ಕೌರವರೂ ಪುತ್ರರಾದರು.

ಚಿಕ್ಕಂದಿನಿಂದಲೇ ಕೌರವ ಪಾಂಡವರ ನಡುವೆ ಇದ್ದ ಅಸೂಯೆ ವರ್ಧಿಸಿಕೊಂಡೇ ಹೋಯಿತು. ವ್ಯಾಸನು ಹೇಳುತ್ತಿರಲು, ವಿಘ್ನೇಶ್ವರನು ಬರೆಯುತ್ತಿರಲು, ಸಭಾಪರ್ವವು ಸಾಗತೊಡಗಿತು.

ಮಯ ಸಭೆಯಲ್ಲಿ ಪರಾಭವಗೊಂಡು ಅವಮಾನಿತನಾದ ದುರ್ಯೋಧನನು, ಪ್ರತೀಕಾರವಾಗಿ ಪಾಂಡವರನ್ನೂ, ಅವರ ಹೆಂಡತಿ ದ್ರೌಪದಿಯನ್ನೂ ಜೂಜಾಟದಲ್ಲಿ ಗೆದ್ದುಕೊಂಡು, ದ್ರೌಪದಿಯ ವಸ್ತ್ರಾಪಹರಣ ಮಾಡಿಸುವಾಗ, ಭೀಮನು ದುರ್ಯೋಧನನ ತೊಡೆಗಳನ್ನು ಒಡೆಯುವನೆಂದು, ದುಶ್ಶಾಸನನ ರಕ್ತವನ್ನು ಕುಡಿಯುವನೆಂದು ಸಿಂಹ ಗರ್ಜನೆ ಮಾಡಿದನು.

ಪಾಂಡವರು ಜೂಜಿನ ನಿಯಮದಂತೆ ವನವಾಸಕ್ಕೆ ಹೋದರು. ಅದನ್ನು ಮುಗಿಸಿ ವಿರಾಟರಾಜನ ಆಸ್ಥಾನದಲ್ಲಿ ಅಜ್ಞಾತವಾಸಕ್ಕೆ ತೊಡಗಿದರು. ಸೈರಂಧ್ರಿಯಾಗಿದ್ದ ದ್ರೌಪದಿಯನ್ನು ಕೀಚಕನು ಅವಮಾನಿಸಿ, ಭೀಮನ ಕೈಯಲ್ಲಿ ಮುದ್ದೆಯಾಗಿ ಬಿದ್ದನು. ಉತ್ತರಗೋಗ್ರಹಣದಲ್ಲಿ ಬೃಹನ್ನಳೆ ವಿಜಯಿಯಾಗಿ, ಕೌರವಸೇನೆಯ ಧೂಳು ಹಾರಿಸಿದನು. ಮಹಾಭಾರತದಲ್ಲಿ ಸುಂದರಕಾಂಡವಾಗಿ ವಿರಾಟಪರ್ವವು ಸಾಗಿತು.

ಹಿಮಗಿರಿ ಜಲಪಾತವು ಕಲ್ಯಾಣೀರಾಗಕ್ಕೆ ತಿರುಗಿತು. ಅಭಿಮನ್ಯುವಿಗೆ ಉತ್ತರೆಯೊಂದಿಗೆ ವಿವಾಹವಾಯಿತು. ಭಗವಾನ್ ಕೃಷ್ಣನು ರಾಯಭಾರವನ್ನು ಕೈಕೊಂಡು, ಪಾಂಡವರಿಗೆ ಐದು ಊರುಗಳನ್ನು ಕೊಟ್ಟರೆ ಸಾಕೆಂದು ಹೇಳಿದನು. ದುರ್ಯೋಧನನು ಸೂಜಿಮೊನೆಯ ಸ್ಥಳವನ್ನು ಕೂಡಾ ಕೊಡಲಾರೆನೆಂದು ಹೇಳಿಬಿಟ್ಟನು.

ಯುದ್ಧವು ಅನಿವಾರ್ಯವಾಯಿತು.-ಹಿಮಾಲಯದ ಝರಿ ಕದನ ಕುತೂಹಲ ರಾಗವನ್ನು ಹಿಡಿಯಿತು. ಹಿಮ ಶಿಖರಗಳು ಜರಿದು ಬೀಳುತ್ತಿವೆಯೋ ಎಂಬಂತೆ ತೋರಿತು. ಹಿಮಾನೀ ನದಿಗಳು ಕುದುರೆಗಳ ಹಾಗೆ ದೌಡಾಯಿಸತೊಡಗಿದುವು.



ಕೃಷ್ಣನು ಅರ್ಜುನನಿಗೆ ರಥಸಾರಥಿಯಾದನು. ಅವನು ಅರ್ಜುನನಿಗೆ ಉಪದೇಶಿಸಿದ ನುಡಿಮುತ್ತು ಗಳು ಭಗವದ್ಗೀತೆಯಾದುವು. ಜಲಪಾತವು ಸಾಮ, ಸೌರಾಷ್ಟ್ರ, ದೇವಗಾಂಧಾರ ರಾಗಗಳನ್ನು ಶ್ರುತಿಸಿ ಕೊಂಡಿದ್ದಿತು.

ಭೀಷ್ಮನು ಶರಶಯ್ಯೆಯಲ್ಲಿ ವಿಶ್ರಮಿಸಿದನು. ದ್ರೋಣನು ಪದ್ಮವ್ಯೂಹವನ್ನು ರಚಿಸಿದನು. ಹತ್ತು ಮಂದಿ ಸೇರಿದ ಹೊರತು ಅಭಿಮನ್ಯುವನ್ನು ಕೊಲ್ಲ ಲಾಗಲಿಲ್ಲ. ಸುಭದ್ರೆಯ ಪುತ್ರಶೋಕದಂತೆ ಜಲ ಪಾತವು ಮುಖಾರಿ ರಾಗವನ್ನು ಸೂಸಿತು.

ಅರ್ಜುನನು ಕೋಪೋದ್ರೇಕದಿಂದ ವಿಜೃಂಭಿ ಸಿದನು. ಧೃಷ್ಟದ್ಯುಮ್ನನಿಂದ ದ್ರೋಣನ ಅಂತ್ಯ ವಾಯಿತು. ಅನೇಕ ಅಂತರಾಯಗಳಿಂದ ನಿರ್ಬಂಧಿಸ ಲ್ಪಟ್ಟ ಕರ್ಣನನ್ನು ಕೊಂದ ಮೇಲೆ, ಅವನನ್ನೇ ನಂಬಿದ್ದ ದುರ್ಯೋಧನನು ಪೂರ್ತಿ ಏಕಾಂಗಿ ಯಂತಾದನು. ಭೀಮನು ದುಶ್ಶಾಸನನ್ನು ಕೊಂದು, ದುರ್ಯೋಧನನ ತೊಡೆಗಳನ್ನು ಗದಾಘಾತದಿಂದ ಮುರಿದು ಹಾಕಿದನು.

ಜೂಜಾಟದಲ್ಲಿ ಸೋತು ಹೋದ ಧರ್ಮ ರಾಜನು, ತಮ್ಮಂದಿರೊಂದಿಗೆ ವಿಜಯದುಂದುಭಿ ಯನ್ನು ಮೊಳಗಿಸಿದನು.

ಕೃಷ್ಣನು ತನ್ನ ಅವತಾರವನ್ನು ಮುಗಿಸಿದನು. ಪಾಂಡವರು ಪರೀಕ್ಷಿತನಿಗೆ ಪಟ್ಟಕಟ್ಟಿ, ದ್ರೌಪದಿ ಯೊಂದಿಗೆ ಮಹಾಪ್ರಸ್ಥಾನಕ್ಕೆ ಹೊರಟರು.

ಧರ್ಮಕ್ಕೆ ಸಾವಿಲ್ಲವೆಂದು, ಕಡೆಗೆ ನಿಲ್ಲುವುದು ಧರ್ಮವೇ ಎಂದು ಜಗತ್ತಿಗೆ ಎತ್ತಿ ತೋರಿಸುವಂತೆ ಧರ್ಮರಾಜನು ಮಹಾ ಮೇರುವಿನ ಶಿಖರಾಗ್ರ ದಲ್ಲಿ ನಿಂತುಕೊಂಡನು. ಆಗ ಸುತ್ತುಮುತ್ತಲೂ ಒಂದು ಬಗೆಯ ಶಾಂತತೆ ಹರಡುತ್ತಾ, ಜಲಪಾತದ ಧ್ವನಿ ಕ್ಷೀಣಿಸುತ್ತಾ ಬಂದಿತು. ನೋಡ ನೋಡುತ್ತಿರಲು, ಸುತ್ತುಮುತ್ತಲೂ ಗಂಭೀರ ನಿಶ್ಶಬ್ದವು ತುಂಬಿಕೊಂಡಿತು. ವ್ಯಾಸನು ಹೇಳುವುದನ್ನು ವಿಘ್ನೇಶ್ವರನು ಬರೆಯುತ್ತಿರುವನೋ ಅಥವಾ ವಿಘ್ನೇಶ್ವರನು ಬರೆಯುವುದನ್ನು ವ್ಯಾಸನು ಓದುತ್ತಿದ್ದಾನೋ ಎಂಬ ಹಾಗೆ ಚಕಚಕನೆ ಮಹಾ ಭಾರತದ ರಚನೆಯಾಯಿತು.

ಸತ್ಯಲೋಕದಲ್ಲಿ ಪದ್ಮಾಸನಸ್ಥನಾಗಿದ್ದ ಬ್ರಹ್ಮ ದೇವನು ಸಂತೃಪ್ತನಾಗಿ ಕಿರುನಗು ಸೂಸುತ್ತ ಸರಸ್ವತಿಯನ್ನು ನೋಡಿ ತಲೆಯೊಲಿದನು. ಅದನ್ನು ಅರ್ಥಮಾಡಿಕೊಂಡ ಸರಸ್ವತಿ ವೀಣೆಯನ್ನು ಮೀಟುತ್ತ ಶ್ರೀ ರಾಗವನ್ನು ಹೊರಡಿಸಿದಳು.

ಮಹಾಭಾರತವು ಮುಗಿಯುತ್ತಾ ಬರುತ್ತಿದೆ. ಕೊನೆಯ ಪರ್ವವು ಸಾಗುತ್ತಿದೆ. ಸರಸ್ವತೀದೇವಿ ಸತ್ಯಲೋಕದಿಂದ ಮಂಗಳಾಚರಣೆಯಾಗಿ ಆಲಾಪಿ ಸುವ ಶ್ರೀರಾಗದ ವೀಣಾನಾದವು ತಾನು ಹೇಳುವ ಕಥೆಗೆ ಅಂತರಾಯವೆನಿಸುವಂತೆ ವ್ಯಾಸನ ಕಿವಿ ಯೊಳಗೆ ಝೇಂಕರಿಸತೊಡಗಿತು.

ಇನ್ನೂ ಹೇಳಬೇಕಾದುದು ಎಷ್ಟೋ ಇದೆ. ವ್ಯಾಸನು ಕ್ಷಣಮಾತ್ರ ತಡೆದು ಕಣ್ಣು ಬಿಡಿಸಿ ಲೇಖಕನನ್ನು ನೋಡಿದನು. ಮರುಕ್ಷಣದಲ್ಲಿ ವಿಘ್ನೇಶ್ವರನು ಕಾಣಲಿಲ್ಲ, ಆಗಲೇ ಅಂತರ್ಧಾನನಾಗಿ ಬಿಟ್ಟಿದ್ದನು.

ಅಲ್ಲಿ ಬರೆದು ಅಣಿಯಾಗಿಟ್ಟಿದ್ದ ಮಹಾಭಾರತ ಗ್ರಂಥದ ಮೇಲೆ ಆಕಾಶದಿಂದ ಅಕ್ಷತೆಗಳು ಬೀಳುವಂತೆ, ಪುಷ್ಪಗಳು ಜಲಜಲನೆ ಉದುರಿದುವು.

ವ್ಯಾಸನು ಆತ್ಮಾತುರದಿಂದ ಗ್ರಂಥಗಳನ್ನು ಬಿಡಿಸಿ ಪರಿಶೀಲಿಸಿ ನೋಡಿದನು. ತಾನಿನ್ನೂ ಹೇಳಬೇಕಾದದನ್ನು ಕೂಡಾ ಒಂದಕ್ಷರವನ್ನೂ ಬಿಡದೆ ಸಂಪೂರ್ಣವಾಗಿ ಬರೆಯಲ್ಪಟ್ಟಿದ್ದಿತು !

ವ್ಯಾಸನು ಆನಂದಾಶ್ಚರ್ಯಗಳಿಂದ ಗಣೇಶನಿಗೆ ಮಾನಸಿಕವಾಗಿ ನಮಸ್ಕರಿಸಿಕೊಂಡಿರಲು, ಮಹತೀ ವೀಣೆಯಿಂದ ಹೊರಡುವ ಹಂಸಧ್ವನಿರಾಗವು ಕೇಳತೊಡಗಿತು. ಅಲ್ಲಿಗೆ ಬಂದ ನಾರದನು, "ಏನಿದು ಮಹಾಭಾರತ ಮಹರ್ಷೇ ! ಆಶ್ಚರ್ಯದಿಂದ ಪರವಶನಾದಂತಿದೆಯಲ್ಲಾ !" ಎಂದನು.

ವ್ಯಾಸನು ನಡೆದ ಸಂಗತಿಯನ್ನು ನಾರದನೊಂದಿಗೆ ಹೇಳಿದನು.

"ಅಂದರೆ ನೀನು ಹೇಳುವುದನ್ನು ಹೇಳುವ ಮೊದಲೇ ನಿನ್ನ ಲೇಖಕನು ಬರೆದಿದ್ದಾನೆಂದಾಯಿತು. ಅವನು ನಿನ್ನ ಮನಸ್ಸಿನೊಳಗೇ ಹೊಕ್ಕಿರುವನೆಂದಾಯಿತು." ಎಂದನು ನಾರದ.

"ಹೌದು, ನಾರದಾ, ಹಾಗೆಯೇ ನಡೆದಿದೆ. ಅಂತಹ ಲೇಖಕನು ಎಂತಹ ತಪಸ್ಸು ಮಾಡಿದರೂ ದೊರೆಯಲಾರನು. ನಾನು ಧನ್ಯನಾದೆ ! ನನ್ನ ಸಂಕಲ್ಪವು ಜಯಪ್ರದವಾಯಿತು. ಈ ಮಹಾಭಾರತವನ್ನು 'ಜಯ' ಎಂಬ ಹೆಸರಿನಿಂದಲೂ ಕರೆಯುತ್ತೇನೆ." ಎಂದು ಹೇಳಿ ವ್ಯಾಸನು ಮತ್ತೆ ವಿಘ್ನೇಶ್ವರನನ್ನು ಧ್ಯಾನಿಸಿದನು.

ಮಹಾಭಾರತ ಗ್ರಂಥಗಳ ಹತ್ತಿರ ದೊಡ್ಡದೊಂದು ಜ್ಯೋತಿ ಬೆಳಗುವುದು ಕಂಡಿತು. ಆ ಜ್ಯೋತಿ ವಿಘ್ನೇಶ್ವರನ ಆಕಾರವಾಗಿ ಮಾರ್ಪಟ್ಟಿತು. ಹೀಗೆ ಸಾಕ್ಷಾತ್ಕರಿಸಿದ ವಿಘ್ನೇಶ್ವರನು, "ವ್ಯಾಸ ಮಹರ್ಷೀ ! ನಿನ್ನ ಮಹಾಭಾರತವು ಅದ್ವಿತೀಯ ಕಾವ್ಯವಾಗಿ, ಪಂಚಮವೇದವೆಂದು ಪರಿಗಣಿಸಲ್ಪಟ್ಟು, ಕೀರ್ತಿಸಲ್ಪಡುತ್ತ ಅಮರವಾಗಿರುತ್ತದೆ" ಎಂದು ಆಶೀರ್ವಾದಮಾಡಿ, ಅಂತರ್ಹಿತನಾದನು.

ವಿಘ್ನೇಶ್ವರನಿಂದ, ಅವನ ದಂತಕಂಠದಿಂದ ಬರೆಯಲ್ಪಟ್ಟು, ಅಕ್ಷರಸಿದ್ಧಿ ಹೊಂದಿದ ಮಹಾಭಾರತವು, ಎಲ್ಲಾ ಕಾಲದಲ್ಲಿಯೂ ಸಾರಸ್ವತಾಕಾಶದಲ್ಲಿರುವ ನಕ್ಷತ್ರಗಳ ನಡುವಿನ ಚಂದ್ರನಂತೆ ಚಿರಸ್ಥಾಯಿಯಾಗಿ ನಿಂತಿರುತ್ತದೆ. —(ಸಮಾಪ್ತಿ)

